# ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ

ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ
ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು
ನಾಗರತ್ನ ಎಸ್. ಶೆಟ್ಟಿ

ಮಾರ್ಗದರ್ಶಕರು
ಡಾ। ಗಾಯತ್ರೀ ನಾವಡ

ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೧

# ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ

**ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ**
**ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ**

ಸಂಶೋಧಕರು
**ನಾಗರತ್ನ ಎಸ್. ಶೆಟ್ಟಿ**

ಮಾರ್ಗದರ್ಶಕರು
**ಡಾ। ಗಾಯತ್ರೀ ನಾವಡ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೧

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರ
ಎಂ.ಜಿ.ಎಂ. ಕಾಲೇಜು, ಅಂಚೆ ಕುಂಜಿಬೆಟ್ಟು, ಉಡುಪಿ- ೫೭೬೧೦೨

## ಪ್ರಮಾಣ ಪತ್ರ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಆಶ್ರಯದಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ' ಈ ವಿಷಯದ ಕುರಿತು ಸಂಶೋಧನ ಮಹಾಪ್ರಬಂಧವನ್ನು ಡಾ। ಗಾಯತ್ರೀ ನಾವಡರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಶೋಧನ ಮಹಾಪ್ರಬಂಧದ ವಿಷಯವನ್ನಾಗಲಿ ಅಥವಾ ಮಹಾಪ್ರಬಂಧದ ಭಾಗವನ್ನಾಗಲಿ ಇದುವರೆಗೆ ಯಾವುದೇ ವಿಶ್ವವಿದ್ಯಾನಿಲಯದ ಪದವಿಗೆ, ಡಿಪ್ಲೋಮಾ ಪರೀಕ್ಷೆಗೆ ಯಾವುದೇ ಭಾಷೆಯಲ್ಲಿ ಪ್ರಕಟನೆಗೆ ಸಲ್ಲಿಸಿಲ್ಲ ಎಂದು ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Nagarathna. S. Shetty

**ನಾಗರತ್ನ ಎಸ್. ಶೆಟ್ಟಿ**
ಸಂಶೋಧಕರು

ದಿನಾಂಕ : ೦೩-೦೩-೨೦೧೧

ಸ್ಥಳ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಕುಂಜಿಬೆಟ್ಟು, ಉಡುಪಿ

# ಯೋಗ್ಯತಾ ಪತ್ರ

ನಾಗರತ್ನ ಎಸ್. ಶೆಟ್ಟಿ ಇವರು 'ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕಿಯ ಪರಿಶ್ರಮ, ಅಧ್ಯಯನ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಪಿಎಚ್.ಡಿ ಪದವಿಗಾಗಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿಯ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ.

ಡಾ। ಗಾಯತ್ರೀ ನಾವಡ
ಮಾರ್ಗದರ್ಶಕರು

ದಿನಾಂಕ : ೦೩-೦೩-೨೦೧೧
ಸ್ಥಳ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಕುಂಜಿಬೆಟ್ಟು, ಉಡುಪಿ

# ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ

## ಪರಿವಿಡಿ

# ಅಧ್ಯಾಯ ೧

# ಪ್ರವೇಶಿಕೆ

**ಪ್ರವೇಶಿಕೆ**

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಮಹಾಕಾವ್ಯಗಳಿಗೆ ಅಗ್ರಸ್ಥಾನವಿದೆ. ವಾಲ್ಮೀಕಿ ರಾಮಾಯಣ ಸಂಸ್ಕೃತದಲ್ಲಿ ರಚಿತವಾಗಿದೆ. ಬಹುಭಾಷೆಗಳಿಗೆ ಅನುವಾದಗೊಂಡ ರಾಮಾಯಣ ಕಾವ್ಯಗಳು ಸಾಹಿತ್ಯ ಲೋಕದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿವೆ. ಪರಿಣಾಮ ಮಹಾಕಾವ್ಯಗಳ ತತ್ವ, ಆದರ್ಶಗಳು ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿಯುವಂತಾಗಿದೆ. ಭಾರತದ ಸಂಸ್ಕೃತಿ ಮತ್ತು ಸಾಹಿತ್ಯದ ಮೇಲೆ ವೇದೋಪನಿಷತ್ತುಗಳು ಪ್ರಭಾವ ಬೀರಿದಂತೆ ರಾಮಾಯಣ ಪರಂಪರೆಗಳು ಪ್ರಭಾವ ಬೀರಿವೆ. ಜನರ ಮನೋಭೂಮಿಕೆಯನ್ನು ಗಟ್ಟಿಗೊಳಿಸಿದ ಮಹಾಕಾವ್ಯಗಳಲ್ಲಿ ನೈತಿಕ ನಿಲುವಿದೆ. ಮಹಾಕಾವ್ಯಗಳ ಉದ್ದೇಶ ಕೇವಲ ಪಾತ್ರನಿರೂಪಣೆಗೆ ಸೀಮಿತಗೊಳ್ಳುವುದಿಲ್ಲ. ರಾಮ, ಕೃಷ್ಣರ ಚರಿತ್ರೆಯನ್ನು ದೈವಿಕ ನೆಲೆಯಲ್ಲಿ ಕಟ್ಟುವ ಸೀಮಿತ ಉದ್ದೇಶ ಮಹಾಕಾವ್ಯಗಳಿಗೆ ಇಲ್ಲ. ಒಂದು ಕಾಲದ ಜನರ ಜೀವನಕ್ರಮ, ಮನೋಧರ್ಮ, ಸಾಂಸ್ಕೃತಿಕ ಬದುಕು, ಸಾಮ್ರಾಜ್ಯದ ಅಳಿವು-ಉಳಿವು ಮತ್ತು ನೈತಿಕ ಮೌಲ್ಯಗಳು ಮಹಾಕಾವ್ಯಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಆಯಾಯ ಕಾಲದ ಯುಗಧರ್ಮಕ್ಕೆ ಅನುಗುಣವಾದ ಮೌಲ್ಯಗಳು, ತಾತ್ವಿಕ ನಿಲುವುಗಳು ಮಹಾಕಾವ್ಯಗಳಲ್ಲಿ ಇವೆ. ಮಾನವ-ದಾನವ ಸಂಸ್ಕೃತಿಗಳ ನಡುವಣ ಬಿರುಕು, ಸಂಪತ್ತಿನ ವಿಷಮ ಹಂಚಿಕೆ, ಮಾನವತ್ವದ ಉಳಿವಿಕೆಗಾಗಿ ಸೆಣಸಾಟ ಮಹಾಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿವೆ. ಈ ಬಗೆಯ ಸೆಣಸಾಟ ಸಾಮಾಜಿಕ ಸಂಸ್ಕಾರಯುತ ಬದುಕಿನ ಅನುಷ್ಠಾನಕ್ಕೆ ಅವಕಾಶ ಕಲ್ಪಿಸುತ್ತದೆ. ಧರ್ಮ-ಅಧರ್ಮದ ನೆಲೆಯಲ್ಲಿ ನಡೆಯುವ ಸಂಘರ್ಷ ಇಲ್ಲಿ ಅಭಿವ್ಯಕ್ತಗೊಂಡಿವೆ. ಸತ್ಯ, ಧರ್ಮ, ಮಾನವೀಯತೆಯ ನೆಲೆಗಳನ್ನು ಇವು ಶೋಧಿಸಿವೆ. ನೈತಿಕ ನೆಲೆಯಿಂದ ಬದುಕಿನ ಭಿನ್ನ ಸ್ವರೂಪಗಳನ್ನು ಅನಾವರಣ ಮಾಡುವ ಉದ್ದೇಶ ಇವುಗಳಿಗೆ ಇವೆ.

ಯಾವುದೇ ಪುರಾಣವಾಗಲಿ, ಕಾವ್ಯವಾಗಲಿ ಅದು ಹುಟ್ಟಿದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಆ ಸಂಸ್ಕೃತಿಯಲ್ಲಿನ ಮೌಲ್ಯಗಳು, ಜೀವನಕ್ರಮ, ನಂಬಿಕೆ, ಸಿದ್ಧಾಂತಗಳು ಅದರಲ್ಲಿ ಮಿಳಿತಗೊಂಡಿರುತ್ತವೆ. ತದನಂತರ ಕಾಲಿಕ ಬದಲಾವಣೆಗೆ ತುತ್ತಾಗಿ ಮರುಹುಟ್ಟನ್ನು ಪಡೆದಾಗ ಆಯಾಯ ಕಾಲ ಮತ್ತು ದೇಶದ ಪ್ರಭಾವವಿರುವುದು ಗಮನಾರ್ಹ. ಹೀಗೆ ದೇಶ ಮತ್ತು ಕಾಲವನ್ನು ಅನುಸರಿಸಿ ಬಹುತೇಕ ರಾಮಾಯಣಗಳು ರೂಪು ತಳೆದಿವೆ.

ಪುರಾಣ ವಸ್ತುವನ್ನು ಸಮಕಾಲೀನಗೊಳಿಸುವ ಮುಖಾಂತರ ಹೊಸ ಹೊಸ ಪರಿಕಲ್ಪನೆಯೊಂದಿಗೆ ಅನ್ವೇಷಣೆ ಸಾಧ್ಯ. ಹೀಗೆ ಸಮಕಾಲೀನಗೊಳಿಸುವಲ್ಲಿ ವೈಚಾರಿಕ, ವೈಜ್ಞಾನಿಕ ನಿಲುವುಗಳು ಕ್ರಿಯಾಶೀಲವಾಗುತ್ತವೆ. ಇಂಥ ಲಕ್ಷಣಗಳು ರಾಮಾಯಣ ಮಹಾಕಾವ್ಯಗಳಲ್ಲಿ ಕಂಡಿವೆ. ರಾಮಾಯಣ ಮಹಾಕಾವ್ಯ ಭಾರತದ ಇತಿಹಾಸವಾಗಿಯೂ, ಪುರಾಣಪ್ರಜ್ಞೆಯ ಫಲಶ್ರುತಿಯಾಗಿಯೂ ಕಾಣಿಸಿದೆ. ಆದರೆ ಇತಿಹಾಸವೊಂದನ್ನೇ ಪ್ರತಿನಿಧಿಸುವುದು ರಾಮಾಯಣದ ಪ್ರಧಾನ ಉದ್ದೇಶವಲ್ಲ. ಸಮಗ್ರ ಭರತಖಂಡದ ಸಾಂಸ್ಕೃತಿಕ ಬದುಕನ್ನು ರಾಮಾಯಣ ಮಹಾಕಾವ್ಯಗಳು ಅನಾವರಣ ಮಾಡುತ್ತವೆ. ಭಾರತೀಯ ಸಂಸ್ಕೃತಿಯನ್ನು ಬೆಸೆದ ಮಹಾನ್‌ಚೇತನಶಕ್ತಿಯಾಗಿ ಈ ರಾಮಾಯಣ ಮಹಾಕಾವ್ಯಗಳು ಕಾಣಿಸಿವೆ. ಒಳಿತು-ಕೆಡುಕುಗಳ ಪ್ರಭಾವ ಮತ್ತು ಪರಿಣಾಮಗಳನ್ನು ರಾಮಾಯಣದ ಪಾತ್ರಗಳ ಮುಖೇನ ಪ್ರತಿಬಿಂಬಿಸಲಾಗಿದೆ. ಒಂದು ಕಾಲದ ಚಾರಿತ್ರಿಕ ಸನ್ನಿವೇಶಗಳು ಮುಂದಿಡುವ ಸವಾಲು ಮತ್ತು ಆ ಸವಾಲಿಗೆ ಉತ್ತರ ಕಂಡುಕೊಂಡ ಬಗೆ ರಾಮಾಯಣ ಪರಂಪರೆಯಲ್ಲಿ ವ್ಯಕ್ತವಾಗಿದೆ. ಹೀಗೆ ಉತ್ತರ ಕಂಡುಕೊಳ್ಳುವ ನೆಲೆಯಲ್ಲಿ ರಾಮಾಯಣದ ಪಾತ್ರಗಳು ನಡೆಸುವ ಹೋರಾಟ ವಿಶಿಷ್ಟರೂಪದ್ದು. ಧರ್ಮ-ಅಧರ್ಮ, ನ್ಯಾಯ-ಅನ್ಯಾಯ, ಮಾನವ-ದಾನವ ಶಕ್ತಿಗಳ ನಡುವಣ ಬಿರುಕು ಉಂಟುಮಾಡುವ ವಿನಾಶದ ಪರಿಣಾಮದ ಚಿತ್ರಣ ರಾಮಾಯಣ ಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿದೆ. ನೈತಿಕ ಮೌಲ್ಯಗಳನ್ನು ಪ್ರತಿಪಾದಿಸುವ ಪ್ರಧಾನ ಉದ್ದೇಶ ಮಹಾಕಾವ್ಯಗಳಿಗೆ ಇದೆ. ಸಂಸ್ಕೃತ ಮತ್ತು ಕನ್ನಡ ರಾಮಾಯಣಗಳು ಬೆಳೆದು ಬಂದಂತೆ ಜೈನ ಮತ್ತು ಬೌದ್ಧ ರಾಮಯಣಗಳು ಅಸ್ತಿತ್ವಕ್ಕೆ ಬಂದಿವೆ. ಈ ರಾಮಾಯಣಗಳಿಗೆ ತಮ್ಮದೇ ಆದ ನಿರ್ದಿಷ್ಟ ಉದ್ದೇಶಗಳು ಇದ್ದವು.

ಮಹಾಕಾವ್ಯಗಳ ಕುರಿತು ಬಹಳಷ್ಟು ವಿಮರ್ಶೆಗಳು ಬಂದಿವೆ. ಈ ವಿಮರ್ಶೆಗಳು ನಿರ್ಲಕ್ಷಿತ ಪಾತ್ರಗಳನ್ನು ಕೇಂದ್ರಕ್ಕೆ ತರುವ ಕೆಲಸ ಮಾಡಿವೆ. ಈ ಮೂಲಕ ಮಹಾಕಾವ್ಯದ ಬಹುತೇಕ ಪಾತ್ರಗಳಿಗೆ ಸ್ಥಾನ ಕಲ್ಪಿಸಲಾಗಿದೆ. ಪ್ರಾಚೀನ ಮಹಾಕಾವ್ಯಗಳಿಗೆ ಜನಮನವನ್ನು ಹಿಡಿದಿಡುವ ಶಕ್ತಿ ಇದೆ. ಮಹಾಕಾವ್ಯದ ಮೌಲ್ಯಗಳನ್ನು ಜನ ಸ್ವೀಕರಿಸುವಲ್ಲಿ ಆಸಕ್ತರಾಗಿರುತ್ತಾರೆ. ಹಾಗಾಗಿ ಬದುಕಿನ ನೈತಿಕ ಮೌಲ್ಯಗಳನ್ನು ಸಾರುವ ಮಹಾಕಾವ್ಯಗಳಿಗೆ ಸಾರ್ವಕಾಲಿಕ ಮನ್ನಣೆ ಇದೆ.ರಾಮಾಯಣ ಮಹಾಕಾವ್ಯಗಳಲ್ಲಿ ನೈತಿಕ, ಆಧ್ಯಾತ್ಮಿಕ, ಸಾಮಾಜಿಕ ಹಾಗೂ ತತ್ತ್ವಶಾಸ್ತ್ರೀಯ ವಿಚಾರಗಳ ಅನಾವರಣವಿದೆ.

ಪ್ರಾಚೀನ ಮನೋಭೂಮಿಕೆಯನ್ನು ತಳಹದಿಯನ್ನಾಗಿಸಿ ಬಹುತೇಕ ರಾಮಾಯಣ ಕೃತಿಗಳು ರೂಪು ತಳೆದಿವೆ. ಈ ನೆಲೆಯಲ್ಲಿ ಹೊಸ ಹೊಸ ಚಿಂತನೆಗಳು ಆಯಾಯ ಯುಗಧರ್ಮಕ್ಕೆ ಅನುಸಾರಿಯಾಗಿ ಮೂಡಿವೆ. ಶಿಷ್ಟ ರಾಮಾಯಣ ಪರಂಪರೆಯ

ಸಾಂಪ್ರದಾಯಿಕ ನಿಲುವುಗಳನ್ನು ಆಧುನಿಕ ರಾಮಾಯಣ ಮಹಾಕಾವ್ಯಗಳು ಒಡೆದಿವೆ. ಆಯಾ ಕಾಲದ ಮನೋಧರ್ಮ, ಯುಗಧರ್ಮವನ್ನು ಎತ್ತಿ ಹಿಡಿಯುತ್ತಾ ಸಾರ್ವತ್ರಿಕ ಹಿತಾಸಕ್ತಿಯನ್ನು ಪರಿಗ್ರಹಿಸಿ ಸ್ವಾತಂತ್ರ್ಯದ ನೆಲೆಯಲ್ಲಿ ಸಮಾನತೆಯ ಆಶಯವನ್ನು ಬಿತ್ತಿವೆ. ಮಹಾಕಾವ್ಯಗಳು ನೈತಿಕ ಮೌಲ್ಯಗಳಿಗೆ ಕನ್ನಡಿ ಹಿಡಿದಂತಿವೆ ಎಂಬುದು ಸಾಮಾನ್ಯ ಅಭಿಪ್ರಾಯ. ಒಂದು ಕಾಲದ ಆದರ್ಶ ಎಲ್ಲ ಕಾಲಕ್ಕೂ ಅನ್ವಯವಾಗಬೇಕಿಲ್ಲ. ಪ್ರಸ್ತುತ ರಾಮಾಯಣಗಳು ಶಿಷ್ಟ ಪರಂಪರೆಯ ಎಲ್ಲ ಸಿದ್ಧಾಂತಗಳನ್ನು ಉಳಿಸಿಕೊಂಡಿಲ್ಲ. ರಾಮಾಯಣವನ್ನು ಜನ ಇಂದಿಗೂ ಜ್ಞಾಪಿಸಿಕೊಳ್ಳುತ್ತಾರೆ. ಸಂದರ್ಭಕ್ಕೆ ಅನುಗುಣವಾಗಿ ರಾಮಾಯಣದ ಪಾತ್ರ ವೈಶಿಷ್ಟ್ಯಗಳನ್ನು ರೂಪಕವಾಗಿ ಬಳಸುತ್ತಾರೆ. ರಾಮನ ಏಕಪತ್ನಿವ್ರತ, ಸೀತೆಯ ಪಾತಿವ್ರತ್ಯ, ಹನುಮಂತನ ಸ್ವಾಮಿಭಕ್ತಿ, ಅಯೋಧ್ಯೆಯ ಆಡಳಿತ, ಶಬರಿಯ ಭಕ್ತಿ ಇತ್ಯಾದಿ. ಬದುಕಿನ ಅಕರಾಳ, ವಿಕರಾಳತೆಗೆ ಕನ್ನಡಿ ಹಿಡಿದಂತಿರುವ ಶೂರ್ಪನಖಿ, ಮಂಥರೆ, ಕೈಕೆಯ ಹೆಸರೂ ಉಲ್ಲೇಖವಾಗುತ್ತದೆ.

ವಾಲ್ಮೀಕಿ ವಿರಚಿತ ರಾಮಾಯಣವನ್ನು ಸಂಸ್ಕೃತದ ಮೊದಲ ಮಹಾಕಾವ್ಯ ಎಂದು ಪರಿಗಣಿಸಲಾಗಿದೆ. ಜೈನಕವಿ ನಾಗಚಂದ್ರ ವಿರಚಿತ 'ರಾಮಚಂದ್ರ ಚರಿತ ಪುರಾಣ'ವನ್ನು ಕನ್ನಡದ ಮೊದಲ ರಾಮಾಯಣ ಕಾವ್ಯ ಎನ್ನಲಾಗಿದೆ. ಸಂಸ್ಕೃತದ ವಾಲ್ಮೀಕಿ ರಾಮಾಯಣಕ್ಕೂ ಕನ್ನಡದ ಪಂಪ ರಾಮಾಯಣಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಸಂಸ್ಕೃತ ವಾಲ್ಮೀಕಿ ರಾಮಾಯಣದಲ್ಲಿ ಇಪ್ಪತ್ತೈದು ಸಾವಿರ ಶ್ಲೋಕಗಳಿವೆ. ಮಹಾಕಾವ್ಯಗಳು ನವೀನ ಮಾದರಿಯಲ್ಲಿ ರೂಪು ತಳೆದ ಪರಿಣಾಮ ಸಾಹಿತ್ಯಿಕ, ಸಾಂಸ್ಕೃತಿಕ ಪುನರುಜ್ಜೀವನ ಸಾಧ್ಯವಾಗಿದೆ.

ರಾಮಾಯಣ ಮಹಾಕಾವ್ಯಗಳಲ್ಲಿ ಭಿನ್ನ ಸಂಸ್ಕೃತಿಯ ಅನಾವರಣವಿದೆ. ಮಾನವ, ದಾನವ ಮತ್ತು ವಾನರ ಸಂಸ್ಕೃತಿಯ ನಿರೂಪಣೆ ಇದೆ. ಅಯೋಧ್ಯಾಸಂಸ್ಕೃತಿ, ಲಂಕಾಸಂಸ್ಕೃತಿ ಮತ್ತು ಕಿಷ್ಕಿಂದಾಸಂಸ್ಕೃತಿಯ ಪರಿಚಯವಿದೆ. ಇದರೊಂದಿಗೆ ಭಿನ್ನ ಸಂಸ್ಕೃತಿ, ಬದುಕು, ನಾಗರಿಕ ಜೀವನ ಅನಾವರಣಗೊಂಡಿದೆ. ರಾಮಾಯಣ ಮಹಾಕಾವ್ಯಗಳಲ್ಲಿ ರಾಮತ್ವದ ಶೋಧವಿದೆ. ಈ ಕಾವ್ಯಗಳು ಜೀವನ ಮೌಲ್ಯಗಳನ್ನು ಅಭಿವ್ಯಕ್ತಿಸುವುದರೊಂದಿಗೆ ಮಾನವ ಸ್ವಭಾವದ ಬಹುಮುಖಿ ನೆಲೆಗಳನ್ನು ಶೋಧಿಸಿವೆ. ಭಿನ್ನ ನೆಲೆಗಳಿಂದ ಪಾತ್ರಗಳು ಸೃಷ್ಟಿಸುವ ಸಮಸ್ಯೆ, ಉಂಟುಮಾಡುವ ದುರಂತ ಮತ್ತು ಪರಿಣಾಮಗಳ ಕುರಿತು ರಾಮಾಯಣ ಮಹಾಕಾವ್ಯಗಳು ಮಾತಾಡಿವೆ.

ಶಿಷ್ಟ ರಾಮಾಯಣ ಪರಂಪರೆಯ ಉದ್ದೇಶ ಪ್ರಭುತ್ವ ಪರಂಪರೆಯನ್ನು ಸಮರ್ಥಿಸುವುದು. ಪುರುಷಪರ ನಿಲುವನ್ನು ಶಾಶ್ವತವಾಗಿ ಸಮಾಜದಲ್ಲಿ ಪ್ರತಿಷ್ಠಾಪಿಸುವುದು. ಇದನ್ನು ಸಮಾಜ

ನಿಯಮಗಳು ಎಂಬುದಾಗಿ ಆರೋಪಿಸುವುದು. ಧರ್ಮ, ತತ್ತ್ವ, ಸಿದ್ಧಾಂತದ ಆಶಯವನ್ನು ಬಲವಾಗಿ ಬಿಂಬಿಸುವುದು. ಈ ಮೂಲಕ ಉಳ್ಳವರ ಪರವಾಗಿ ನಿಲ್ಲುವುದು. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಪುರುಷಪರ ಅನುಕೂಲತೆಗಳನ್ನು ಕೇಂದ್ರೀಕರಿಸಿ ಮಹಿಳಾ ಪಾತ್ರಗಳನ್ನು ನಿರೂಪಿಸಲಾಗಿದೆ. ಪ್ರಭುತ್ವ ಪರಂಪರೆಯ ದೌರ್ಜನ್ಯ, ಸ್ವಾರ್ಥ, ಪ್ರತಿಷ್ಠೆಯನ್ನು ಅಡಗಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಪಾತ್ರಗಳನ್ನು ದುರ್ಬಲ ವ್ಯಕ್ತಿತ್ವವಾಗಿ ನಿರೂಪಿಸಲಾಗಿದೆ. ರಾಮಾಯಣದ ಪುರುಷ ಪಾತ್ರಗಳ ಕುರಿತು ಶಿಷ್ಟ ರಾಮಾಯಣ ಪರಂಪರೆ ಹೆಚ್ಚಿನ ಆಸಕ್ತಿ ವಹಿಸಿದೆ.

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ರಾಮಾಯಣ ಮಹಾಭಾರತಗಳು ಮಹಾಕಾವ್ಯಗಳಾಗಿವೆ. ಬಹುತೇಕ ರಾಮಾಯಣ ಕೃತಿಗಳು ಪುರುಷಪರ ಚಿಂತನೆಯನ್ನು ಪ್ರೋತ್ಸಾಹಿಸಿವೆ. ಮಹಿಳೆಯರ ಬದುಕನ್ನು ನಿರ್ಲಕ್ಷಿಸುತ್ತ ಅವರ ಅಂತರಂಗಶಕ್ತಿಯನ್ನು ಗ್ರಹಿಸುವಲ್ಲಿ ವಿಫಲವಾಗಿವೆ. ಇಂಥ ಮಹಾಕಾವ್ಯಗಳಲ್ಲಿ ಏಕಪಕ್ಷೀಯ ನಿಲುವಿದೆ. ಶಿಷ್ಟ ರಾಮಾಯಣಗಳು ಅಸಮಾನತೆಯ ನೆಲೆಯಲ್ಲಿ ಪುರುಷಪರ ಧೋರಣೆಯನ್ನು ಗಟ್ಟಿಗೊಳಿಸಿವೆ. ಮಹಿಳೆಯರ ಬದುಕನ್ನು ಪರಿಗ್ರಹಿಸುವ ಗೋಜಿಗೆ ಹೋಗಿಲ್ಲ. ಸ್ತ್ರೀಯರನ್ನು ದ್ವಿತೀಯ ದರ್ಜೆಯ ಪ್ರಜೆ ಎಂದೇ ಪರಿಗಣಿಸಿವೆ. ಶಿಷ್ಟ ರಾಮಾಯಣ ಪರಂಪರೆಯ ಸಾಂಪ್ರದಾಯಿಕ ನಿಲುವು, ಧೋರಣೆಯನ್ನು ಆಧುನಿಕ ರಾಮಾಯಣಗಳು ಒಡೆದಿವೆ. ಲಿಂಗ ಸಮಾನತೆಯ ಉದಾತ್ತ ಪರಿಕಲ್ಪನೆಯನ್ನು ಹೊತ್ತಿವೆ. ಸಾಮಾಜಿಕ ಸಮಾನತೆಯನ್ನು ಅಪೇಕ್ಷಿಸಿವೆ. ಆಧುನಿಕ ಕನ್ನಡ ರಾಮಯಣಗಳು ವೈಯಕ್ತಿಕ ಬದುಕಿನೊಂದಿಗೆ ಸಾರ್ವಜನಿಕ ಬದುಕನ್ನು ವಿಶ್ಲೇಷಿಸುತ್ತವೆ. ಇಂಥ ವಿಶ್ಲೇಷಣಾತ್ಮಕ ಮಹಾಕಾವ್ಯಗಳಲ್ಲಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಕೂಡಾ ಒಂದು.

ಶಿಷ್ಟ ರಾಮಾಯಣ ಪರಂಪರೆಗೆ ರಾಜರ ಸಾಧನೆಯನ್ನು ನಿರೂಪಿಸುವ ಉದ್ದೇಶವಿದೆ. ಹಾಗಾಗಿ ಮಹಿಳಾ ಪಾತ್ರ ನಿರೂಪಣೆಯಲ್ಲಿ ವಿಶೇಷ ಕಾಳಜಿ ವಹಿಸಿಲ್ಲ. ದಾಸಿಯಾಗಿ, ರಾಣಿಯಾಗಿ, ರಕ್ಕಸಿಯಾಗಿ ಮಹಿಳಾ ಪಾತ್ರಗಳನ್ನು ನಿರೂಪಿಸುವ ಸೀಮಿತ ಉದ್ದೇಶ ಶಿಷ್ಟ ರಾಮಾಯಣ ಪರಂಪರೆಗೆ ಇದೆ. ಈ ಉದ್ದೇಶವನ್ನು ಒಡೆಯುವ ಕೆಲಸ ನಡೆದದ್ದು ಇತ್ತೀಚಿಗೆ. ಪ್ರಸ್ತುತ ಮಹಾಕಾವ್ಯಗಳು ಸಿದ್ಧ ಮಾದರಿಗೆ ಬದ್ಧವಾಗಿಲ್ಲ. ಸ್ತ್ರೀಸಮುದಾಯವನ್ನು ಮಾನವತ್ವದ ನೆಲೆಯಲ್ಲಿ ಪರಿಗ್ರಹಿಸುತ್ತ ಆಧುನಿಕ ರಾಮಾಯಣ ಕಾವ್ಯಗಳು ರೂಪುಗೊಳ್ಳುತ್ತಿವೆ. ಪರಿಣಾಮ ಆಧುನಿಕ ಕನ್ನಡ ಮಹಾಕಾವ್ಯಗಳ ಮಹಿಳಾ ಪಾತ್ರಗಳು ವಾಕ್‌ಸ್ವಾತಂತ್ರ್ಯ ಪಡೆಯುವಂತಾಗಿದೆ. ವ್ಯಕ್ತಿಸ್ವಾತಂತ್ರ್ಯದ ಅನುಷ್ಠಾನದೊಂದಿಗೆ ಮಾನವ ಹಕ್ಕುಗಳ ಪ್ರತಿಪಾದನೆಯ ಉದ್ದೇಶವೂ ಸೇರಿದೆ. ಸಾರ್ವಜನಿಕ ವಲಯಗಳಲ್ಲಿ ಸ್ತ್ರೀಬದುಕನ್ನು

ಕೇಂದ್ರಕ್ಕೆ ತರುತ್ತ ಪರಿವರ್ತನೆಯನ್ನು ಅಪೇಕ್ಷಿಸಿದೆ. ಮಹಿಳೆಯರ ಬದುಕನ್ನು ಒಳಗೊಂಡಂತೆ ಸಮಷ್ಠಿ ಹಿತವನ್ನು ಸಾಧಿಸಿದೆ. ಮಹಾಕಾವ್ಯದ ಮಹಿಳಾ ಪಾತ್ರಗಳಿಗೆ ನ್ಯಾಯ ಒದಗಿಸಿಕೊಡುವ ಉದ್ದೇಶದಿಂದ ಸ್ತ್ರೀಬದುಕಿನ ಶೋಷಣೆಯ ನೆಲೆಗಳನ್ನು ಪರಿಗ್ರಹಿಸಲಾಗಿದೆ. ಈ ಬಗೆಯ ಪರಿಗ್ರಹಿಕೆ ಪುರುಷರ ಶಕ್ತಿರಾಜಕಾರಣವನ್ನು ಅನಾವರಣ ಮಾಡುತ್ತದೆ. ರಾಮಾಯಣದ ಮಹಿಳಾ ಪಾತ್ರಗಳು ಒಂದಲ್ಲ ಒಂದು ನೆಲೆಯಲ್ಲಿ ಶೋಷಣೆಗೆ ಒಳಗಾಗಿವೆ. ಮಹಿಳಾ ಪಾತ್ರಗಳ ಮೂಕತೆಯನ್ನು ಗಟ್ಟಿಗೊಳಿಸಿದ ಶಿಷ್ಟ ರಾಮಾಯಣ ಪರಂಪರೆ ಪುರುಷರ ವಾಕ್‌ಶಕ್ತಿಗೆ ಅಧಿಕ ಮಹತ್ವ ನೀಡಿದೆ. ಸೀಮಿತ ವ್ಯಾಪ್ತಿಯೊಳಗೆ ಮಹಿಳಾಸಮುದಾಯದ ಬದುಕನ್ನು ಕಟ್ಟಿಹಾಕುತ್ತ ಪುರುಷದಬ್ಬಾಳಿಕೆಯನ್ನು ಮೆರೆದಿದೆ.

ಪ್ರಸ್ತುತ ರಾಜಕೀಯ ಅರಾಜಕತೆ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಧೋರಣೆಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಉತ್ತರವಿದೆ. ಯಜಮಾನ ಮತ್ತು ಅಧೀನ ಸಂಸ್ಕೃತಿಯ ನಡುವಣ ಅಂತರವನ್ನು ತೊಡೆದು ಹಾಕಲಾಗಿದೆ. ಸಾಮುದಾಯಿಕ ಪ್ರಜ್ಞೆಯನ್ನು ಬಿಂಬಿಸುತ್ತ ಬಹುಸಂಸ್ಕೃತಿಯ ವೈಶಿಷ್ಟತೆಯನ್ನು ಎತ್ತಿಹಿಡಿಯಲಾಗಿದೆ. ಭಿನ್ನ ಸಂಸ್ಕೃತಿಯ ಮುಖಾಮುಖಿಯೊಂದಿಗೆ ಸಾಂಸ್ಕೃತಿಕ ಸಂಘರ್ಷವನ್ನು ಪರಿಚಯಿಸಲಾಗಿದೆ. ಭಿನ್ನ ಸಂಸ್ಕೃತಿಯಲ್ಲಿ ಅಡಕವಾಗಿರುವ ಮಾನವೀಯತೆಯನ್ನು ಪ್ರಧಾನವಾಹಿನಿಗೆ ತರಲಾಗಿದೆ. ಮಹಿಳಾಸಮುದಾಯದ ಅಂತರಂಗ ಶಕ್ತಿಯನ್ನು ಅಭಿವ್ಯಕ್ತಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇದೆ. ಈ ಮಹಾಕಾವ್ಯದಲ್ಲಿ ಬದುಕಿನ ಭಿನ್ನ ಮಗ್ಗುಲುಗಳ ಅನಾವರಣವಿದೆ. ಬೌದ್ಧಿಕ ನೆಲೆಯ ಚಿಂತನೆಗಳು ಈ ಕಾವ್ಯದ ಮಹಿಳಾ ಪಾತ್ರಗಳಿಂದ ಅಭಿವ್ಯಕ್ತಗೊಂಡಿವೆ. ಈ ನಿರೂಪಣೆಯ ಹಿಂದೆ ಕವಿಯ ಸ್ತ್ರೀಸಂವೇದನಾಶೀಲ ಮನಸ್ಸು ಕೆಲಸ ಮಾಡಿದೆ.

ಹನ್ನೆರಡನೆಯ ಶತಮಾನದ ವಚನಸಾಹಿತ್ಯದಲ್ಲಿ ಶೋಷಣೆಗೆ ಒಳಗಾದವರ ಪರ ದನಿ ಕೇಳಿಬಂದಿದೆ. ಅಂತೆಯೇ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲೂ ಕೂಡಾ. ದುರ್ಬಲ ವರ್ಗದವರ ಕುರಿತು ಕವಿಗೆ ಇರುವ ವಿಶಿಷ್ಟ ಸಂವೇದನೆ ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಯಾವುದೋ ಯುಗದ ಅವತಾರಪುರುಷನ ಲೀಲೆಗಳನ್ನು ಅಧ್ಯಯನ ಮಾಡಿದ ಅನುಭವ ಈ ಕಾವ್ಯದ ಅಧ್ಯಯನದಿಂದ ದೊರಕುವುದಿಲ್ಲ. ಸದಾ ಚಲನಶೀಲವಾದ ಜೀವನಧಾರೆಯಲ್ಲಿ ಅಂತರ್ಗತವಾಗಿರುವ ಸಮಾಜದ ಹಲವು ಮುಖಗಳ ದರ್ಶನ ಈ ಮಹಾಕಾವ್ಯದ ಅಧ್ಯಯನದಿಂದ ಸಾಕಾರಗೊಳ್ಳುತ್ತದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ವ್ಯಾಪ್ತಿ ವಿಶಾಲವಾಗಿದ್ದು ಶಿಷ್ಟ ರಾಮಾಯಣ ಪರಂಪರೆಯ ಸೀಮಿತ ಚೌಕಟ್ಟನ್ನು ಒಡೆದಿದೆ. ರಾಮನ ಕಥೆಯನ್ನು ನಿರೂಪಿಸುವ ಸೀಮಿತ ಉದ್ದೇಶ ಈ ಮಹಾಕಾವ್ಯಕ್ಕೆ ಇಲ್ಲ. ವ್ಯಕ್ತಿಯಿಂದ ತೊಡಗಿ

ಸಮಷ್ಟಿಹಿತ ಸಾಧಿಸುವ ಉದ್ದೇಶವಿದೆ. ಇಲ್ಲಿ ಸೀತೆಯ ಬದುಕು ಶೋಕದ ಮಡುವಲ್ಲ. ಊರ್ಮಿಳೆಯ ಇಚ್ಛಾಶಕ್ತಿಗೆ ಇಲ್ಲಿ ವಿಶೇಷ ಸ್ಥಾನ ಇದೆ. ಶೂರ್ಪನಖಿ ಇಲ್ಲಿ ರಕ್ಕಸಿ ಅಲ್ಲ. ಮಾನವ ಸಹಜ ಆಸೆ, ಆಕಾಂಕ್ಷೆ, ಭಾವನೆ, ಕಾಮನೆಗಳು ಇಲ್ಲಿನ ಮಹಿಳಾ ಪಾತ್ರಗಳಲ್ಲಿ ಅಭಿವ್ಯಕ್ತವಾಗಿದೆ. ದೈಹಿಕ ಪಾತಿವ್ರತ್ಯವನ್ನು ಪ್ರತಿಪಾದಿಸುವ ಸೀಮಿತ ಉದ್ದೇಶ ಈ ಮಹಾಕಾವ್ಯಕ್ಕೆ ಇಲ್ಲ. ಇದರೊಂದಿಗೆ ಮಾನಸಿಕ ಪಾತಿವ್ರತ್ಯದ ನೆಲೆಗಳನ್ನು ಶೋಧಿಸಲಾಗಿದೆ. ರಾಮತ್ವವನ್ನು ವೈಭವೀಕರಿಸುವ, ರಾವಣತ್ವವನ್ನು ತಳ್ಳಿ ಹಾಕುವ ಉದ್ದೇಶ ಈ ಕಾವ್ಯಕ್ಕೆ ಇಲ್ಲ, ಸಮಾಜ ಕೇಂದ್ರಿತ ಚಿಂತನೆಗಳು ಇಲ್ಲಿ ಅಭಿವ್ಯಕ್ತಗೊಂಡಿವೆ. ಪುರುಷತ್ವದ ಹೆಸರಿನಲ್ಲಿ ನಡೆಯುತ್ತಿರುವ ಸ್ತ್ರೀದೌರ್ಜನ್ಯವನ್ನು ಮಹಾನ್ವೇಷಣಂ ಮಹಾಕಾವ್ಯ ಪ್ರಶ್ನಿಸಿದೆ. ಮೌಖಿಕ ಮತ್ತು ಲಿಖಿತ ರಾಮಾಯಣ ಪರಂಪರೆಗಳ ಧೋರಣೆಯನ್ನು ಈ ಮಹಾಕಾವ್ಯ ಪ್ರಶ್ನೆಗೊಡ್ಡಿದೆ.

ಸ್ತ್ರೀಸಂವೇದನೆಯೊಂದಿಗೆ ದಲಿತಸಂವೇದನೆಯನ್ನು ಬಿಂಬಿಸುವ ಉದ್ದೇಶ ಮಹಾಕಾವ್ಯಕ್ಕೆ ಇದೆ. ನೊಂದವರ ಪರ ದನಿಎತ್ತುವ ಮುಖೇನ ಅವಕಾಶ ವಂಚಿತರ ಪರ ಕಾಳಜಿ ವಹಿಸಿದೆ. ಸ್ತ್ರೀಯರ ದಾರುಣ ಸ್ಥಿತಿಗೆ ಕಾರಣವಾದ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ಕುರಿತು ವಿಡಂಬನೆ ಇದೆ. ಪುರುಷ ಶ್ರೇಷ್ಠ, ಮಹಿಳೆ ಕನಿಷ್ಠ ಎಂಬ ಪರಿಕಲ್ಪನೆಯನ್ನು ಈ ಕಾವ್ಯ ಒಡೆದಿದೆ. ಪುರುಷವರ್ಗ ತನ್ನ ಸ್ವಾರ್ಥಸಾಧನೆಗಾಗಿ, ಪ್ರತಿಷ್ಠೆಗಾಗಿ ಮಹಿಳೆಯರ ಬದುಕನ್ನು ಹೀನಾಯವಾಗಿ ನಡೆಸಿಕೊಳ್ಳವುದನ್ನು ವಿರೋಧಿಸಿದೆ. ಲಿಂಗದ ನೆಲೆಯಲ್ಲಿ ಸಮಾನತೆ ಸಾಧಿಸುವ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯಕ್ಕೆ ಇದೆ. ರಾಜರ ಪ್ರತಿಷ್ಠೆ, ಸ್ವಾಭಿಮಾನ, ಯುದ್ಧವಿಜಯ, ಸಾಮ್ರಾಜ್ಯ ವೈಭವನ್ನು ಅನಾವರಣ ಮಾಡುವ ಸೀಮಿತ ಉದ್ದೇಶ ಈ ಕಾವ್ಯಕ್ಕೆ ಇಲ್ಲ. ಸಮಗ್ರತೆಯ ಪರಿಕಲ್ಪನೆಯ ನೆಲೆಯಲ್ಲಿ ಕುವೆಂಪುರವರ ವಿಶ್ವಮಾನವ ಪ್ರಜ್ಞೆಗೆ ಪೂರಕವಾಗಿ ಇಲ್ಲಿನ ಪಾತ್ರಗಳು ರೂಪುಗೊಂಡಿವೆ.

ಮಹಿಳೆಯರ ಶೋಚನೀಯ ಸ್ಥಿತಿಯ ಕುರಿತು ಕಾಳಜಿ ವಹಿಸಿರುವ ಮಹಾನ್ವೇಷಣಂ ಮಹಾಕಾವ್ಯದ ಕವಿ ಲಿಂಗವ್ಯವಸ್ಥೆಯ ನೆಲೆಯನ್ನು ಶೋಧಿಸಿದ್ದಾರೆ. ಪ್ರಸ್ತುತ ಮಹಿಳಾ ಸಮಸ್ಯೆಗಳಿಗೆ ಕಾರಣ ಕಂಡುಕೊಳ್ಳುತ್ತ ಪುರುಷ ದಬ್ಬಾಳಿಕೆಯ ನೆಲೆಗಳನ್ನು ಪರಿಗ್ರಹಿಸಿದ್ದಾರೆ. ಈ ನೆಲೆಯಲ್ಲಿ ಸಮಸ್ತ ಸ್ತ್ರೀಸಮುದಾಯಕ್ಕೆ ದಕ್ಕಬೇಕಾದ ಅವಕಾಶಗಳ ಕುರಿತು ಮಾತಾಡಿದ್ದಾರೆ. ಹಾಗಾಗಿ ಈ ಕಾವ್ಯದ ಸ್ತ್ರೀಸಮುದಾಯ ಉಜ್ವಲ ಬದುಕನ್ನು ಅಪೇಕ್ಷಿಸುತ್ತದೆ. ರಾಮಾಯಣ ಎಂಬುದು ಪುರುಷವರ್ಗದ ಸಾಧನೆ ಎಂಬ ಪೂರ್ವಗ್ರಹಿಕೆಯನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಒಡೆದಿದ್ದಾರೆ. ಹೀಗೆ ಒಡೆಯುವ ಮೂಲಕ ರಾಮಾಯಣದ ಮಹಿಳಾ ಪಾತ್ರಗಳ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಿದ್ದಾರೆ. ನೂತನ ಪಾತ್ರ ಸಂಯೋಜನೆಯೊಂದಿಗೆ ಹೊಸ ಚಿಂತನೆಗಳನ್ನು ಅಭಿವ್ಯಕ್ತಿಸುವ ಮಟ್ಟದಲ್ಲಿ



P 10

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ಬೆಳೆದಿವೆ. ಈ ಮಹಾಕಾವ್ಯದ ಪ್ರತಿಯೊಂದು ಪ್ರಸ್ಥಾನವೂ ಒಂದೊಂದು ಹಂತದ ಪ್ರಯಾಣವಾಗಿದೆ. ಅನ್ವೇಷಣೆಯ ನೆಲೆಯಲ್ಲಿ ಬದುಕಿನ ಸಾರ್ಥಕತೆಗಾಗಿ ಇಲ್ಲಿನ ಪ್ರತಿಯೊಂದು ಪಾತ್ರಗಳೂ ಅನ್ವೇಷಣೆ ನಡೆಸುತ್ತವೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಸಮಕಾಲೀನ ಪ್ರಜ್ಞೆ ಇದೆ. ಸಾಂಪ್ರದಾಯಿಕ ಮನಸ್ಸು ಮತ್ತು ಆಧುನಿಕ ವೈಚಾರಿಕ ಮನಸ್ಸು ಚಿಂತನೆ ನಡೆಸುವ ವಿಭಿನ್ನ ನೆಲೆಗಳು ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿವೆ. ಪ್ರಸ್ತುತ ಇಪ್ಪತ್ತೊಂದನೆಯ ಶತಮಾನದ ಚಿಂತನೆ, ಸವಾಲುಗಳಿಗೆ ಪ್ರತಿಕ್ರಿಯೆ, ಪ್ರಶ್ನೆಗೆ ಉತ್ತರ, ಅಗತ್ಯಗಳಿಗೆ ಸ್ಪಂದಿಸಿದ ರೀತಿ ವಿಶಿಷ್ಟವಾದುದು. ರಾಮಾಯಣದ ಕಥಾವಸ್ತು ಹಳೆಯದಾದರೂ ಹೊಸ ಚಿಂತನೆಗಳ ಪ್ರಭಾವವನ್ನು ಗುರುತಿಸಬಹುದು. ರಾಮಾಯಣದ ಪಾತ್ರಗಳ ಮುಖೇನ ಸ್ಥಿತಪ್ರಜ್ಞತೆಯನ್ನು ಪ್ರತಿಬಿಂಬಿಸುತ್ತಾ ಆತ್ಮಾನುಸಂಧಾನದ ಉದ್ದೇಶದ ಸಾಫಲ್ಯವನ್ನು ಕವಿ ಸಾರ್ಥಕಪಡಿಸಿಕೊಂಡಿದ್ದಾರೆ. ವ್ಯಕ್ತಿಯಿಂದ ತೊಡಗಿ ಜಾಗತಿಕ ಮಟ್ಟದವರೆಗಿನ ದ್ವಂದ್ವಗಳನ್ನು ನಿವಾರಿಸುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ವ್ಯಕ್ತಿಯ ಹೃದಯವಂತಿಕೆಯ ನಿರೂಪಣೆಯ ಉದ್ದೇಶದೊಂದಿಗೆ ಬದುಕನ್ನು ಸಾರ್ಥಕಪಥದತ್ತ ಕೊಂಡೊಯ್ಯುವ ವಿಶಾಲ ಉದ್ದೇಶವೂ ಸೇರಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಪಾತ್ರ ನಿರೂಪಣೆಯ ನೆಲೆಯಲ್ಲಿ ಹೊಸತನ ಗುರುತಿಸಲು ಸಾಧ್ಯ. ಬಹುತೇಕ ರಾಮಾಯಣ ಕಾವ್ಯಗಳು ಸ್ತ್ರೀಸಮುದಾಯವನ್ನು ಅಸಹನೀಯವಾಗಿ ನಿರೂಪಿಸಿವೆ. ಈ ಸೀಮಿತ ಪರಿಕಲ್ಪನೆಯನ್ನು ಒಡೆದು ಇಂಥ ಚಿಂತನೆಗಳಿಗೆ ಪ್ರತಿಕ್ರಿಯೆಯ ರೂಪವಾಗಿ ಈ ಮಹಾಕಾವ್ಯದ ಮಹಿಳಾ ಪಾತ್ರಗಳು ಕಾಣಿಸಿವೆ. ಇಲ್ಲಿನ ಮಹಿಳಾ ಪಾತ್ರಗಳ ಸ್ವತಂತ್ರ ವ್ಯಕ್ತಿತ್ವ, ತೀರ್ಮಾನ ಮತ್ತು ಧೀಮಂತಿಕೆ ಇಪ್ಪತ್ತೊಂದನೆಯ ಶತಮಾನದ ಸ್ತ್ರೀಸಮುದಾಯಕ್ಕೆ ಸ್ಫೂರ್ತಿ. ನಿಷ್ಕ್ರಿಯತೆಯ ನೆಲೆಯಲ್ಲಿ ಮಹಿಳಾ ಜಗತ್ತಿನ ಬದುಕನ್ನು ಕಟ್ಟುವ ಶಿಷ್ಟ ರಾಮಾಯಣ ಪರಂಪರೆಯ ನಿಲುವಿಗೆ ವ್ಯತಿರಿಕ್ತವಾಗಿ ಚೈತನ್ಯಶೀಲತೆಯ ನೆಲೆಯಲ್ಲಿ ಈ ಮಹಾಕಾವ್ಯ ಕಂಡು ಬಂದಿದೆ. ಸಮಾಜಹಿತವನ್ನು ಕೇಂದ್ರೀಕರಿಸಿ ಸಾಮಾಜಿಕ ಮೌಲ್ಯಗಳನ್ನು ಈ ಮಹಾಕಾವ್ಯದಲ್ಲಿ ಅಳವಡಿಸಲಾಗಿದೆ. ಸಾರ್ವಕಾಲಿಕ ಮೌಲ್ಯಗಳ ಪ್ರತಿಪಾದನೆಯೊಂದಿಗೆ ಸಮಕಾಲೀನ ಮೌಲ್ಯಗಳನ್ನು ಮಿಳಿತಗೊಳಿಸಿದ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'.

ಬದುಕಿನ ಮೌಲ್ಯಗಳೊಂದಿಗೆ ತತ್ತ್ವ ಆದರ್ಶಗಳನ್ನು ಒಡಮೂಡಿಸುತ್ತ ಅನ್ವೇಷಣೆಯ ನೆಲೆಯಲ್ಲಿ ಸಾಗಿದ ಮಹಾಕಾವ್ಯ ಇದು. ಸಾಂಸ್ಕೃತಿಕ ಸಂಘರ್ಷದೊಂದಿಗೆ ಮಾನವತ್ವದ ಪ್ರತಿಪಾದನೆಯ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ದಾಸ್ಯ ಭಾವದಿಂದ ಬಿಡುಗಡೆ ಹೊಂದುತ್ತಾ ಸಮಾನತೆಯನ್ನು ಪ್ರತಿಪಾದಿಸುವ ಉದ್ದೇಶ ಹೊಂದಿದೆ. ಆಧುನಿಕ ಮಹಾಕಾವ್ಯಗಳಲ್ಲಿ ಕೆಲವು ಪಾರಂಪರಿಕ ಪುರಾಣ ಕಾವ್ಯಗಳ ಮಾದರಿಯಲ್ಲಿ ರಚಿತವಾಗಿವೆ. ಇಂಥ ಮಹಾಕಾವ್ಯಗಳು ಸಾಂಪ್ರದಾಯಿಕ ಜಾಡಿನಲ್ಲೇ ಮುಂದುವರಿದಿವೆ. ಇಂಥ ಮಹಾಕಾವ್ಯಗಳ ಕುರಿತು ಆಧುನಿಕ ವಿಮರ್ಶೆ ನಡೆದದ್ದು ತೀರಾ ವಿರಳ ಎಂದೇ ಹೇಳಬೇಕು. ಆಧುನಿಕ ಮಹಾಕಾವ್ಯಗಳಲ್ಲಿ ಇನ್ನು ಕೆಲವು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ರೂಪು ತಳೆದಿವೆ. ಇಂಥ ಮಹಾಕಾವ್ಯಗಳಲ್ಲಿ ಹೊಸ ಹೊಸ ಪರಿಕಲ್ಪನೆ, ಆಧುನಿಕ ಮನಸ್ಥಿತಿಯ ಪ್ರಭಾವ ಮತ್ತು ವೈಚಾರಿಕ ಚಿಂತನೆಗಳನ್ನು ಗುರುತಿಸಲು ಸಾಧ್ಯ. ಈ ಜಾಡಿನಲ್ಲಿ ಸಾಗಿದ ರಾಮಾಯಣ ಮಹಾಕಾವ್ಯಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡಿವೆ. ಇಂಥ ಮಹಾಕಾವ್ಯಗಳಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಕೂಡಾ ಒಂದು. ಈ ಮಹಾಕಾವ್ಯದ ಕವಿ ರಾಮಾಯಣದ ಕಥೆಯಲ್ಲಿ ಹೊಸ ಹೊಳಹನ್ನು ಕಂಡಿದ್ದಾರೆ. ಸಮಕಾಲೀನ ಸಂದರ್ಭಕ್ಕೆ ಮಹಾನ್ವೇಷಣಂ ಮಹಾಕಾವ್ಯದ ಮೂಲಕ ಜೀವನಕ್ಕೆ ಅಗತ್ಯವಾದ ಪೂರಕ ಸಂದೇಶವನ್ನು ನೀಡಿದ್ದಾರೆ. ತಮ್ಮ ಸೃಜನಶೀಲ ಚಿಂತನೆಯ ಮೂಲಕ ರಾಮಾಯಣಕ್ಕೆ ಒಂದು ವಿಶಿಷ್ಟ ಸ್ಥಾನಮಾನ ಕಲ್ಪಿಸಿದ್ದಾರೆ. ಈ ಮಹಾಕಾವ್ಯದಲ್ಲಿ ಮನುಕುಲದ ಚಿಂತನೆಯೊಂದಿಗೆ ಉದ್ಧಾರದ ಪರಿಕಲ್ಪನೆಯೂ ಸೇರಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಆಧುನಿಕ ಸೃಜನಶೀಲ ಮನಸ್ಸು ರೂಪಿಸಿದ ವಿಶಿಷ್ಟ ಕಾವ್ಯ. ಇಲ್ಲಿ ಹೊಸ ಬದುಕಿನ ಅಪೇಕ್ಷೆ ಇದೆ. ಪರಂಪರಾಗತ ಜಾತಿಭೇದ, ಮತಭೇದ, ವರ್ಗಭೇದ ಮತ್ತು ಲಿಂಗಭೇದದ ನಿವಾರಣಾ ಆಶಯವಿದೆ. ಸಾಮಾಜಿಕ ಸಮಸ್ಯೆಯನ್ನು ಅನಾವರಣ ಮಾಡಿದ ಕವಿ ಅದಕ್ಕೆ ಪರಿಹಾರವನ್ನು ಉತ್ತರ ರೂಪದಲ್ಲಿ ಕೊಟ್ಟಿದ್ದಾರೆ. ಮಹಾನ್ವೇಷಣೆ ಎಂಬ ಶಬ್ದವನ್ನು ಮಹಾನ್ವೇಷಣಂ ಮಹಾಕಾವ್ಯದ ಹಿನ್ನೆಲೆಯಲ್ಲಿ ಬಲು ವಿಶಾಲವಾಗಿ ವಿಸ್ತರಿಸಬಹುದು. ಶೋಧನೆ, ಕಾಣುವಿಕೆ, ಕನಸುಗಾರಿಕೆ, ವಿಮರ್ಶನಾಪ್ರಜ್ಞೆ, ಉದಾತ್ತ ಆಶಯ ಹೀಗೆ ವಿಭಿನ್ನ ನೆಲೆಗಳಲ್ಲಿ ಅರ್ಥೈಸಬಹುದು. ಕೌಟುಂಬಿಕ ವ್ಯಾಪ್ತಿಯಿಂದ ತೊಡಗಿ ಜಾಗತಿಕ ಮಟ್ಟದವರೆಗಿನ ದ್ವಂದ್ವಗಳನ್ನು ನಿವಾರಿಸಬೇಕು ಎಂಬ ಆಶಯ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇದೆ. ಈ ನಿಟ್ಟಿನಲ್ಲಿ ವ್ಯಕ್ತಿ–ವ್ಯಕ್ತಿಗಳ ನಡುವಣ, ದೇಶ–ದೇಶಗಳ ನಡುವಣ ನಡೆಯುವ ಮಾನಸಿಕ ಸಂಘರ್ಷವನ್ನು ಕವಿ ವಿಶ್ಲೇಷಿಸಿದ್ದಾರೆ. ಇದರೊಂದಿಗೆ ಈ ಕಲಹವನ್ನು ನಿವಾರಿಸುವ ಉದಾತ್ತ ಭಾವವನ್ನು

ವ್ಯಕ್ತಪಡಿಸುತ್ತಾ ವ್ಯಕ್ತಿಯ ಅಂತರಂಗದಲ್ಲಿ ಈ ಭಾವ ಬೆಳೆಯಬೇಕು ಎಂಬ ಆಶಯವನ್ನು ಬಿತ್ತಿದ್ದಾರೆ.

ಶಿಷ್ಟ ರಾಮಾಯಣ ಪರಂಪರೆಗಳು ಭಾರತೀಯ ಸಾಮಾಜಿಕ ಸಮಾನತೆಯನ್ನು ಪರಿಗಣಿಸಿ ನಿರ್ಮಿಸಿದ ಕೃತಿಗಳಲ್ಲ. ಲಿಂಗದ ನೆಲೆಯಲ್ಲಿ, ಕುಲದ ನೆಲೆಯಲ್ಲಿ, ಮತ್ತು ಆರ್ಥಿಕತೆಯ ನೆಲೆಯಲ್ಲಿ ಸಮಾಜದ ಒಂದು ವರ್ಗದ ಪರವಾಗಿ ನಿಂತಿವೆ. ಇಂಥ ಸಿದ್ಧಾಂತವನ್ನು ಒಡೆಯುವ ವಿಶಿಷ್ಟ ಶಕ್ತಿ ಈ ಮಹಾಕಾವ್ಯಕ್ಕೆ ಇದೆ. ಜನಸಾಮಾನ್ಯನ ಅಂತರಂಗದ ಸಂವೇದನೆಗೆ ಇಲ್ಲಿ ಕವಿಹೃದಯ ತುಡಿದಿರುವುದು ಸುಸ್ಪಷ್ಟ. ಈ ಮಹಾಕಾವ್ಯ ವಿವಿಧ ಸ್ತರದ ಜನಸಮುದಾಯದ ಬದುಕು ಬವಣೆಯನ್ನು ಕಟ್ಟಿಕೊಡುವುದರೊಂದಿಗೆ ಪರಿವರ್ತನೆಯ ಆಶಯವನ್ನು ಹೊತ್ತಿದೆ. ವಾಲ್ಮೀಕಿ ರಾಮಾಯಣದ ಯಥಾವತ್ತತೆಯನ್ನು ಉಳಿಸಿಕೊಳ್ಳುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇಲ್ಲ. ಶ್ರೀಸಾಮಾನ್ಯನ ಬದುಕನ್ನು ಅನಾವರಣ ಮಾಡುವ ಉದ್ದೇಶವಿದೆ. ಶ್ರೀಸಾಮಾನ್ಯನ ಆಶೋತ್ತರಗಳನ್ನು ಕಾವ್ಯಮುಖೇನ ಪ್ರತಿಬಿಂಬಿಸುವ ಸಲುವಾಗಿ ಮಹಾನ್ವೇಷಣಂ ಮಹಾಕಾವ್ಯದ ಕವಿ ಹೊಸ ಹೊಸ ಮೌಲ್ಯಗಳನ್ನು ಅಳವಡಿಸಿದ್ದಾರೆ. ರಾಮಾಯಣದ ಕಥಾಭಿತ್ತಿ ಪ್ರಾಚೀನವಾದ್ದಾದರೂ ಅದು ಧ್ವನಿಸುವ ಅರ್ಥವಂತಿಕೆ ವಿಶಿಷ್ಟವಾದದ್ದು. ಒಂದು ಸಮುದಾಯದ, ಒಂದು ವರ್ಗದ ಆಶೋತ್ತರಗಳನ್ನು ಪ್ರತಿಬಿಂಬಿಸುವ ಸೀಮಿತ ಉದ್ದೇಶ ಈ ಮಹಾಕಾವ್ಯಕ್ಕೆ ಇಲ್ಲ. ಮಹಾಕಾವ್ಯಗಳು ಸಮಾಜದ ಎಲ್ಲ ಸ್ತರದ ಜನರ ಸ್ವತ್ತು. ಹಾಗಾಗಿ ಸಮಾಜದ ಎಲ್ಲ ಸ್ತರದ ಜನರ ಬದುಕು ಮಹಾಕಾವ್ಯಗಳಲ್ಲಿ ಅಭಿವ್ಯಕ್ತಗೊಳ್ಳಬೇಕು ಎಂಬ ಉದ್ದೇಶ ಈ ಮಹಾಕಾವ್ಯದ ಕವಿಯದ್ದು. ಈ ಹಿನ್ನೆಲೆಯಲ್ಲಿಯೇ ಕವಿ ತುಳಿತಕ್ಕೆ ಒಳಗಾದವರ ಬದುಕನ್ನು ಕೇಂದ್ರೀಕರಿಸಿ ಕಾವ್ಯ ರಚಿಸಿದ್ದಾರೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕವಿಯ ಅನುಭವ ಹುತ್ತಗಟ್ಟಿದ ಪರಿಣಾಮ ರಾಮಾಯಣದ ಹೊಸ ನೋಟ ಸಾಧ್ಯವಾಗಿದೆ. ರಾಮಾಯಣದ ಕಥೆಗೆ ಚ್ಯುತಿ ಒದಗದಂತೆ ಸ್ವತಂತ್ರ ಆಲೋಚನೆಗಳನ್ನು, ಪ್ರಸ್ತುತ ಸಂದರ್ಭ, ಸನ್ನಿವೇಶವನ್ನು ರಾಮಾಯಣದ ಪಾತ್ರಮುಖೇನ ಬಿಂಬಿಸುವ ಕೆಲಸವನ್ನು ಕವಿ ಮಾಡಿದ್ದಾರೆ. ಶತಮಾನಗಳ ವಿಚಾರಧಾರೆಗಳು ಆಯಾಯ ಕಾಲದ ಸಾಹಿತ್ಯ ಕೃತಿಗಳ ಮೇಲೆ ಪ್ರಭಾವಿಸದೇ ಇರಲಾರದು. ಇಲ್ಲಿ ಕವಿಯ ಸಂಕಲ್ಪಶಕ್ತಿ ಹಿರಿದಾದುದು. ರಾಮಾಯಣದ ಕೆಲವು ಪಾತ್ರಗಳನ್ನು ತಾಮಸಿಕ ನೆಲೆಯಲ್ಲಿ ಸ್ವೀಕರಿಸಿದ ಮತ್ತು ನಿರೂಪಿಸಿದ ಭಾರತೀಯ ಮನೋಭೂಮಿಕೆಯನ್ನು ಪೂರ್ವಗ್ರಹದಿಂದ ಬಿಡಿಸುವ ಕೆಲಸ ಮಾಡಿದ್ದಾರೆ. ಇದರ ಪರಿಣಾಮವಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಯಾವ ಪಾತ್ರಗಳೂ ರಕ್ಕಸ ಪಾತ್ರಗಳಾಗಿ ಮೂಡಿಲ್ಲ.

ಮಾನವನಲ್ಲಿ ಅಂತರ್ಗತವಾಗಿರುವ ಇಚ್ಛಾಶಕ್ತಿ, ಸಂಕಲ್ಪಶಕ್ತಿ ಮತ್ತು ಅಂತರಂಗಪ್ರಜ್ಞೆಯನ್ನು ಜಾಗೃತಗೊಳಿಸುವ ಮೂಲಕ ಪ್ರತಿಯೊಂದು ಪಾತ್ರಗಳಿಗೂ ಜೀವಕಳೆ ತುಂಬಿದ್ದಾರೆ. ಈ ಮೂಲಕ ವಿಚಾರಶಕ್ತಿ ಮತ್ತು ಬುದ್ಧಿಶಕ್ತಿಯ ಬೆಳವಣಿಗೆಗೆ ಆದ್ಯತೆ ನೀಡಿದ್ದಾರೆ. ಈ ಮಹಾಕಾವ್ಯದಲ್ಲಿ ಸಾಮಾಜಿಕ ಕಳಕಳಿ ಇದೆ. ಇದರೊಂದಿಗೆ ಭವಿತವ್ಯದ ಬದುಕಿನ ಸುಧಾರಣಾಪರ ಆಶಯವೂ ಸೇರಿದೆ.

ಉಚ್ಚ–ನೀಚ, ಕುಲಜ–ಕುಲಹೀನ, ಉಳ್ಳವ–ಇಲ್ಲದವ ಎಂಬ ತಾರತಮ್ಯ ಭಾವವನ್ನು ಮಹಾನ್ವೇಷಣಂ ಮಹಾಕಾವ್ಯ ತೊಡೆದುಹಾಕಿದೆ. ಬಹುತೇಕ ಕನ್ನಡ ರಾಮಾಯಣ ಕಾವ್ಯಗಳ ಪಾತ್ರ ನಿರೂಪಣೆಯಲ್ಲಿ ಕವಿಯ ಪೂರ್ವನಿರ್ಧರಿತ ಮನಸ್ಥಿತಿ ಕೆಲಸ ಮಾಡಿದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಮಹಿಳಾ ಪಾತ್ರಕ್ಕೆ ಅಂಟಿದ ಕಳಂಕ ನಾಶವಾಗಿದೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಸೀತೆ, ಮಂಥರೆ, ಶೂರ್ಪನಖಿ ಮುಂತಾದ ಮಹಿಳಾ ಪಾತ್ರಗಳಿಗೆ ಕೆಲವು ನಿರ್ದಿಷ್ಟ ಗುಣಗಳನ್ನು ಆರೋಪಿಸಲಾಗಿತ್ತು. ಇಂಥ ಮಹಿಳಾ ಪಾತ್ರಗಳು ಈ ಮಹಾಕಾವ್ಯದಲ್ಲಿ ಪರಿವರ್ತನೆಗೆ ಒಳಗಾಗಿವೆ. ಸ್ತ್ರೀಸಮುದಾಯದ ಸಾಧನೆಯ ಸಾಧ್ಯತೆಗೆ ಮಹಾನ್ವೇಷಣಂ ಮಹಾಕಾವ್ಯ ಪ್ರಧಾನ ವೇದಿಕೆಯಾಗಿದ್ದು ಸ್ತ್ರೀಯರ ಅಂತರಂಗದ ಚೈತನ್ಯ ಶಕ್ತಿಯನ್ನು ಜಾಗೃತಗೊಳಿಸಿದೆ.

ಈ ಮಹಾಕಾವ್ಯದಲ್ಲಿ ಸ್ತ್ರೀಸಮುದಾಯದ ಅಂತರಂಗಶಕ್ತಿ ಮತ್ತು ಚೈತನ್ಯಶಕ್ತಿಯನ್ನು ಕೇಂದ್ರಕ್ಕೆ ತರಲಾಗಿದೆ. ಮಹಿಳಾ ಜಗತ್ತಿನ ಮಾನಸಿಕ ನೆಮ್ಮದಿಯನ್ನು ಹದಗೆಡಿಸುವ ಪುರುಷರ ಶಕ್ತಿರಾಜಕಾರಣದ ಕುರಿತು ಇಲ್ಲಿ ಕವಿ ಮಾತಾಡಿದ್ದಾರೆ. ಸ್ತ್ರೀ ತಾತ್ಸಾರಕ್ಕೆ ಯೋಗ್ಯಳಲ್ಲ. ಅವಳಲ್ಲಿಯೂ ಸ್ವತಂತ್ರಶಕ್ತಿ, ಸಾಮರ್ಥ್ಯ, ಅಭಿಲಾಷೆ ಇದೆ. ಅದನ್ನು ಕಸಿಯುವ ಮತ್ತು ಮರೆಮಾಚುವ ಹಕ್ಕು ಪುರುಷಸಮುದಾಯಕ್ಕೆ ಇಲ್ಲ ಎಂಬ ಆಶಯ ಈ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಜನಪದರ, ದೀನದಲಿತರ, ಸ್ತ್ರೀಸಮುದಾಯದ ಅಂತರಂಗಸಂವೇದನೆಗೆ ಸ್ಪಂದಿಸಿ ಅವರಲ್ಲಿ ಅಂತರ್ಗತವಾಗಿರುವ ಹೃದಯಶ್ರೀಮಂತಿಕೆಯನ್ನು ಅನಾವರಣಗೊಳಿಸಿ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಟ್ಟ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'.

ಕೇವಲ ಮಹಾಕಾವ್ಯಗಳಲ್ಲಿ ಮಾತ್ರ ರಾಮಾಯಣದ ಕಥಾವಸ್ತು ಅಳವಡಿಕೆ ಆಗಿಲ್ಲ. ಇದರೊಂದಿಗೆ ದೃಶ್ಯ ಮತ್ತು ಶ್ರವ್ಯ ಮಾಧ್ಯಮಗಳಲ್ಲಿಯೂ ರಾಮಾಯಣದ ಕಥೆ ಮತ್ತು ಪ್ರಸಂಗಗಳು ಬಳಕೆಯಾಗಿವೆ. ಇವುಗಳಲ್ಲಿ ಮುಖ್ಯವಾಗಿ ಯಕ್ಷಗಾನ, ಗೊಂಬೆಯಾಟ, ನಾಟಕ, ಸಿನೆಮಾ ಮುಂತಾದ ದೃಶ್ಯ ಮಾಧ್ಯಮಗಳಲ್ಲಿ ರಾಮಾಯಣದ ಕಥಾವಸ್ತು

ಬಳಕೆಯಾಗಿದೆ. ವಾಲ್ಮೀಕಿ ರಾಮಾಯಣದ ಕಥಾಭಿತ್ತಿಗಿಂತ ಜನಪದ ರಾಮಾಯಣದ ಕಥಾಭಿತ್ತಿಯನ್ನು ಬಹುತೇಕ ಪ್ರಮಾಣದಲ್ಲಿ ಆಧರಿಸಿ ಯಕ್ಷಗಾನ ಪರಂಪರೆ ಬೆಳೆದು ನಿಂತಿದೆ. ಯಕ್ಷಗಾನದ ಪ್ರಸಂಗಗಳೇ ಗೊಂಬೆಯಾಟದಲ್ಲೂ ಬಳಕೆಯಾಗುತ್ತವೆ. ಸಾಹಿತ್ಯ ಒಂದೇ ಬಗೆಯದಾದರೂ ಪ್ರಯೋಗಗಳು ಮಾತ್ರ ಬೇರೆ ಬೇರೆ. ರಾಮಾಯಣದ ಕಥೆ ಆಧಾರಿತ ನಾಟಕಗಳು ಬಹಳಷ್ಟು ಇದ್ದರೂ ಸಿನೆಮಾಗಳು ಬೆರಳೆಣಿಕೆಯಷ್ಟೇ ಕಾಣಸಿಗುತ್ತವೆ ಎನ್ನಬೇಕು.

ಕನ್ನಡ ರಾಮಾಯಣದಲ್ಲಿ ಪ್ರಸಂಗಸಾಹಿತ್ಯ ಹೇರಳವಾಗಿ ಬೆಳೆದಿದೆ. ಇದರ ಪರಿಣಾಮ ಯಕ್ಷಗಾನ ಕಲೆಯ ಮುಖಾಂತರ ರಾಮಾಯಣದ ಕಥೆಯನ್ನು ಶ್ರೀಸಾಮಾನ್ಯ ಅತಿ ಸುಲಭದಲ್ಲಿ ಸ್ವೀಕರಿಸುವಂತಾಯಿತು. ರಾಮಾಯಣ ಪ್ರಸಂಗಕರ್ತೃಗಳ ಮುಖ್ಯವಾಗಿ ಪಾರ್ತಿಸುಬ್ಬ, ಶಾಂತಕವಿ, ಹ.ರಾಮಭಟ್ಟ, ಅಳಿಯ ಲಿಂಗರಾಜ, ಗೇರುಸೊಪ್ಪೆ ಶಾಂತಯ್ಯ, ಕಡಂದಲೆ ರಾಮರಾವ್ ಮತ್ತು ಸುಬ್ಬಯ್ಯರನ್ನು ಹೆಸರಿಸಬಹುದು. ಸೀತಾಕಲ್ಯಾಣ, ಪಾದುಕಾ ಪಟ್ಟಾಭಿಷೇಕ, ಪಂಚವಟಿ, ವಾಲಿಸುಗ್ರೀವರ ಕಾಳಗ, ಲಂಕಾದಹನ ಕಾಳಗ ಮುಂತಾದ ರಾಮಾಯಣ ಪ್ರಸಂಗಗಳು ಯಕ್ಷಗಾನ ಮತ್ತು ಗೊಂಬೆಯಾಟಗಳಲ್ಲಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿವೆ.

ದೇಶದ ಬಹುತೇಕ ಭಾಷಾ ಲಿಪಿಗಳಲ್ಲಿ ರಾಮಾಯಣದ ಕುರಿತ ಉಲ್ಲೇಖವಿದೆ. ಬರ್ಮಾ, ಇಂಡೋನೇಷ್ಯ, ಚೀನಾ, ಮಲೇಶಿಯಾ, ಟಿಬೆಟ್ ಮುಂತಾದ ದೇಶಭಾಷೆಗಳಲ್ಲಿ ರಾಮಾಯಣದ ಕತೆ ಪ್ರಚಲಿತದಲ್ಲಿ ಇದೆ. ಪರಿಣಾಮ ಜಗತ್ತಿನಾದ್ಯಂತ ಇಂದಿಗೂ ರಾಮಾಯಣ ಜೀವಂತವಾಗಿದೆ. ರಾಮಾಯಣದ ಕಥೆಯನ್ನು ಆಧರಿಸಿ ಕನ್ನಡ, ತಮಿಳು, ತೆಲುಗು, ಮಲಯಾಳಂ, ತುಳು, ಮರಾಠಿ, ಬಂಗಾಲಿ, ಹಿಂದಿ, ಇಂಗ್ಲಿಷ್, ಪಂಜಾಬಿ, ರಾಜಸ್ಥಾನಿ, ಕೊಂಕಣಿ ಮುಂತಾದ ಭಾಷೆಗಳಲ್ಲಿ ಬಹುತೇಕ ಕಾವ್ಯಗಳು ರಚಿತವಾಗಿವೆ. ರಾಮಾಯಣ ಕಥೆ ಆಧಾರಿತ ಸಂಶೋಧನ ಗ್ರಂಥಗಳು, ಲೇಖನಗಳು ಬಂದಿವೆ. ಜನಪದ ನೃತ್ಯದ ಹಾಡುಗಳು, ದೋಣಿ–ಹಾಡುಗಳು, ಜೋಕಾಲಿ ಹಾಡುಗಳು ಮತ್ತು ಕಥಕ್ಕಳಿ ಗೀತೆಗಳು ರಾಮಾಯಣದ ಕುರಿತು ರಚಿತವಾಗಿದೆ. ಭಾರತದ ಇತರ ಭಾಷೆಗಳಲ್ಲಿ ರಾಮಾಯಣ ಬೆಳೆದಂತೆ ಕನ್ನಡ ಭಾಷೆಯಲ್ಲೂ ರಾಮಾಯಣದ ಕಾವ್ಯ ಪರಂಪರೆ ಬೆಳೆದಿದೆ. ಸುಮಾರು ಎರಡು ಸಾವಿರಕ್ಕೂ ಹೆಚ್ಚಿನ ವರ್ಷಗಳ ಇತಿಹಾಸ ಉಳ್ಳ ಕನ್ನಡ ಭಾಷೆಯಲ್ಲಿ ಸಾವಿರಕ್ಕೂ ಮೀರಿದ ರಾಮಾಯಣ ಕೃತಿಗಳು ಬಂದಿವೆ. ಕನ್ನಡ ಜನರ ಬದುಕಿನಲ್ಲಿ ರಾಮಾಯಣ ಹಾಸುಹೊಕ್ಕಾಗಿದೆ. ಭಾರತೀಯರ ಬದುಕಲ್ಲಿ ರಾಮಾಯಣ ಸೇರಿರಲು ಐತಿಹಾಸಿಕ ನೆಲೆಯೂ ಬಹುಮುಖ್ಯ ಕಾರಣ. ರಾಮಾಯಣ ಪರಂಪರೆಗೆ

ಸಾವಿರ ವರ್ಷಗಳಿಗೂ ಮೀರಿದ ಇತಿಹಾಸವಿದೆ. ಪರಿಣಾಮ ಇಂದಿಗೂ ರಾಮಾಯಣ ಜನಪ್ರಿಯತೆ ಪಡೆಯುವಂತಾಗಿದೆ. ಆ ಹಿಂದಿನ 'ಕವಿರಾಜಮಾರ್ಗ'ದಲ್ಲಿ ರಾಮಾಯಣಗಳನ್ನು ಕುರಿತ ಉಲ್ಲೇಖವಿದೆ. ಪೊನ್ನನ 'ಭುವನೈಕ್ಯ ರಾಮಾಭ್ಯುದಯ' ಅನುಪಲಬ್ಧ ಕೃತಿಯಾದರೂ ರಾಮಾಯಣ ಕುರಿತ ಕಾವ್ಯ ಎಂದೇ ಹೇಳಬೇಕು. ಸಾಂಸ್ಕೃತಿಕ, ಸಮಾಜಶಾಸ್ತ್ರೀಯ, ರಾಜಕೀಯ, ಐತಿಹಾಸಿಕ ನೆಲೆಗಳಿಂದ ರಾಮಾಯಣಗಳ ಅಧ್ಯಯನ ಸಾಧ್ಯ. ರಾಮನ ತ್ಯಾಗಶೀಲತೆ, ಸೀತಾಪಹರಣ,ರಾವಣವಧೆ, ದಶರಥನ ಮಾನಸಿಕ ದ್ವಂದ್ವ ರಾಮಾಯಣಗಳಲ್ಲಿ ಅಭಿವ್ಯಕ್ತವಾಗಿವೆ. ಈ ಬಗೆಯ ನಿರೂಪಣೆಗಳು ರಾಜಪರಂಪರೆಯ ಬದುಕಿನ ಚಿತ್ರಣವನ್ನು ಅನಾವರಣ ಮಾಡುತ್ತವೆ. ಚಾರಿತ್ರಿಕ ನೆಲೆಯಿಂದ ಇಲ್ಲಿ ಒಬ್ಬ ನಾಯಕನಾದರೆ ಮತ್ತೊಬ್ಬ ಪ್ರತಿನಾಯಕ. ಹೀಗೆ ನಾಯಕ, ಪ್ರತಿನಾಯಕರನ್ನು ಪರಿಗ್ರಹಿಸುತ್ತ ರಾಮ, ರಾವಣರಿಬ್ಬರನ್ನೂ ಕೇಂದ್ರಕ್ಕೆ ತರಲಾಗಿದೆ.

ಲಿಖಿತ ರಾಮಾಯಣಗಳಿಗಿಂತ ಮುಂಚೆ ಮೌಖಿಕ ರಾಮಾಯಣಗಳು ಅಸ್ತಿತ್ವದಲ್ಲಿ ಇದ್ದವು. ಮೌಖಿಕ ರಾಮಾಯಣಗಳಿಗೆ ಯಾವುದೇ ಲಿಖಿತ ದಾಖಲೆಗಳಿಲ್ಲದ ಕಾರಣ ಲಿಖಿತ ರಾಮಾಯಣದಷ್ಟು ಪರಿಣಾಮಕಾರಿಯಾಗಿ ಜನಮನವನ್ನು ತಲುಪಿಲ್ಲ. ಸ್ತ್ರೀಸಮುದಾಯದ ಬದುಕನ್ನು ಕಟ್ಟುವಲ್ಲಿ ಮೌಖಿಕ ರಾಮಾಯಣಗಳಿಗೆ ವಿಶೇಷ ಆಸಕ್ತಿ ಇತ್ತು. ಜನಸಾಮಾನ್ಯರ ಬದುಕಿನ ತಲ್ಲಣ, ಆಸೆ, ಭಾವನೆಗಳೇ ಇಲ್ಲಿನ ಕಥಾವಸ್ತು. ಪಾತ್ರಗಳ ಕಟ್ಟುವಿಕೆಯ ಹಿಂದೆ ಯಾವುದೇ ಪಕ್ಷಪಾತ ಧೋರಣೆಯಾಗಲಿ, ಅಸಮಾನ ಪರಿಕಲ್ಪನೆಯಾಗಲಿ ಜನಪದರಿಗೆ ಇರಲಿಲ್ಲ. 'ಕಣ್ಣಾಮುಚ್ಚೇ, ಕಾಡೇಗೂಡೇ ಉದ್ದಿನ ಮೂಟೇ ಉರುಳೇ ಹೋಯ್ತು' ಎಂಬ ಜಾನಪದ ಕವಿಗಳ ಉಕ್ತಿ ರಾಮಾಯಣದ ಕಥೆಯನ್ನು ಆಧರಿಸಿಯೇ ನಿರೂಪಿತವಾದದ್ದು. ದಶರಥನ ಕಣ್ಣಾಮುಚ್ಚಾಲೆಯ ಪರಿಣಾಮ ರಾಮನಿಗೆ ಕಾಡೇ ಗೂಡಾಯಿತು. ಉದ್ದಿನ ಮೂಟೆಯಂತಹ ರಾವಣ ರಾಮನಿಂದ ಹತನಾದ ಎಂಬುದನ್ನು ಈ ಕಣ್ಣಾಮುಚ್ಚೇ ಆಟದ ಸಾಲುಗಳು ಧ್ವನಿಸುತ್ತವೆ. ರಾಮಾಯಣದ ಬಹುತೇಕ ಕಲಾತ್ಮಕವಾದ ನುಡಿಗಟ್ಟುಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಇದರಲ್ಲಿ ಮುಖ್ಯವಾಗಿ ಅಳಿಲುಸೇವೆ, ಮಳಲುಭಕ್ತಿ, ಶಬರಿಯ ಬುಗುರಿ, ಹನುಮನ ಬಾಲ, ಕುಂಭಕರ್ಣನ ನಿದ್ದೆ, ಲಕ್ಷ್ಮಣ ರೇಖೆ, ಸುಗ್ರೀವಾಜ್ಞೆ ಇತ್ಯಾದಿ ನುಡಿಗಟ್ಟುಗಳನ್ನು ನೆನಪಿಸಿಕೊಳ್ಳಬಹುದು. ನಿತ್ಯ ಬದುಕಿನ ಬವಣೆಯನ್ನು ರಾಮಾಯಣದ ಪಾತ್ರಮುಖೇನ ಕಟ್ಟುವ ಕೆಲಸವನ್ನು ಮೌಖಿಕ ರಾಮಾಯಣಗಳು ಮಾಡಿವೆ. ಹೀಗೆ ಕಟ್ಟುವ ಜನಪದ ರಾಮಾಯಣ ರಚನಕಾರರಿಗೆ ಯಾವುದೇ ಹಿಂಜರಿಕೆ ಇರಲಿಲ್ಲ. ಹಾಗಾಗಿ ರಾಮಾಯಣದ ಸ್ತ್ರೀಪಾತ್ರಗಳ ನಿರೂಪಣೆ ಜನಸಾಮಾನ್ಯ ಮಹಿಳೆಯರ ಬದುಕಿನ ನಿರೂಪಣೆಯೇ ಆಗಿದೆ. ಆದರೆ ಶಿಷ್ಟ ರಾಮಾಯಣ ಪರಂಪರೆಗಳು ಹಾಗಲ್ಲ. ಲಿಂಗದ ನೆಲೆಯಲ್ಲಿ, ಅಧಿಕಾರದ

ನೆಲೆಯಲ್ಲಿ, ಅಂತಸ್ತಿನ ನೆಲೆಯಲ್ಲಿ ಪಕ್ಷಪಾತ ಧೋರಣೆಯನ್ನು ತಳೆದಿವೆ. ಇದರೊಂದಿಗೆ ಪುರುಷಪರ ಶಕ್ತಿರಾಜಕಾರಣವನ್ನು ಬಲಗೊಳಿಸುತ್ತಾ ರಾಜತ್ವದ ಸಿದ್ಧಾಂತವನ್ನು ಬಲಪಡಿಸುತ್ತಾ ಮುಂದೆ ಸಾಗಿವೆ. ಈ ಸಾಗುವಿಕೆಯ ಹಿಂದೆ ನರಳುವ ಮಹಿಳಾಸಮುದಾಯವನ್ನು, ದೀನವರ್ಗದವರನ್ನು, ಜನಸಾಮಾನ್ಯರನ್ನು ಕಣ್ಣೆತ್ತಿಯೂ ಕಂಡಿಲ್ಲ. ಉಳ್ಳವರ ಪರವಾಗಿ ನಿಂತು ಅವರ ಜೀವನ ಸಿದ್ಧಾಂತಗಳನ್ನೇ ಶ್ರೇಷ್ಠತೆಯ ನೆಲೆಯಲ್ಲಿ ಪರಿಕಲ್ಪಿಸಿ ವೈಭವೀಕರಿಸಿದೆ. ಲಿಂಗದ ನೆಲೆಯಲ್ಲಿ ನಡೆಯುವ ದಬ್ಬಾಳಿಕೆಯನ್ನು ಹಿಂಸೆ ಎಂದು ಪರಿಕಲ್ಪಿಸುವ ಮಟ್ಟಕ್ಕೆ ಇಲ್ಲಿನ ಬಹುತೇಕ ಪಾತ್ರಗಳು ಬೆಳೆದಿಲ್ಲ. ಈ ನಿಟ್ಟಿನಲ್ಲಿ ಮೌಖಿಕ ರಾಮಾಯಣ ಹೆಣ್ಣಿಗೆ ಕೊಟ್ಟ ಸ್ಥಾನಮಾನವನ್ನು ಶಿಷ್ಟ ರಾಮಾಯಣ ಪರಂಪರೆಗಳು ಕೊಟ್ಟಿಲ್ಲ ಎಂದೇ ಹೇಳಬೇಕು. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಮಹಿಳಾಸಮುದಾಯದ ಬದುಕು, ಬವಣೆ, ಗುರಿ, ಉದ್ದೇಶ ಮತ್ತು ಸಾಧನೆಯನ್ನು ಸ್ಪಷ್ಟವಾಗಿ ನಿರೂಪಿಸಿದೆ. ಸ್ತ್ರೀಸಮುದಾಯದ ಸ್ಥಿತಿಗತಿಯನ್ನು ಪರಿಚಯಿಸುತ್ತಾ ಪರಿವರ್ತನೆಯ ಆಶಯ ಹೊತ್ತಿದೆ.

# ಅಧ್ಯಾಯ ೨

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೨.೧ ಅಧ್ಯಯನದ ಉದ್ದೇಶ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳ ಬದುಕು, ಅಂತರಂಗದ ತುಡಿತ, ಸಂವೇದನೆಯನ್ನು ಪರಿಗ್ರಹಿಸುವ ನೆಲೆಯಲ್ಲಿ ನನ್ನ ಅಧ್ಯಯನದ ದಿಕ್ಕು ಸಾಗಿದೆ. ಸ್ತ್ರೀಸಮುದಾಯದ ಅಂತರಂಗಸಂವೇದನೆಯನ್ನು ಪರಿಗ್ರಹಿಸುತ್ತಾ ಸ್ತ್ರೀಪಾತ್ರಗಳ ಅನನ್ಯತೆಯನ್ನು ಶೋಧಿಸುವ ಉದ್ದೇಶ ನನ್ನ ಅಧ್ಯಯನಕ್ಕೆ ಇದೆ. ಬಹುತೇಕ ರಾಮಾಯಣ ಕಾವ್ಯಗಳು ಪ್ರಭುತ್ವಪರಂಪರೆಯ ದಬ್ಬಾಳಿಕೆಯನ್ನು, ಯಜಮಾನ ಸಂಸ್ಕೃತಿಯ ಏಕಪಕ್ಷೀಯ ತೀರ್ಮಾನಗಳನ್ನು ಸಾಧನೆಯಾಗಿ ನಿರೂಪಿಸುತ್ತಾ ಬಂದಿವೆ. ಸ್ತ್ರೀಸಮುದಾಯದ ನಿವೇದನೆಯನ್ನು ಪರಿಗ್ರಹಿಸದೆ ಅವರನ್ನು ಸಾಮಾಜಿಕ ಅವಕಾಶಗಳಿಂದ ಬಹುದೂರ ಉಳಿಸಿದೆ. ಹೀಗೆ ನಿರ್ಲಕ್ಷಕ್ಕೆ ಒಳಗಾದ ಸ್ತ್ರೀಸಮುದಾಯವನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ' ಕೇಂದ್ರಕ್ಕೆ ತಂದಿದೆ. ಹೀಗೆ ಮಹಿಳಾಸಮುದಾಯಕ್ಕೆ ವಿಶೇಷ ಸ್ಥಾನ ಕಲ್ಪಿಸಿದ ಈ ಮಹಾಕಾವ್ಯದ ಅಧ್ಯಯನದೊಂದಿಗೆ ಮಹಿಳಾಸಮುದಾಯದ ಕೊಡುಗೆ ಮತ್ತು ಕೊರತೆಯನ್ನು ಶೋಧಿಸುವ ಉದ್ದೇಶವಿದೆ. ಈ ಕಾರಣದಿಂದ ಈ ಮಹಾಕಾವ್ಯವನ್ನು ಸಂಶೋಧನೆಗೆ ಆಯ್ದುಕೊಳ್ಳಲಾಗಿದೆ.

ತುಳಿತಕ್ಕೆ ಒಳಗಾದ ಸ್ತ್ರೀಸಮುದಾಯದ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸುವುದು ಈ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ. ಈ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನದ ಮೂಲಕ ಸಾಕಾರಗೊಳ್ಳಲು ಸಾಧ್ಯ. ಸ್ತ್ರೀ–ಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ನೈತಿಕ ಮೌಲ್ಯಗಳು, ಬೌದ್ಧಿಕ, ವೈಚಾರಿಕ ಬೆಳವಣಿಗೆಗಳನ್ನು ರಾಮಾಯಣದ ಪುರುಷ ಪಾತ್ರಗಳಿಂದಲೇ ಪ್ರತಿಪಾದಿಸಬೇಕು ಎಂಬ ಸ್ಥಾಪಿತ ಉದ್ದೇಶವನ್ನು ಈ ಮಹಾಕಾವ್ಯ ಒಡೆದಿದೆ. ಇಂಥ ಮಹಾಕಾವ್ಯಗಳು ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಾಗುತ್ತವೆ. ಹೀಗೆ ಪ್ರಸ್ತುತ ವಿದ್ಯಮಾನದೊಂದಿಗೆ ಸ್ಪಂದಿಸುವ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನದ ಉದ್ದೇಶವಿದೆ. ಈ ಮಹಾಕಾವ್ಯದ ನಿರೂಪಣೆಯ ಹಿಂದೆ ಪ್ರಸ್ತುತ ವಿದ್ಯಮಾನ, ಕವಿಯ ಮನಸ್ಥಿತಿ, ಉದ್ದೇಶ, ಮನೋಧರ್ಮ ಅಭಿವ್ಯಕ್ತಗೊಂಡಿದೆ. ಸ್ತ್ರೀಯರ ಕುರಿತ ಪೂರ್ವಗ್ರಹವನ್ನು ಒಡೆಯುವಲ್ಲಿ ಈ ಮಹಾಕಾವ್ಯ

ಸಫಲವಾಗಿದೆ ಎಂದೇ ಹೇಳಬೇಕು. ಈ ನಿಟ್ಟಿನಲ್ಲಿ ಮೂಡಿಬಂದ ಈ ಮಹಾಕಾವ್ಯ ಸ್ತ್ರೀಪರ ಕಾಳಜಿಯೊಂದಿಗೆ ಪುರುಷದಬ್ಬಾಳಿಕೆಯನ್ನು ಪ್ರಶ್ನಿಸುತ್ತದೆ. ತಿರಸ್ಕಾರದ ಕುರಿತು ಪ್ರತಿತಿರಸ್ಕಾರ ತಾಳುತ್ತಾ ವೈಚಾರಿಕ ಚಿಂತನಶೀಲ ಪ್ರವೃತ್ತಿಯಿಂದ ಪ್ರತಿಕ್ರಿಯಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಮಹಾಕಾವ್ಯದ ಮಹಿಳಾಸಮುದಾಯ ಬದುಕಲ್ಲಿ ಎದುರಾದ ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವ ಬಗೆಯನ್ನು ಈ ಅಧ್ಯಯನದ ಮೂಲಕ ಶೋಧಿಸುವ ಉದ್ದೇಶವಿದೆ.

ಸುಧಾರಣಾಪರ ಆಶಯ ಹೊತ್ತ ರಾಮಾಯಣ ಕುರಿತ ಅಧ್ಯಯನಗಳು ಸಾಮಾಜಿಕ ತಿರುವನ್ನು ಅಪೇಕ್ಷಿಸಿವೆ. ರಾಮಾಯಣ ನಿರೂಪಣೆಯ ಹಿಂದೆ ನಿರ್ದಿಷ್ಟ ಉದ್ದೇಶ ಇದೆ. ಈ ಉದ್ದೇಶಿತ ರಾಮಾಯಣಗಳು ಸ್ಥಾಪಿತಮೌಲ್ಯಗಳನ್ನು ಒಡೆದಿವೆ. ರಾಮಾಯಣ ಕುರಿತ ಅಧ್ಯಯನಗಳು ಮೌಖಿಕ ಪರಂಪರೆಯ ತಿಳುವಳಿಕೆಯನ್ನಾಗಲಿ, ಶಿಷ್ಟ ಸಂಪ್ರದಾಯದ ನಿಲುವುಗಳನ್ನಾಗಲಿ ಸಾರಾಸಗಟಾಗಿ ತಿರಸ್ಕರಿಸಿಲ್ಲ. ಸಂಪೂರ್ಣ ಉಳಿಸಿಕೊಂಡಿಲ್ಲ. ರಾಮಾಯಣ ಕುರಿತ ಅಧ್ಯಯನಗಳು ಒಂದೇ ದಿಕ್ಕಲ್ಲಿ ಸಾಗಿಲ್ಲ. ಆಯಾ ಕಾಲಘಟ್ಟದ ಚಿಂತನೆಯನ್ನು ಮತ್ತು ಸಾಂಸ್ಕೃತಿಕ ಬದುಕನ್ನು ಪರಿಗ್ರಹಿಸುತ್ತ ಮುಂದೆ ಸಾಗಿವೆ. ಸ್ತ್ರೀಸಮುದಾಯದ ಬದುಕನ್ನು ಕೇಂದ್ರಕ್ಕೆ ತರುವ ಕೆಲಸ ನಡೆದದ್ದು ಎಂಭತ್ತರ ದಶಕದಲ್ಲಿ. ಇದಕ್ಕೂ ಮುಂಚಿನ ರಾಮಾಯಣ ಅಧ್ಯಯನಗಳು ಸ್ತ್ರೀಸಂವೇದನೆಯನ್ನು ಗ್ರಹಿಸುವಲ್ಲಿ ವಿಫಲವಾಗಿವೆ. ಪೌರಾಣಿಕ ಪ್ರಜ್ಞೆ ಉಳ್ಳ ರಾಮಾಯಣಗಳಿಂದ ತೊಡಗಿ ಬಹುತೇಕ ರಾಮಾಯಣಗಳು ಪುರುಷಪ್ರಭುತ್ವವನ್ನು ಪ್ರೋತ್ಸಾಹಿಸಿವೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಅಸ್ತಿತ್ವವಾದದ ನೆಲೆಯಲ್ಲಿ ಸ್ತ್ರೀಸಮುದಾಯದ ಬದುಕನ್ನು ನಿರೂಪಿಸಿದೆ. ಜಾತಿ, ವರ್ಣ, ಲಿಂಗ, ಅಂತಸ್ತಿನ ನೆಲೆಯಲ್ಲಿ ಸಮಾನತೆ ಸಾಧಿಸುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ಇದರೊಂದಿಗೆ ಸಂಕುಚಿತ ಚಿಂತನೆಯಿಂದ ಬಿಡುಗಡೆ ಹೊಂದಿ ವಿಶಾಲ ಮನೋಭೂಮಿಕೆಯ ನೆಲೆಯಲ್ಲಿ ಬದುಕನ್ನು ನಿರೂಪಿಸುವ ತುಡಿತತವೂ ಸೇರಿದೆ. ನೂತನ ಪಾತ್ರಸಂಯೋಜನೆಯಿಂದ ರಾಮಾಯಣದ ತಾತ್ವಿಕ ಸಿದ್ಧಾಂತವನ್ನು ಆದರ್ಶದ ನೆಲೆಯಲ್ಲಿ ನಿರೂಪಿಸಲಾಗಿದೆ. ಶತಮಾನಗಳಿಂದ ನಲುಗಿರುವ ಮಹಿಳಾಸಮುದಾಯದ ಅಂತರಂಗಸಂವೇದನೆಯನ್ನು ಕೇಂದ್ರಕ್ಕೆ ತರಲಾಗಿದೆ. ಈ ಮಹಾಕಾವ್ಯದಲ್ಲಿ ವ್ಯವಸ್ಥೆಯನ್ನು ಒಪ್ಪಿ ಬದುಕುವ ಸಾಂಪ್ರದಾಯಿಕ ಮಾದರಿಯ ಮಹಿಳಾ ಪಾತ್ರಗಳು ಇವೆ. ಇದಕ್ಕೆ ವ್ಯತಿರಿಕ್ತವಾಗಿ ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಬಂಡಾಯ ಪ್ರವೃತ್ತಿಯ ಮಹಿಳಾ ಪಾತ್ರಗಳೂ ಸೇರಿವೆ. ವ್ಯಕ್ತಿಗತ ಬದುಕಿಗೆ ಅಡ್ಡಿ ಆತಂಕ ಉಂಟುಮಾಡುವ ಸಾಂಪ್ರದಾಯಿಕ ಚಿಂತನೆಗಳನ್ನು ಮೀರುವ ಮುಖೇನ ಸುಧಾರಣಾ ಆಶಯವನ್ನು ಈ ಮಹಾಕಾವ್ಯ ಹೊತ್ತಿದೆ.

ಪುರಾಣ ಪ್ರಜ್ಞೆಯನ್ನು ಜನರಿಗೆ ತಲುಪಿಸುವ ಭರದಲ್ಲಿ ಶಿಷ್ಟ ರಾಮಾಯಣ ಪರಂಪರೆಗಳು ಸ್ತ್ರೀಸಮುದಾಯವನ್ನು ಅಲಕ್ಷಿಸಿವೆ. ಪ್ರಭುತ್ವಪರಂಪರೆ, ಪುರುಷಪರಂಪರೆ ನೀಡಿದ ತೀರ್ಪನ್ನೇ ಅಂತಿಮ ಎಂದು ಸಾಬೀತುಪಡಿಸುವ ಉದ್ದೇಶ ಶಿಷ್ಟ ರಾಮಾಯಣಕ್ಕೆ ಇತ್ತು. ಹೀಗೆ ನಿರ್ವಚಿಸುವ ತುಡಿತದಲ್ಲಿ ಮಹಿಳಾಸಮುದಾಯದ ಕುರಿತು ಅಲಕ್ಷ ತಾಳಿತು. ಇಂಥ ಪಕ್ಷಪಾತ ನಿಲುವನ್ನು ಒಡೆಯುವ ಕೆಲಸ ಈ ಮಹಾಕಾವ್ಯ ಮಾಡಿದೆ. ಈ ಒಡೆಯುವಿಕೆಯ ಮೂಲಕ ಸಾಮಾಜಿಕ ಸಮಾನತೆಯನ್ನು ಕಾಯ್ದುಕೊಳ್ಳಲು ಸಾಧ್ಯ. ಇಂತಹ ತಾತ್ವಿಕ ನಿಲುವನ್ನು ಬಿತ್ತರಿಸುವ ಈ ಮಹಾಕಾವ್ಯವನ್ನು ಅಧ್ಯಯನ ಮಾಡಲು ಆಸಕ್ತಳಾಗಿರುತ್ತೇನೆ. ಈ ಮಹಾಕಾವ್ಯದ ಕವಿ ಸ್ತ್ರೀಸಮುದಾಯದ ಅಂತರಂಗಶಕ್ತಿಯನ್ನು ಪ್ರಬಲವಾಗಿ ನಿರ್ವಚಿಸಿದಾರೆ. ಮಹಿಳಾಸಮುದಾಯದ ವಾಕ್‌ಶಕ್ತಿ, ಇಚ್ಛಾಶಕ್ತಿ, ಸಾಧನಾಶಕ್ತಿಗೆ ವಿಶೇಷ ಸ್ಥಾನಮಾನ ಕಲ್ಪಿಸಿದ್ದಾರೆ. ಹೀಗೆ ನಿರೂಪಿತವಾದ ಸ್ತ್ರೀಸಮುದಾಯದ ಸಂಕಲ್ಪಶಕ್ತಿಯನ್ನು ಕೇಂದ್ರಕ್ಕೆ ತಂದು ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ. ಇದರೊಂದಿಗೆ ನಿರ್ಲಕ್ಷಿತ ಸ್ತ್ರೀಸಮುದಾಯದ ಬದುಕು ಭಾವಗಳನ್ನು ಕಟ್ಟಿಕೊಡುವ ಉದ್ದೇಶವಿದೆ. ಈ ಮೂಲಕ ಮಹಿಳಾಸಮುದಾಯದ ಶಕ್ತಿ ಮತ್ತು ಸಾಧ್ಯತೆಯ ನೆಲೆಗಳನ್ನು ಶೋಧಿಸುವ ಉದ್ದೇಶವಿದೆ.

ಸಮಾನತೆಯ ನೆಲೆಯಲ್ಲಿ ಸಮಬಾಳಿಗೆ ಆದ್ಯತೆ ನೀಡಿದ ಈ ಮಹಾಕಾವ್ಯ ಪ್ರಧಾನ–ಅಧೀನ ಪರಿಕಲ್ಪನೆಯನ್ನು ಒಡೆದು ಸಮಾನತೆಯ ಆಶಯವನ್ನು ಬಿತ್ತಿದೆ. ಈ ಮಹಾಕಾವ್ಯದ ಮಹಿಳಾ ಪಾತ್ರಗಳು ವ್ಯಕ್ತಿಗೌರವದೊಂದಿಗೆ ಸಾಮಾಜಿಕ ಮನ್ನಣೆಯನ್ನು ಅಪೇಕ್ಷಿಸುತ್ತವೆ. ಪ್ರಭುತ್ವಪರಂಪರೆಯ ದಬ್ಬಾಳಿಕೆಯನ್ನು ದೋಷವೆಂದು ಪರಿಗ್ರಹಿಸುವ ಮತ್ತು ಪ್ರತಿಭಟಿಸುವ ಮಟ್ಟಕ್ಕೆ ಇಲ್ಲಿನ ಮಹಿಳಾ ಪಾತ್ರಗಳು ಬೆಳೆದಿವೆ. ಹೀಗೆ ಸಾಮಾಜಿಕ ಮಾರ್ಪಾಟನ್ನು ಅಪೇಕ್ಷಿಸುವ ಮಹಿಳಾ ಪಾತ್ರಗಳನ್ನು ಪ್ರಧಾನವಾಹಿನಿಗೆ ತಂದು ಅಭ್ಯಾಸ ಮಾಡುವ ಉದ್ದೇಶವಿದೆ. ಸ್ತ್ರೀಸಮುದಾಯದ ತುಡಿತ ಮಿಡಿತಗಳನ್ನು ನಿರಾಡಂಬರವಾಗಿ ಅಭಿವ್ಯಕ್ತಿಸುವ ಈ ಮಹಾಕಾವ್ಯದಲ್ಲಿ ಪ್ರಸ್ತುತ ಸಂದರ್ಭದೊಂದಿಗೆ ಸಂವಾದವಿದೆ. ಇಲ್ಲಿ ಕವಿ ಪಾತ್ರಮುಖೇನ ಸ್ಪಂದಿಸಿರುವುದರೊಂದಿಗೆ ಪ್ರತಿಕ್ರಿಯಿಸಿರುವುದು ಸ್ಪಷ್ಟವಾಗುತ್ತದೆ. ಈ ಮಹಾಕಾವ್ಯ ದಲಿತಪರ ಕಾಳಜಿಯೊಂದಿಗೆ ಸ್ತ್ರೀಪರ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. ನನ್ನ ಅಧ್ಯಯನದ ಉದ್ದೇಶ ವಿಶೇಷವಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಸಮುದಾಯದ ಬದುಕು ಬವಣೆಯನ್ನು ಪರಿಗ್ರಹಿಸುವುದು. ಕೇವಲ ಪಾತ್ರ ಶೋಧನೆಯ ಉದ್ದೇಶ ಹೊಂದದೆ ಇದರೊಂದಿಗೆ ಈ ಮಹಾಕಾವ್ಯದ ಮಹಿಳಾ ಪಾತ್ರಗಳ ಅನನ್ಯತೆಯನ್ನು ಗುರುತಿಸುವ ಉದ್ದೇಶವೂ ಸೇರಿದೆ.

ಪ್ರಸ್ತುತ ಆರ್ಥಿಕ ಉದಾರೀಕರಣ, ಜಾಗತೀಕರಣ, ಖಾಸಗೀಕರಣದ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳು ನಶಿಸುತ್ತಿವೆ. ಇಂಥ ಸಂದರ್ಭದಲ್ಲಿ ಜೀವನ ಮೌಲ್ಯಗಳ, ನೈತಿಕ ತತ್ತ್ವಗಳ ಅಗತ್ಯತೆ ಇದೆ. ಈ ಎಲ್ಲ ನೈತಿಕ ತತ್ವಗಳು ಮಹಾಕಾವ್ಯದೊಳಗೆ ಇವೆ. ಹೀಗೆ ಪ್ರಸ್ತುತ ಸಂದರ್ಭವನ್ನು ನಿರೂಪಿಸುವ ಮತ್ತು ಪ್ರತಿಕ್ರಿಯಿಸುವ ಈ ಮಹಾಕಾವ್ಯದ ವೈಶಿಷ್ಟ್ಯತೆಯನ್ನು ಅಭ್ಯಾಸ ಮಾಡುವ ಉದ್ದೇಶವಿದೆ. ಈ ಮಹಾಕಾವ್ಯದ ಮಹಿಳಾ ಪಾತ್ರಗಳು ತಮ್ಮ ಅಸ್ತಿತ್ವದ ಉಳಿವಿಕೆಗಾಗಿ ನೀಡುವ ಹೋರಾಟ ಮತ್ತು ಬದುಕಿನ ಸಾರ್ಥಕತೆಗಾಗಿ ಪಡುವ ಕಠಿಣ ಪರಿಶ್ರಮವನ್ನು ಪರಿಗ್ರಹಿಸುವ ನೆಲೆಯಲ್ಲಿ ನನ್ನ ಅಧ್ಯಯನ ಸಾಗಿದೆ.

ಮಹಾಕಾವ್ಯ ಪರಂಪರೆಯ ಕುರಿತು ಜನಸಮುದಾಯಕ್ಕೆ ವಿಶೇಷವಾದ ಕಾಳಜಿ ಇದೆ. ರಾಮಾಯಣ ಕಾವ್ಯಮುಖೇನ ನೈತಿಕ ಮೌಲ್ಯಗಳನ್ನು ಬಿತ್ತರಿಸುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ಇಲ್ಲಿನ ಸ್ತ್ರೀ–ಪುರುಷ ಪಾತ್ರಗಳು ತಮ್ಮದೇ ನೆಲೆಯಲ್ಲಿ ಅನನ್ಯತೆಯನ್ನು ಕಂಡುಕೊಂಡು ಬದುಕನ್ನು ಸಾರ್ಥಕಪಡಿಸಿಕೊಳ್ಳುತ್ತವೆ. ಈ ನೆಲೆಯಲ್ಲಿ ಈ ಮಹಾಕಾವ್ಯವನ್ನು ಕನ್ನಡದ ವಿಶಿಷ್ಟ ರಾಮಾಯಣ ಕಾವ್ಯ ಎನ್ನಬೇಕು. ಶಿಷ್ಟ ರಾಮಾಯಣ ಪರಂಪರೆಯ ಪೂರ್ವಗ್ರಹಪೀಡಿತ ಕಲ್ಪನೆಯನ್ನು ಈ ಮಹಾಕಾವ್ಯ ಒಡೆದಿದೆ. ಪಾತ್ರಸಂಯೋಜನೆಯಲ್ಲಿ ಯಾವುದೇ ಪಕ್ಷಪಾತ ನಿಲುವನ್ನು ತಳೆದಿಲ್ಲ. ಪುರುಷಕೇಂದ್ರಿತ ಪಠ್ಯದ ಪರಿಕಲ್ಪನೆಯನ್ನು ಮಹಾನ್ವೇಷಣಂನ ಕವಿ ಅಲುಗಾಡಿಸಿದ್ದಾರೆ. ಕೆಲವು ಪಾತ್ರಗಳನ್ನು ಒಡೆದು ಕಟ್ಟಿದ್ದಾರೆ. ಮಾನವೀಯ ನೆಲೆಯನ್ನು ಕೇಂದ್ರವಾಗಿ ಇರಿಸಿಕೊಂಡ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನದಿಂದ ಬದುಕಿನ ಅನ್ವೇಷಣೆ ಸಾಧ್ಯ.

ಶಿಷ್ಟ ರಾಮಾಯಣ ಕಾವ್ಯಗಳಿಗೂ ಈ ಮಹಾಕಾವ್ಯಕ್ಕೂ ನಡುವಣ ಸಾಮ್ಯ ಮತ್ತು ಭಿನ್ನತೆಯನ್ನು ಗುರುತಿಸುವ ಉದ್ದೇಶವಿದೆ. ಶಿಷ್ಟ ರಾಮಾಯಣ ಪರಂಪರೆ ತಳೆದಿರುವ ನಿಲುವುಗಳನ್ನು ಅಗತ್ಯಕ್ಕೆ ಅನುಸಾರವಾಗಿ ಈ ಮಹಾಕಾವ್ಯ ಪ್ರಶ್ನಿಸಿದೆ. ಹೀಗೆ ಪ್ರಶ್ನಿಸುವ ಹಿಂದೆ ಕವಿಯ ಉದಾತ್ತತೆ ಮತ್ತು ವಿಶಿಷ್ಟ ಮನೋಧರ್ಮ ವ್ಯಕ್ತವಾಗುತ್ತದೆ. ಲಿಖಿತ ರಾಮಾಯಣ ಪರಂಪರೆಯಂತೆ ಮೌಖಿಕ ರಾಮಾಯಣ ಪರಂಪರೆಯೊಂದಿಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮುಖಾಮುಖಿಯಾಗಿಸಿ ಅಭ್ಯಾಸ ಮಾಡುವ ಉದ್ದೇಶವಿದೆ. ಈ ಮಹಾಕಾವ್ಯದ ಕುರಿತು ಕೆಲವು ಲೇಖನಗಳು, ವಿಮರ್ಶಾ ಬರಹಗಳು, ವಿಚಾರ ಸಂಕಿರಣಗಳು ನಡೆದಿವೆ. ಆದರೆ ಸ್ತ್ರೀವಾದಿ ದೃಷ್ಟಿಕೋನದ ನೆಲೆಯಿಂದ ಇದೇ ಮೊದಲ ಅಧ್ಯಯನ ಎನ್ನಬೇಕು.

ರಾಮಾಯಣ ಮಹಾಕಾವ್ಯಗಳಲ್ಲಿ ನಿರೂಪಿತವಾದ ಪುರುಷರ ಯಶೋಗಾಥೆ, ಸಾಧನೆ, ಶಕ್ತಿ, ಆಧ್ಯಾತ್ಮ ಶಕ್ತಿ, ಏಕಪತ್ನಿವ್ರತಸ್ಥತೆಯ ಕುರಿತು ಬಹುತೇಕ ಅಧ್ಯಯನಗಳು ನಡೆದಿವೆ. ಆದರೆ ರಾಮಾಯಣದ ಸ್ತ್ರೀಶಕ್ತಿಯನ್ನು ಅನಾವರಣಗೊಳಿಸಿದ ಅಧ್ಯಯನಗಳು ವಿರಳ ಎಂದೇ ಹೇಳಬೇಕು. ಶಿಷ್ಟ ಪರಂಪರೆಯ ಪೂರ್ವಕಲ್ಪಿತ ಸಿದ್ಧಾಂತಗಳನ್ನು ಒಡೆದ ಮಹಾಕಾವ್ಯ ಇದು. ಇಲ್ಲಿ ಮಹಿಳಾಸಮುದಾಯದ ಬದುಕನ್ನು ಕಟ್ಟುವ ಉದ್ದೇಶವಿದೆ. ಹೀಗೆ ಸ್ತ್ರೀಜಗತ್ತಿನ ಶಕ್ತಿ, ಸಾಮರ್ಥ್ಯ, ಸಾಧನೆ, ಚೈತನ್ಯದ ನೆಲೆಗಳನ್ನು ಅಭ್ಯಾಸ ಮಾಡುವ ಉದ್ದೇಶ ನನ್ನದು. ಈ ಎಲ್ಲಾ ಧನಾತ್ಮಕ ಅಂಶಗಳನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮೂಲಕ ಪರಿಗ್ರಹಿಸಲು ಸಾಧ್ಯ. ಈ ಕಾರಣದಿಂದಾಗಿಯೇ ಈ ಮಹಾಕಾವ್ಯದ ಸ್ತ್ರೀಲೋಕವನ್ನು ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಪ್ರಸ್ತುತ ಮಹಿಳಾ ಸ್ಥಿತಿಗತಿಯ ಅನಾವರಣವಿದೆ. ವ್ಯವಸ್ಥೆಯನ್ನು ಒಪ್ಪಿ ಬದುಕುವ, ಪ್ರಶ್ನಿಸುವ ಮತ್ತು ಪ್ರತಿಭಟಿಸುವ ಮಹಿಳಾ ಪಾತ್ರಗಳ ಶಕ್ತಿ, ಸಾಮರ್ಥ್ಯ ಮತ್ತು ದಿಟ್ಟತೆಯ ನೆಲೆಗಳನ್ನು ಇಲ್ಲಿ ಅಭ್ಯಾಸ ಮಾಡಲಾಗಿದೆ. ಪ್ರಸ್ತುತ ಮಹಿಳಾಸಮುದಾಯದ ಸ್ಥಿತಿಗತಿ ಮತ್ತು ಈ ಸ್ಥಿತಿಗೆ ಕಾರಣವಾದ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ಪಕ್ಷಪಾತ ನಿಲುವು ಮತ್ತು ದಬ್ಬಾಳಿಕೆಯನ್ನು ಈ ಮಹಾಕಾವ್ಯದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಈ ಮಹಾಕಾವ್ಯದಲ್ಲಿ ಸಮಕಾಲೀನ ಪ್ರಜ್ಞೆ ಇದೆ. ಈ ಕಾವ್ಯದ ಹಿನ್ನೆಲೆಯಲ್ಲಿ ಸ್ತ್ರೀಯರ ಅಂತರಂಗದ ಭಾವಾಭಿಲಾಷೆ, ನೋವು, ಹತಾಶೆ, ವಿರಹ, ಸಂವೇದನೆಯನ್ನು ಪರಿಗ್ರಹಿಸಲಾಗಿದೆ. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಕೇಂದ್ರೀಕರಿಸಿ ನಿರೂಪಿತವಾದ ಮಹಾಕಾವ್ಯಗಳು ಮಹಿಳೆಯರ ಅಂತರಂಗಸಂವೇದನೆಯನ್ನು ಪರಿಗ್ರಹಿಸಿಲ್ಲ. ಮಹಿಳಾಸಮುದಾಯವನ್ನು ದಾಸಿಯಾಗಿ, ರಕ್ಕಸಿಯಾಗಿ, ದೇವಿಯಾಗಿ ನಿರೂಪಿಸುವ ತುಡಿತದಲ್ಲಿ ಮಾನವಸಹಜ ಗುಣಗಳನ್ನು ಅಡಗಿಸಿದೆ. ಇಂಥ ಮಹಾಕಾವ್ಯಗಳು ಪುರುಷರ ನೆಲೆಯಿಂದ ಮಹಿಳೆಯರ ಬದುಕನ್ನು ಕಟ್ಟಿಕೊಟ್ಟಿವೆ. ಈ ಬಗೆಯ ಕಟ್ಟುವಿಕೆ ಪಕ್ಷಪಾತ ನಿಲುವನ್ನು ಗಟ್ಟಿಗೊಳಿಸಿದೆ. ಇಂಥ ಮಹಾಕಾವ್ಯಗಳಿಗಿಂತ ಭಿನ್ನವಾಗಿರುವ ಈ ಮಹಾಕಾವ್ಯ ಪೂರ್ವಗ್ರಹಗಳಿಂದ ದೂರ ಉಳಿದಿದೆ. ಹೀಗೆ ನಿಷ್ಪಕ್ಷಪಾತ ಧೋರಣೆ ತಳೆದಿರುವ ಈ ಮಹಾಕಾವ್ಯದ ಅಧ್ಯಯನ ಪ್ರಸ್ತುತ ಸಮಾಜದ ಅಧ್ಯಯನವೂ ಆಗಿದೆ. ಈ ಕೃತಿಯ ಅಧ್ಯಯನದಿಂದ ಸಮಾಜ ವಿಮರ್ಶೆಯೊಂದಿಗೆ ಬದುಕಿನ ವಿಭಿನ್ನ ನೆಲೆಗಳನ್ನು ಅಭ್ಯಸಿಸುವ ಉದ್ದೇಶವೂ ಸೇರಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನದಿಂದ ಸ್ತ್ರೀಸಮುದಾಯದ ಏಳು-ಬೀಳುಗಳನ್ನು ಪರಿಶೀಲಿಸುವ ಉದ್ದೇಶವಿದೆ. ಸಾಹಿತ್ಯಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಸ್ತ್ರೀಸಮುದಾಯದ ಯಾತನೆ ಮತ್ತು ಪರಿವರ್ತನೆಯ ನೆಲೆಗಳನ್ನು ಶೋಧಿಸಲಾಗಿದೆ. ಸ್ತ್ರೀಯರ ಬದುಕಿನ ಸುಧಾರಣೆಯ ಧ್ವನಿ ಈ ಮಹಾಕಾವ್ಯದಲ್ಲಿ ಕೇಳಿಬಂದಿದೆ. ಸ್ತ್ರೀಯರನ್ನು ಅಬಲೆಯಾಗಿ, ದುರ್ಬಲೆಯಾಗಿ ನಿರೂಪಿಸುವ ಉದ್ದೇಶವನ್ನು ಈ ಮಹಾಕಾವ್ಯ ಒಡೆದಿದೆ. ನಿರ್ದಿಷ್ಟ ವ್ಯಾಪ್ತಿಯೊಳಗೆ ಮಹಿಳೆಯನ್ನು ಬಂಧಿಯಾಗಿಸುವ ಪ್ರಕ್ರಿಯೆಗೆ ವ್ಯತಿರಿಕ್ತವಾಗಿ ಇಲ್ಲಿನ ಪ್ರತಿಯೊಂದು ಪಾತ್ರಗಳೂ ತಮ್ಮ ತಮ್ಮ ಬದುಕನ್ನು ಕಟ್ಟುವ ಮಾದರಿಯಲ್ಲಿ ನಿರೂಪಿತವಾಗಿದೆ. ಮಾನವೀಯ ಮತ್ತು ನೈತಿಕ ನೆಲೆಯಲ್ಲಿ ಬದುಕನ್ನು ಕಟ್ಟುವ ಉದ್ದೇಶ ಇಲ್ಲಿನ ಪ್ರತಿಯೊಂದು ಮಹಿಳಾ ಪಾತ್ರಗಳಿಗೂ ಇದೆ. ಅಸ್ತಿತ್ವ ಪ್ರತಿಷ್ಠಾಪನೆಗಾಗಿ ಈ ಮಹಾಕಾವ್ಯದ ಮಹಿಳಾ ಪಾತ್ರಗಳು ಹೋರಾಟ ನಡೆಸುತ್ತವೆ. ಈ ಹೋರಾಟ ಸಾಮಾಜಿಕ ಸಮಾನತೆಯನ್ನು ಗಿಟ್ಟಿಸಿಕೊಂಡಿವೆ. ಹೀಗೆ ಸ್ವಂತಿಕೆಯ ನೆಲೆಯಿಂದ ತಮ್ಮ ಧ್ಯೇಯೋದ್ದೇಶವನ್ನು ಪರಿಪೂರ್ಣಗೊಳಿಸುವ ಈ ಮಹಾಕಾವ್ಯದ ಮಹಿಳಾ ಪಾತ್ರಗಳ ಅನನ್ಯತೆಯನ್ನು ಶೋಧಿಸುವುದು ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನದ ಮೂಲಕ ಮಹಿಳಾಸಮುದಾಯದ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸಲು ಸಾಧ್ಯ. ಈ ಮಹಾಕಾವ್ಯದ ನೂತನ ಪಾತ್ರಗಳೂ ಬದುಕಿನ ಅರ್ಥವಂತಿಕೆಯ ಕುರಿತು ಮಾತಾಡುತ್ತವೆ. ಅಸ್ತಿತ್ವದ ಉಳಿವಿಕೆಗಾಗಿ ಹೋರಾಡುತ್ತವೆ. ಹೀಗೆ ನಿರೂಪಿತಗೊಂಡ ನೂತನ ಪಾತ್ರನಿರ್ಮಿತಿಯ ಹಿಂದೆ ಕವಿಯ ಮನೋಭಿಲಾಷೆ, ಉದಾತ್ತ ಧ್ಯೇಯ ವ್ಯಕ್ತವಾಗುತ್ತದೆ. ಹೊಸ ಹೊಸ ಪರಿಕಲ್ಪನೆಯನ್ನು ಹುಟ್ಟುಹಾಕುವುದರೊಂದಿಗೆ ಮಾನವೀಯ ಸಂಬಂಧಗಳ ಉಳಿವಿಕೆಗಾಗಿ ಇಲ್ಲಿ ಹೋರಾಟ ನಡೆದಿದೆ. ಹೀಗೆ ಬದುಕನ್ನು ಕಟ್ಟುವ ನೆಲೆಯಲ್ಲಿ ಎದುರಾಗುವ ಏರುಪೇರನ್ನು ಎದುರಿಸುವ ಮಹಿಳಾಸಮುದಾಯದ ದಿಟ್ಟತೆಯನ್ನು ಈ ಮಹಾಕಾವ್ಯದ ಹಿನ್ನೆಲೆಯಲ್ಲಿ ಅಭ್ಯಸಿಸುವುದು ಅಧ್ಯಯನದ ಒಂದು ಉದ್ದೇಶವಾಗಿದೆ.

ಈ ಮಹಾಕಾವ್ಯದ ಕವಿ ಸಂವೇದನಾಶೀಲರು. ಭಾವಸಂವೇದನೆಯ ನೆಲೆಯಲ್ಲಿ ಬದುಕನ್ನು ಕಂಡವರು. ಈ ಕಾರಣದಿಂದಾಗಿಯೇ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿಯ ಮನಸ್ಸು ತುಡಿದಿರುವುದು ಸ್ಪಷ್ಟವಾಗುತ್ತದೆ. ಶತಮಾನಗಳಿಂದ ಪುರುಷಸಮುದಾಯ ಒಡ್ಡುವ ಆತಂಕಕಾರಿ ವ್ಯವಸ್ಥೆಗೆ ಮಹಿಳಾಸಮುದಾಯ ತನ್ನನ್ನು ಒಳಪಡಿಸುತ್ತಾ ಬಂದಿದೆ. ಈ ನೆಲೆಯಲ್ಲಿ ನರಳಾಡುತ್ತಾ ಅಸಹಾಯಕತೆಯಲ್ಲೇ ಬದುಕಿನ ಅಂತ್ಯ ಕಂಡಿದೆ. ಪುರುಷರ ದಬ್ಬಾಳಿಕೆಯನ್ನು

ಸಾಧನೆಯನ್ನಾಗಿ ಪರಿಗ್ರಹಿಸಿದ ಬಹುತೇಕ ರಾಮಾಯಣ ಕಾವ್ಯಗಳು ಸ್ತ್ರೀಸಂವೇದನೆಯನ್ನು ಪರಿಗ್ರಹಿಸದೆ ಪುರುಷಪರ ನಿಲುವುಗಳನ್ನು ಅಭಿವ್ಯಕ್ತಗೊಳಿಸಿದೆ. ಆದರೆ ಈ ಮಹಾಕಾವ್ಯ ಸ್ತ್ರೀಸಮುದಾಯವನ್ನು ಜೀವದ ನೆಲೆಯಲ್ಲಿ ಪರಿಗ್ರಹಿಸಿದೆ. ಶೋಷಣೆಗೆ ಒಳಗಾದ ಮಹಿಳಾಸಮುದಾಯದ ಕುರಿತು ಕವಿಯ ವಿಶೇಷ ಕಾಳಜಿ ಅಭಿವ್ಯಕ್ತಗೊಂಡಿದೆ. ಪುರುಷಸಮುದಾಯ ಸ್ತ್ರೀಸಮುದಾಯವನ್ನು ಯಾವ ಯಾವ ನೆಲೆಯಲ್ಲಿ ಶೋಷಿಸುತ್ತದೆ? ಮತ್ತು ತನ್ನ ಅನುಕೂಲಕ್ಕೆ ತಕ್ಕಂತೆ ಹೇಗೆ ಬಳಸಿಕೊಳ್ಳುತ್ತದೆ? ಎಂಬುದನ್ನು ನಿರೂಪಿಸಲಾಗಿದೆ. ಈ ಸಂವೇದನೆಯ ಫಲಶ್ರುತಿಯಾಗಿ ಕವಿ ಈ ಮಹಾಕಾವ್ಯದ ಮಹಿಳಾ ಪಾತ್ರಗಳನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ಕಟ್ಟಿದ್ದಾರೆ. ಹೀಗೆ ನಿರೂಪಿತವಾದ ಮಹಾಕಾವ್ಯದಲ್ಲಿ ಸಾರ್ವಕಾಲಿಕ ಸತ್ಯವಿದೆ. ಈ ಮಹಾಕಾವ್ಯ ಸಾರ್ವತ್ರಿಕ ಮೌಲ್ಯವನ್ನು ಪ್ರತಿಪಾದಿಸುತ್ತದೆ. ಹೀಗೆ ವರ್ತಮಾನ ಮತ್ತು ಭವಿಷ್ಯತ್ತಿಗೆ ಪೂರಕವಾದ ಸಂದೇಶ ಸಾರುವ ಈ ಮಹಾಕಾವ್ಯದ ಅಧ್ಯಯನದ ಔಚಿತ್ಯ ಇದೆ. ಈ ಕಾರಣದಿಂದಾಗಿಯೇ ಈ ಮಹಾಕಾವ್ಯವನ್ನು ಸಂಶೋಧನ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕಥಾವಸ್ತು ಪುರಾಣದ್ದಾದರೂ ಕವಿ ಮೊಯಿಲಿ ಅವರ ಕೈಯಲ್ಲಿ ಅದು ಹೊಸ ಅವತಾರವನ್ನು ಪಡೆದಿದೆ. ಸಮಕಾಲೀನ ಸಮಸ್ಯೆಗಳನ್ನು ಎಳೆ ಎಳೆಯಾಗಿ ಬಿತ್ತರಿಸುತ್ತಾ ದೇಶ ಪ್ರಗತಿಪಥದತ್ತ ಮುನ್ನಡೆಯಬೇಕು ಎಂಬ ಚಿಂತನೆಯನ್ನು ಮುಂದಿಟ್ಟಿದ್ದಾರೆ. ಒಂದು ರಾಷ್ಟ್ರದ ಪರಿಕಲ್ಪನೆ ವಿಶಾಲವಾದುದು. ಜನಸಾಮಾನ್ಯನಿಂದ ತೊಡಗಿ ಪ್ರತಿಯೊಬ್ಬ ನಾಗರಿಕನೂ ಈ ವ್ಯಾಪ್ತಿಗೆ ಒಳಪಡುತ್ತಾನೆ. ಆದ್ದರಿಂದ ಮಹಿಳಾಸಮುದಾಯದ ತಿರಸ್ಕಾರ ಸಲ್ಲದು. ವ್ಯಕ್ತಿಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ತತ್ವಾದರ್ಶಗಳು ಪ್ರತಿಯೊಬ್ಬರಿಗೂ ದಕ್ಕುವಂತಾಗಬೇಕು. ಈ ಅವಕಾಶವನ್ನು ಪಡೆದುಕೊಳ್ಳುವಲ್ಲಿ ಸ್ತ್ರೀ–ಪುರುಷ, ಕುಲಜ–ಕುಲಹೀನ, ಧನಿಕ–ಬಡವ, ಉಚ್ಚ–ನೀಚ ಎಂಬ ಭೇದ ಸಲ್ಲದು. ಲಿಂಗಭೇದರಹಿತ ಸಮಾಜ ನಿರ್ಮಾಣದೊಂದಿಗೆ ವರ್ಣಾಶ್ರಮ ಪದ್ಧತಿ ಬುಡಸಮೇತ ನಿರ್ನಾಮವಾಗಬೇಕು ಎಂಬ ಆಶಯ ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಈ ಎಲ್ಲ ಚಿಂತನೆಗಳು ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಾದವು. ಹೀಗೆ ಪ್ರಸ್ತುತ ಸಂದರ್ಭದೊಂದಿಗೆ ಸಂವಾದಿಸುತ್ತಾ ಪ್ರತಿಕ್ರಿಯಿಸುವ ಈ ಮಹಾಕಾವ್ಯದಲ್ಲಿ ಸಮಕಾಲೀನ ಮೌಲ್ಯವಿದೆ. ಈ ಮೌಲ್ಯಗಳು ಜೀವನ ಸಿದ್ಧಾಂತವನ್ನು ಪ್ರಸ್ತುತಪಡಿಸುತ್ತವೆ. ಹೀಗೆ ಬದುಕಿನ ಹಾದಿಯನ್ನು ರೂಪಿಸಿಕೊಡುವ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನ ನಡೆಸುವ ಉದ್ದೇಶವಿದೆ.

## ೨.೨ ಅಧ್ಯಯನದ ವ್ಯಾಪ್ತಿ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ವ್ಯಾಪ್ತಿ ವಿಶಾಲವಾದುದು. ಈ ಮಹಾಕಾವ್ಯದ ಅಧ್ಯಯನ ಮಹಾಕಾವ್ಯದ ಸ್ತ್ರೀಪಾತ್ರಗಳ ಬದುಕಿನ ಶೋಧದ ನೆಲೆಯಲ್ಲಿ ಸಾಗುತ್ತದೆ. ಈ ಮಹಾಕಾವ್ಯ ಬಿಡಿ ಬಿಡಿಯಾದ ಐದು ಸಂಪುಟಗಳಲ್ಲಿ ಇವೆ. ಈ ಐದು ಬಿಡಿ ಬಿಡಿ ಸಂಪುಟಗಳನ್ನು ಒಟ್ಟಿಗೆ ಸೇರಿಸಿ ಒಂದೇ ಸಂಪುಟವಾಗಿ ಹೊರತರಲಾಗಿದೆ. ಇಲ್ಲಿ ಕವಿ ಸಂಪುಟಗಳನ್ನು ಸೋಪಾನಗಳೆಂದು ಕರೆದಿದ್ದಾರೆ. ಪ್ರತಿ ಸೋಪಾನದಲ್ಲೂ ನಲವತ್ತೈದು ಪ್ರಸ್ಥಾನಗಳಿವೆ. ಒಟ್ಟು ೨೨೫ ಪ್ರಸ್ಥಾನಗಳಿವೆ. ಸಮಗ್ರ ಸೋಪಾನಗಳನ್ನು ಅಧ್ಯಯನಕ್ಕೆ ತೊಡಗಿಸಿಕೊಳ್ಳಲಾಗಿದೆ. ಇಲ್ಲಿ ನಿರೂಪಿತವಾದ ಮಹಿಳಾಸಮುದಾಯದ ಬದುಕನ್ನು ಕೇಂದ್ರಕ್ಕೆ ತಂದು ಅಭ್ಯಾಸ ಮಾಡಲಾಗಿದೆ. ದಾಸಿಯಿಂದ ತೊಡಗಿ ರಾಣಿಯವರೆಗಿನ ಮಹಿಳಾ ಪಾತ್ರಗಳ ಬದುಕು ಬವಣೆ ಮತ್ತು ಶಕ್ತಿಯ ನೆಲೆಗಳನ್ನು ಶೋಧಿಸುವುದು ನನ್ನ ಅಧ್ಯಯನದ ವ್ಯಾಪ್ತಿ. ಇದರೊಂದಿಗೆ ಕೆಲವು ಮಹಿಳಾಪಾತ್ರಗಳ ತಾಳ್ಮೆ ಮತ್ತು ಕೆಲವು ಮಹಿಳಾ ಪಾತ್ರಗಳ ಆಕ್ರೋಶದ ನೆಲೆಗಳನ್ನು ಗುರುತಿಸಲಾಗಿದೆ. ಕೆಲವು ವಿನೂತನ ಪಾತ್ರಗಳು ಕವಿಯ ಮನೋಕಲ್ಪಿತ ಭಿತ್ತಿಯಲ್ಲಿ ರೂಪುಗೊಂಡಿದ್ದು ಅಧ್ಯಯನದ ಆಳವನ್ನು ವಿಸ್ತರಿಸುವಂತೆ ಮಾಡಿದೆ. ಪ್ರಸ್ತುತ ಸಂದರ್ಭಕ್ಕೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಸ್ಪಂದಿಸಿದ ರೀತಿ, ಪ್ರತಿಕ್ರಿಯಿಸಿದ ಬಗೆ ಅಧ್ಯಯನಕ್ಕೆ ಪೂರಕ ಮಾಹಿತಿಯಾಗಿದೆ.

ವ್ಯವಸ್ಥೆಯನ್ನು ಒಪ್ಪಿ ಬದುಕುವ ಮಾದರಿ ಪಾತ್ರಗಳನ್ನು ಸಾಂಪ್ರದಾಯಿಕ ಮಾದರಿ ಪಾತ್ರಗಳು ಎಂಬುದಾಗಿ, ವ್ಯವಸ್ಥೆಯ ಕುರಿತು ಆಕ್ರೋಶ ವ್ಯಕ್ತಪಡಿಸುವ ಪಾತ್ರಗಳನ್ನು ಪ್ರತಿಭಟನಾತ್ಮಕ ಮಾದರಿ ಪಾತ್ರಗಳು ಎಂಬುದಾಗಿ ಮತ್ತು ಸ್ವಂತಿಕೆಯ ನೆಲೆಯಿಂದ ಪ್ರತಿಕ್ರಿಯಿಸುವ ಪಾತ್ರಗಳನ್ನು ಸ್ವತಂತ್ರ ಮಾದರಿ ಪಾತ್ರಗಳು ಎಂಬುದಾಗಿ ಗುರುತಿಸಲಾಗಿದೆ. ಹೀಗೆ ಅಧ್ಯಯನದ ಅನುಕೂಲತೆಗಾಗಿ ಮೂರು ಮಾದರಿಗಳಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಪಾತ್ರಗಳನ್ನು ಗುರುತಿಸಿಕೊಳ್ಳಲಾಗಿದೆ. ಹೀಗೆ ಗುರುತಿಸಿಕೊಂಡರೂ ಇಲ್ಲಿನ ಮಹಿಳಾ ಪಾತ್ರಗಳು ಸೀಮಿತ ವ್ಯಾಪ್ತಿಯೊಳಗೆ ನಿಂತುಬಿಡುವುದಿಲ್ಲ. ಸಂದರ್ಭಕ್ಕೆ ಅನುಗುಣವಾಗಿ ನಿರ್ದಿಷ್ಟ ಚೌಕಟ್ಟನ್ನು ಮೀರಿ ಪ್ರತಿಕ್ರಿಯಿಸುತ್ತವೆ. ಹೀಗಾಗಿ ಈ ಮಹಾಕಾವ್ಯದ ಮಹಿಳಾ ಪಾತ್ರಗಳನ್ನು ಮಾದರಿ ಪಾತ್ರಗಳು ಎಂಬುದಾಗಿ ಗುರುತಿಸಿಕೊಳ್ಳಬೇಕಷ್ಟೇ ವಿನಾ ವಿಭಾಗಿಸಿಕೊಳ್ಳುವಂತಿಲ್ಲ.

ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳ ಅನನ್ಯತೆಯನ್ನು ಗುರುತಿಸುವ ಉದ್ದೇಶದಿಂದ ಒಂದು ಅಧ್ಯಾಯವನ್ನು ತೌಲನಿಕ ಅಧ್ಯಯನಕ್ಕೆ ಮೀಸಲಿರಿಸಲಾಗಿದೆ.

ಲಿಖಿತ ರಾಮಾಯಣ ಪರಂಪರೆಯಲ್ಲಿ ಮುಖ್ಯವಾಗಿ ಡಿ.ವಿ.ಜಿಯವರ 'ಶ್ರೀ ರಾಮಪರೀಕ್ಷಣಂ', ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಶ್ರೀರಾಮ ಪಟ್ಟಾಭಿಷೇಕ'ವನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದೊಂದಿಗೆ ಮುಖಾಮುಖಿಯಾಗಿಸಿ ಅಭ್ಯಸಿಸಲಾಗಿದೆ. ಮೌಖಿಕ ರಾಮಾಯಣ ಪರಂಪರೆಯಲ್ಲಿ ಮುಖ್ಯವಾಗಿ 'ಗೊಂಡರ ರಾಮಾಯಣ', 'ಹೊನ್ನಾಜಮ್ಮ ಹಾಡಿದ ರಾಮಾಯಣ', ಸಾವಿತ್ರಮ್ಮ ಹಾಡಿದ 'ಸನತ್ಕುಮಾರನ ಕಥೆ', 'ಕಂಸಾಳೆ ರಾಮಾಯಣ', ತಂಬೂರಿ ಸಂಪ್ರದಾಯದ 'ಸಂಪೂರ್ಣ ರಾಮಾಯಣ'ಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹೀಗೆ ಲಿಖಿತ ಮತ್ತು ಮೌಖಿಕ ರಾಮಾಯಣ ಕಾವ್ಯ ಪರಂಪರೆಯೊಂದಿಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮುಖಾಮುಖಿಯಾಗಿಸಿ ಅಭ್ಯಾಸ ಮಾಡಿ ಈ ಮಹಾಕಾವ್ಯದಲ್ಲಿ ಅನಾವರಣಗೊಳ್ಳುವ ಸ್ತ್ರೀ ಕಥನದ ಸ್ವರೂಪವನ್ನು ವಿವೇಚಿಸಲಾಗಿದೆ. ಲಿಖಿತ ಮತ್ತು ಮೌಖಿಕ ರಾಮಾಯಣ ಪರಂಪರೆ ಸ್ತ್ರೀಸಮುದಾಯಕ್ಕೆ ನಿರ್ದಿಷ್ಟ ಗುಣಗಳನ್ನು ಆರೋಪಿಸಿದೆ. ಈ ಆರೋಪವನ್ನು ಪ್ರಸ್ತುತ ಕಾವ್ಯ ನಿವಾರಿಸಿದೆ. ಈ ನಿವಾರಣಾ ತಂತ್ರ ಸಂಶೋಧನ ಅಧ್ಯಯನದ ವ್ಯಾಪಕತೆಯನ್ನು ವಿಸ್ತರಿಸಿದೆ. ಸ್ತ್ರೀಸಂವೇದನೆಯೊಂದಿಗೆ ದಲಿತ ಸಂವೇದನೆಯನ್ನು ಬಿಂಬಿಸುವ ಉದ್ದೇಶ ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಆದರೆ ನನ್ನ ಅಧ್ಯಯನದಲ್ಲಿ ಮುಖ್ಯವಾಗಿ ಸ್ತ್ರೀಸಮುದಾಯದ ಅಂತರಂಗ ತುಡಿತವನ್ನು ಪರಿಗ್ರಹಿಸಲಾಗಿದೆ. ಈ ವಿಚಾರದಲ್ಲಿ ನನ್ನ ಅಧ್ಯಯನದ ವ್ಯಾಪ್ತಿ ಸ್ತ್ರೀಸಮುದಾಯದ ತುಮುಲವನ್ನು ಗ್ರಹಿಸುವ ನಿರ್ದಿಷ್ಟ ಉದ್ದೇಶಕ್ಕೆ ಒಳಪಟ್ಟಿದೆ. ಇದರೊಂದಿಗೆ ಸ್ತ್ರೀಯರ ದಾರುಣ ಸ್ಥಿತಿಗೆ ಕಾರಣವಾದ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ಕುರಿತು ವಿಶ್ಲೇಷಣೆ ನಡೆಸಲಾಗಿದೆ. ಲಿಂಗದ ನೆಲೆಯಲ್ಲಿ ನಡೆಯುತ್ತಿರುವ ಮಹಿಳಾ ದೌರ್ಜನ್ಯವನ್ನು ಪರಿಗ್ರಹಿಸುತ್ತ ಅದರ ನಿವಾರಣಾ ಅಗತ್ಯತೆಯನ್ನು ಮನಗಾಣುವುದು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟ ವಿಚಾರ. ಇದರೊಂದಿಗೆ ಮಹಿಳೆಯರ ಶೋಚನೀಯ ಸ್ಥಿತಿಯ ಕುರಿತು ಕಾಳಜಿ ವಹಿಸಿರುವ ಕವಿಯ ಅಂತರಂಗಸಂವೇದನೆಯನ್ನು ಗಮನಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳ ದಾರುಣ ಸ್ಥಿತಿಯನ್ನು ವಿವರಿಸುವ ಸೀಮಿತ ಉದ್ದೇಶ ನನ್ನ ಅಧ್ಯಯನಕ್ಕೆ ಇಲ್ಲ. ಅವಕಾಶ ಸಿಕ್ಕಲ್ಲೆಲ್ಲ ಮಹಿಳಾಸಮುದಾಯದ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಗುರುತಿಸಲಾಗಿದೆ. ಈ ಮಹಾಕಾವ್ಯದ ಮಹಿಳಾ ಪಾತ್ರಗಳ ಮಾನಸಿಕ ಶಕ್ತಿ, ಚೈತನ್ಯಶಕ್ತಿಯನ್ನು ಗುರುತಿಸುವ ವಿಶಾಲ ದೃಷ್ಟಿಕೋನದ ನೆಲೆಯಲ್ಲಿ ಈ ಅಧ್ಯಯನ ಸಾಗಿದೆ. ರಾಮಾಯಣ ಮಹಾಕಾವ್ಯಗಳಲ್ಲಿ ಪ್ರಭುಶಕ್ತಿ, ಪ್ರಜಾಶಕ್ತಿಯ ನಡುವಣ ಅಂತರ್‌ಸಂಬಂಧ ದಟ್ಟವಾಗಿದೆ. ಈ ನೆಲೆಯಲ್ಲಿ ಬಹುತೇಕ ಸಾಧಕ-ಬಾಧಕಗಳನ್ನು ಪರಿಗ್ರಹಿಸಲು ಸಾಧ್ಯ. ಪ್ರಜಾಪರಂಪರೆಯ ಅಸಹಾಯಕತೆ

ಮತ್ತು ರಾಜಪರಂಪರೆಯ ದಬ್ಬಾಳಿಕೆ ರಾಮಾಯಣ ಮಹಾಕಾವ್ಯಗಳ ಮೂಲಕ ಅಭಿವ್ಯಕ್ತಗೊಂಡಿದೆ. ರಾಜಪರಂಪರೆ ಪ್ರಜಾಸಮುದಾಯದ ಮೇಲೆ ಹೇರುವ ಒತ್ತಡ, ಪ್ರಭುಶಕ್ತಿಯ ತೀರ್ಪಿನ ಎದುರು ಮಹಿಳಾಸಮುದಾಯ ತತ್ತರಿಸುವ ಬಗೆ ಇತ್ಯಾದಿಗಳ ಅನ್ವೇಷಣೆ ಅಧ್ಯಯನದ ವ್ಯಾಪ್ತಿಯನ್ನು ವಿಶಾಲಗೊಳಿಸಿದೆ. ರಾಜಪರಂಪರೆಯ ಏಕಪಕ್ಷೀಯ ತೀರ್ಮಾನವನ್ನು ಪ್ರೋತ್ಸಾಹಿಸುವ ಉದ್ದೇಶ ನನ್ನ ಅಧ್ಯಯನಕ್ಕೆ ಇಲ್ಲ. ರಾಜಪರಂಪರೆ ಸ್ತ್ರೀಸಮುದಾಯಕ್ಕೆ ಒಡ್ಡುವ ಆತಂಕ, ಮಹಿಳಾಸಮುದಾಯ ಅದನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ಬಗೆಯನ್ನು ಕುರಿತು ಈ ಮಹಾಕಾವ್ಯದ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಲಾಗಿದೆ. ಮಹಿಳಾಸಮುದಾಯ ಪ್ರಭುತ್ವಪರಂಪರೆಯ ದೋಷವನ್ನು ಪರಿಗ್ರಹಿಸುವ ಮಟ್ಟಕ್ಕೆ ಬೆಳೆದ ಬಗೆ ಮತ್ತು ಪ್ರತಿಕ್ರಿಯಿಸುವ ರೀತಿಯ ಕುರಿತು ಅಭ್ಯಾಸಿಸಲಾಗಿದೆ. ರಾಮನ ಸಾಧನೆಯನ್ನು, ಸೀತೆಯ ಪಾತಿವ್ರತ್ಯವನ್ನು ಗುರುತಿಸುವ ಉದ್ದೇಶಕ್ಕೆ ಈ ಅಧ್ಯಯನ ಸೀಮಿತಗೊಂಡಿಲ್ಲ. ಮಹಿಳಾಸಮುದಾಯದ ಅಂತರಂಗಶಕ್ತಿಯನ್ನು ಪರಿಗ್ರಹಿಸುವ ಮಟ್ಟಕ್ಕೆ ಬೆಳೆದಿದೆ.

ಮಹಾನ್ವೇಷಣಂ ಮಹಾಕಾವ್ಯದ ಸ್ತ್ರೀಲೋಕಕ್ಕೆ ಸಂಬಂಧಿಸಿದಂತೆ ಕೇವಲ ಅಂತಃಪುರದ ರಾಣಿಯರ ಬದುಕನ್ನು ಅಭ್ಯಾಸ ಮಾಡುವ ಸೀಮಿತ ಉದ್ದೇಶವಿಲ್ಲ. ಇದರೊಂದಿಗೆ ಋಷಿಪತ್ನಿಯರ, ದಾಸಿಯರ, ಸಾಮಾನ್ಯ ಮಹಿಳೆಯರ ಬದುಕನ್ನು ಅಧ್ಯಯನ ಮಾಡುವ ವಿಶಾಲ ಉದ್ದೇಶವೂ ಸೇರಿದೆ. ವಿಭಿನ್ನ ಸ್ತರದ ಮಹಿಳೆಯರು ತಮ್ಮ ತಮ್ಮ ವ್ಯಾಪ್ತಿಯಲ್ಲಿ ಹೇಗೆ ಶೋಷಣೆಗೆ ಒಳಗಾಗುತ್ತಿದ್ದಾರೆ? ಹೇಗೆ ಸಹಿಸಿಕೊಳ್ಳುತ್ತಿದ್ದಾರೆ? ಮತ್ತು ಹೇಗೆ ಪ್ರತಿಭಟಿಸುತ್ತಿದ್ದಾರೆ? ಎಂಬುದನ್ನು ಅಧ್ಯಯನ ಮಾಡಲಾಗಿದೆ. ರಾಜನ ನೆಲೆಯಿಂದ, ಋಷಿಯ ನೆಲೆಯಿಂದ ಸಾಮಾನ್ಯ ಪ್ರಜೆಯ ನೆಲೆಯಿಂದ ನಡೆಯುವ ಶೋಷಣೆಯನ್ನು ಕೇಂದ್ರಕ್ಕೆ ತಂದು ಅಭ್ಯಸಿಸಲಾಗಿದೆ. ಹೀಗೆ ನಲುಗಿಸುವ ಪುರುಷರ ಶಕ್ತಿರಾಜಕಾರಣ ಮತ್ತು ನಲುಗುವ ಶೋಷಿತ ಮಹಿಳಾಸಮುದಾಯದ ಬದುಕು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ.

ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪುರುಷರಿಂದ ಸ್ತ್ರೀಯರ ಮೇಲೆ ದಬ್ಬಾಳಿಕೆ ನಡೆಯುತ್ತಿದೆ. ಕುಟುಂಬ ವ್ಯಾಪ್ತಿಯ ಒಳಗಡೆ ನಡೆಯುವ ಶೋಷಣೆ ಎಂದಿಗೂ ಶೋಷಣೆಯಾಗಿ ಕಾಣುವುದಿಲ್ಲ. ಇಂಥ ಸೂಕ್ಷ್ಮರೂಪಿ ಶೋಷಣೆಯ ನೆಲೆಗಳನ್ನು ಈ ಮಹಾಕಾವ್ಯದ ಮೂಲಕ ಅನ್ವೇಷಿಸಲಾಗಿದೆ. ಈ ಮೂಲಕ ಸ್ತ್ರೀಸಮುದಾಯದ ಬದುಕಿಗೆ ಪೂರಕವಾದ ಮಾರ್ಪಾಟು ಮತ್ತು ಅವಕಾಶಗಳ ಕುರಿತು ಮಾತಾಡಲಾಗಿದೆ. ಈ ಅವಕಾಶ ಸಮಸ್ತ ಸ್ತ್ರೀಸಮುದಾಯಕ್ಕೆ ದಕ್ಕಬೇಕು ಎಂಬುದು ಈ ಅಧ್ಯಯನದ ಪ್ರಧಾನ ಉದ್ದೇಶ. ಈ ಉದ್ದೇಶದ ಹಿನ್ನೆಲೆಯಲ್ಲಿಯೇ ಈ ಮಹಾಕಾವ್ಯದ ಮಹಿಳಾ ಪಾತ್ರಗಳ ಬದುಕನ್ನು ಶೋಧಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಯಾವ ಪಾತ್ರಗಳನ್ನೂ ಒಳ್ಳೆಯ ಯಾ ಕೆಟ್ಟ ಪಾತ್ರಗಳು ಎಂಬುದಾಗಿ ವಿಭಾಗಿಸಿಕೊಂಡಿಲ್ಲ. ಆಯಾಯ ಸಂದರ್ಭ ಮತ್ತು ಸನ್ನಿವೇಶಕ್ಕೆ ತಕ್ಕಂತೆ ಇಲ್ಲಿನ ಪಾತ್ರಗಳು ಸ್ಪಂದಿಸಿವೆ. ಇಲ್ಲಿ ಸರಿ-ತಪ್ಪುಗಳ ವಿಶ್ಲೇಷಣೆಗಿಂತ ಬದುಕಿನ ಪ್ರಶ್ನೆ ಬಹುಮುಖ್ಯವಾಗುತ್ತದೆ. ನಿರ್ದಿಷ್ಟ ಪಾತ್ರಗಳಿಗೆ ನಿರ್ದಿಷ್ಟ ಗುಣಾವಗುಣಗಳನ್ನು ಆರೋಪಿಸುವ ಉದ್ದೇಶ ಈ ಅಧ್ಯಯನಕ್ಕೆ ಇಲ್ಲ. ವ್ಯಕ್ತಿಸ್ವಾತಂತ್ರ್ಯದ ಅಗತ್ಯತೆಯನ್ನು ಮನಗಾಣುವ ಉದ್ದೇಶವಿದೆ. ಈ ನೆಲೆಯಲ್ಲಿ ಎದುರಾಗುವ ಸಾಧಕ-ಬಾಧಕಗಳನ್ನು ಪರಿಗ್ರಹಿಸುತ್ತಾ ರಾಜಪರಂಪರೆಯ ಏಕಪಕ್ಷೀಯ ನಿಲುವನ್ನು ಪ್ರಶ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾಸಮುದಾಯದ ಒಳತೋಟಿ, ಆತಂಕ, ತಲ್ಲಣವನ್ನು ಪರಿಗ್ರಹಿಸುವ ವಿಶಿಷ್ಟ ಉದ್ದೇಶವೂ ಸೇರಿದೆ.

### ೨.೩ ಅಧ್ಯಯನದ ನೋಟ

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ದೀರ್ಘಕಾಲದವರೆಗೆ ಮಾನ್ಯತೆ ಪಡೆದು ಚಿರ ಅಮರವಾಗಿರುವ ಸಾಹಿತ್ಯವೆಂದರೆ ರಾಮಾಯಣ. ಆದರೆ ಪ್ರಾಚೀನ ಮನೋಧರ್ಮದ ನೆಲೆಯಿಂದ ನಿರೂಪಿತವಾದ ರಾಮಾಯಣಗಳು ಕಾಲಿಕ ಬದಲಾವಣೆಗೆ ತುತ್ತಾಗಿ ರೂಪಾಂತರಗೊಂಡದ್ದು ಗಮನಾರ್ಹ ಸಂಗತಿ. ಜನಪದರು, ಕವಿಗಳು, ಕಲಾವಿದರು ಅವರವರ ಕಾಲಮಾನಕ್ಕೆ ತಕ್ಕಂತೆ ರಾಮಾಯಣವನ್ನು ಪುನರ್ ಸಂಯೋಜಿಸುತ್ತಾ ಬಂದರು. ಪರಿವರ್ತನಶೀಲತೆಯ ಪರಿಣಾಮವಾಗಿ ಜನಸಾಮಾನ್ಯನಿಂದ ತೊಡಗಿ ಪಂಡಿತಸಮುದಾಯದವರೆಗೂ ರಾಮಾಯಣ ಎಲ್ಲರಿಗೂ ಆತ್ಮೀಯವಾದ ಸಾಹಿತ್ಯವಾಗುವಂತಾಯಿತು. ಹೀಗೆ ಪುನಾರಚನೆಗೆ ಒಳಗಾದ ರಾಮಾಯಣಗಳು ಸಂಸ್ಕೃತಿಯ ಪ್ರತಿಬಿಂಬಿತವಾಗಿವೆ. ಹೀಗೆ ಸಂಸ್ಕೃತಿ ಮತ್ತು ಸಾಹಿತ್ಯಕೃತಿ ಪರಸ್ಪರ ಒಂದನ್ನೊಂದು ಪೋಷಿಸುತ್ತಾ ಸಮಾಜವನ್ನು ಪ್ರಭಾವಿಸಿವೆ. ಹೀಗೆ ಸಮಾಜವನ್ನು ಪ್ರಭಾವಿಸಿದ ರಾಮಾಯಣಗಳಿಗೆ ತನ್ನದೇ ಆದ ವಿಶಿಷ್ಟ ಶಕ್ತಿ ಇದೆ. ಈ ವಿಶಿಷ್ಟ ಶಕ್ತಿಯನ್ನು ನನ್ನ ಅಧ್ಯಯನದ ಮೂಲಕ ಕಂಡುಕೊಂಡು ಕೇಂದ್ರಕ್ಕೆ ತಂದು ನಿರೂಪಿಸಲಾಗಿದೆ.

ಪ್ರಾಚೀನ ರಾಮಾಯಣ ಮಹಾಕಾವ್ಯಗಳು ರಾಜಪರಂಪರೆಯ, ಋಷಿಪರಂಪರೆಯ ತಿಳುವಳಿಕೆಯನ್ನು ಗಟ್ಟಿಗೊಳಿಸಿವೆ. ಜನಸಾಮಾನ್ಯರ ಆಶೋತ್ತರಗಳನ್ನು ಅಂಚಿಗೆ ತಳ್ಳಿವೆ. ಲಿಂಗದ ನೆಲೆಯಲ್ಲಿ, ಜಾತಿಯ ನೆಲೆಯಲ್ಲಿ, ಸಂಪತ್ತಿನ ನೆಲೆಯಲ್ಲಿ ಸಮಾನತೆ ಸಾಧಿಸುವ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯಕ್ಕೆ ಇದೆ. ಜನಸಾಮ್ಯಾನರ ಬದುಕನ್ನು ಇಲ್ಲಿ ಭಿನ್ನ ನೆಲೆಗಳಲ್ಲಿ ನಿರೂಪಿಸಲಾಗಿದೆ. ಈ ಮಹಾಕಾವ್ಯದ ಪಾತ್ರನಿರೂಪಣಾ ತಂತ್ರದಲ್ಲಿ ನೈಜತೆ ಇದೆ, ಪ್ರಜಾಸಮುದಾಯದ ಕುರಿತು ಕಳಕಳಿ ವ್ಯಕ್ತವಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಸಾರ್ವಜನಿಕ ಹಿತಾಸಕ್ತಿಯನ್ನು ಪರಿಗಣಿಸಿದೆ. ಈ ಮೂಲಕ ಪ್ರಜಾಪರಂಪರೆಯ ಸಾಧಕ-ಬಾಧಕಗಳನ್ನು ಪ್ರಭುಪರಂಪರೆ ಅರ್ಥೈಸುವಂತೆ ಮಾಡಿದೆ. ರಾಜಪರಂಪರೆಯ ನಿಲುವು ಮತ್ತು ತೀರ್ಮಾನಗಳನ್ನು ಅರ್ಥೈಸಿಕೊಳ್ಳಬಲ್ಲ ಪ್ರಜಾಪರಂಪರೆ ಈ ಮಹಾಕಾವ್ಯದಲ್ಲಿ ಇದೆ. ಈ ಕಾವ್ಯ ಕೇವಲ ಗತಕಾಲದ ವೈಭವವಲ್ಲ, ಯುದ್ಧವಿಜಯವಲ್ಲ. ಪ್ರಚಲಿತ ವಿದ್ಯಮಾನಕ್ಕೆ ಅನುಗುಣವಾದ ವಿಚಾರಧಾರೆಗಳು ಇಲ್ಲಿವೆ. ಇದರೊಳಗೆ ಪ್ರಸ್ತುತ ಬದುಕಿನ ಜೊತೆ ಸಂಭಾಷಣೆ ಇದೆ. ಈ ಸಂಭಾಷಣೆಯನ್ನು ಕವಿ ನೇರವಾಗಿ ಮಾಡಿಲ್ಲ. ತನ್ನ ಅಂತರಂಗದ ಚಿಂತನೆಯನ್ನು ಪಾತ್ರಗಳ ಮೂಲಕ ಬಿಂಬಿಸಿದ್ದಾರೆ. ಇಲ್ಲಿ ಲಿಂಗ ಸಮಾನತೆಯ ತತ್ತ್ವವಿದೆ. ರಾಮ-ಸೀತೆ, ರಾವಣ-ಮಂಡೋದರಿ, ಅತ್ರಿ-ಅನಸೂಯ, ಅಗಸ್ತ್ಯ-ಲೋಪಾಮುದ್ರಾ ಹೀಗೆ ಭಿನ್ನ ಕುಲದವರ ಸಾಮರಸ್ಯದ ಬದುಕಿನ ಅನಾವರಣವಿದೆ. ಪತಿ ಪತ್ನಿಯರ ಸಾಮರಸ್ಯದ ಪರಿಣಾಮವಾಗಿ ಬದುಕು ಸಾರ್ಥಕಪಥದತ್ತ ಸಾಗುವುದು ಎಂಬ ಆಶಯ ಅಭಿವ್ಯಕ್ತಗೊಂಡಿದೆ. ಪ್ರಸ್ತುತ ಮಹಿಳಾಬದುಕಿನ ಅನಾವರಣದೊಂದಿಗೆ ಭವಿಷ್ಯದ ಸುಧಾರಣಾ ಅಪೇಕ್ಷೆ ಇದೆ.

ಇಲ್ಲಿನ ಪಾತ್ರಗಳು ತಮ್ಮ ಬಹುಮುಖಿ ವ್ಯಕ್ತಿತ್ವವನ್ನು ಅನಾವರಣ ಮಾಡುತ್ತವೆ. ಭಿನ್ನ ಸಂಸ್ಕೃತಿಯ ಮುಖಾಮುಖಿಯೊಂದಿಗೆ ಸಾಂಸ್ಕೃತಿಕ ಬದುಕನ್ನು ನಿರೂಪಿಸುತ್ತವೆ. ಇಲ್ಲಿನ ಮಹಿಳಾ ಪಾತ್ರಗಳಿಗೆ ನೈತಿಕ ಮೌಲ್ಯಗಳನ್ನು ಅಭಿವ್ಯಕ್ತಿಸುವ ತುಡಿತ ಇದೆ. ಈ ನೆಲೆಯಲ್ಲಿ ರಾಣಿ-ದಾಸಿ, ದೇವಿ-ರಕ್ಕಸಿ, ಮುತ್ತೈದೆ-ವಿಧವೆ, ಪತಿತೆ-ಪತಿವ್ರತೆ ಎಂಬ ಭೇದವನ್ನು ಒಡೆದು ಸಮಗ್ರತೆಯ ಪರಿಕಲ್ಪನೆಯ ನೆಲೆಯಲ್ಲಿ ನನ್ನ ಅಧ್ಯಯನ ಸಾಗಿದೆ.

"ಶ್ರೀ ಮೊಯಿಲಿ ಅವರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾ ಕಾವ್ಯವನ್ನು ಓದಲು ಹೆಚ್ಚಿನ ಪಾಂಡಿತ್ಯ ಬೇಕಿಲ್ಲ. ಕನ್ನಡ ಓದು ಬರಹ ಕಲಿತು ಗದ್ಯಪದ್ಯ ವಾಚನ ಮಾಡುವಷ್ಟು ವಿದ್ಯೆ ಇದ್ದರೆ ಸಾಕು. ಸುಲಿದ ಬಾಳೆ ಹಣ್ಣಿನಂತೆ ಯಾವ ಪ್ರಯಾಸವೂ ಇಲ್ಲದೆ ಈ ಮಹಾಕಾವ್ಯ ನಮ್ಮ ಅಂತರಂಗವನ್ನು ಪ್ರವೇಶಿಸುತ್ತದೆ. ಇಲ್ಲಿ ನ್ಯಾಯವಾದಿಯೊಬ್ಬನ ಸತ್ಯಾನ್ವೇಷಣೆ ಹಾಗೂ ರಾಜಕೀಯ ಮುತ್ಸದ್ದಿಯೊಬ್ಬನ ದೂರದರ್ಶಿತ್ವ ಸ್ಫುಟವಾಗಿ ಗೋಚರವಾಗುತ್ತದೆ"೧. (ಪ್ರಹ್ಲಾದಾಚಾರ್ಯ ಕು. ಜೋಷಿ ೨೦೦೨ : ೫೪೪) ಇವರ ಮಾತಿಗೆ ಪೂರಕವಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಭಾಷೆ ಕ್ಲಿಷ್ಟಕರವಾಗಿಲ್ಲ ಎಂದೇ ಹೇಳಬೇಕು. ಸಾಮಾನ್ಯ ಓದುಗನನ್ನು ಸೆಳೆಯುವ ಮಾದರಿಯಲ್ಲಿ ಈ ಮಹಾಕಾವ್ಯ ಇದೆ. ಇದರ ಭಾಷೆ ಸರಳ ಆದರೂ ಸತ್ವಪೂರ್ಣವಾಗಿದೆ. ಈ ಬಗೆಯ ಶಕ್ತಿಯುತ ಸತ್ವವನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಈ ಮಹಾಕಾವ್ಯದಲ್ಲಿ ಪಾತ್ರಗಳ ಅಂತರಂಗದ

ಶೋಧವಿದೆ. ಈ ಶೋಧ ವಿಶಾಲ ದೃಷ್ಟಿಕೋನದಿಂದ ಬೆಳೆಯುತ್ತಾ ಪಾತ್ರಗಳ ವೈಶಿಷ್ಟ್ಯತೆಯನ್ನು ಗಟ್ಟಿಗೊಳಿಸಿದೆ. ಕವಿಯ ಅನ್ವೇಷಣಾ ಪ್ರವೃತ್ತಿ ಕಾವ್ಯದ ಮನೋಧರ್ಮವನ್ನು ಎತ್ತಿ ಹಿಡಿದಿದೆ.

ಇಪ್ಪತ್ತೊಂದನೆಯ ಶತಮಾನದ ಮಹಿಳಾ ಬಿಕ್ಕಟ್ಟು, ಅತಂತ್ರ ಸ್ಥಿತಿ, ಬದುಕಿನ ಸವಾಲು, ಸವಾಲನ್ನು ಎದುರಿಸುವಲ್ಲಿನ ದಿಟ್ಟತನ ಈ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಪುರುಷಪ್ರಧಾನ ಸಮಾಜ ಒಡ್ಡುವ ಸವಾಲು ಮತ್ತು ಅಡ್ಡಿ ಆತಂಕಗಳಿಗೆ ಸ್ಪಂದಿಸುತ್ತ ಸಫಲತೆ ಪಡೆವ ಮಹಿಳಾ ಪಾತ್ರಗಳು ಈ ಮಹಾಕಾವ್ಯದಲ್ಲಿ ಇವೆ. ಇಂಥ ಪಾತ್ರಗಳ ಸತ್ವಶಕ್ತಿಯನ್ನು ಪ್ರಧಾನವಾಹಿನಿಗೆ ತಂದು ಅನಾವರಣ ಮಾಡುವ ಉದ್ದೇಶವಿದೆ. ಈ ಮಹಾಕಾವ್ಯದ ಎಲ್ಲ ಪುರುಷ ಪಾತ್ರಗಳು ಮಹಿಳಾಸಮುದಾಯದ ಬದುಕಿಗೆ ಅಡ್ಡಿ ಆತಂಕವನ್ನು ಉಂಟುಮಾಡಿಲ್ಲ. ಸ್ತ್ರೀಯ ಅಂತರಂಗಶಕ್ತಿಯನ್ನು ಅರಿತು ಅವರ ಆತ್ಮಗೌರವಕ್ಕೆ ಚ್ಯುತಿ ಬಾರದಂತೆ ಜಾಗೃತರಾಗುವ ಪುರುಷ ಪಾತ್ರಗಳು ಈ ಮಹಾಕಾವ್ಯದಲ್ಲಿ ಇವೆ. ಇಂಥ ಪುರುಷ ಪಾತ್ರಗಳಲ್ಲಿ ಅಡಕವಾಗಿರುವ ಸ್ತ್ರೀಸಂವೇದನೆಯನ್ನು ಪರಿಗ್ರಹಿಸುವ ಉದ್ದೇಶವಿದೆ. ಹಾಗಾಗಿ ಈ ಅಧ್ಯಯನ ಈ ಕಾವ್ಯದ ಮಹಿಳಾ ಪಾತ್ರಗಳ ಬದುಕನ್ನು ಅಭ್ಯಾಸ ಮಾಡುವ ಸೀಮಿತ ಉದ್ದೇಶಕ್ಕೆ ನಿಂತು ಬಿಡುವುದಿಲ್ಲ. ಬದಲಿಗೆ ಇದನ್ನು ಮೀರಿ ವ್ಯಾಪಕ ನೆಲೆಯಲ್ಲಿ ಸ್ತ್ರೀ–ಪುರುಷ ಅಂತರಂಗ ಸಂಬಂಧವನ್ನು ಪರಿಶೀಲಿಸುವ ಮಟ್ಟಕ್ಕೆ ಬೆಳೆಯುತ್ತದೆ. ಪುರುಷರಲ್ಲೂ ಸ್ತ್ರೀಸಂವೇದನೆ ಇದೆ ಎಂಬುದು ಈ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಇಲ್ಲಿ ದಾಸಿಯ ನೆಲೆಯಿಂದ, ರಾಣಿಯ ನೆಲೆಯಿಂದ, ಋಷಿಪತ್ನಿಯ ನೆಲೆಯಿಂದ ಬದುಕನ್ನು ನೋಡಲಾಗಿದೆ. ಈ ನೋಟ ಒಂದೊಂದು ಬಗೆಯ ಬದುಕನ್ನು ಕಟ್ಟಿಕೊಡುತ್ತದೆ. ವ್ಯಕ್ತಿಗತ ನೆಲೆಯ ಆಯ್ಕೆ, ಅವಕಾಶ ಮತ್ತು ತೀರ್ಮಾನಗಳನ್ನು ಆಯಾಯ ಪಾತ್ರಗಳಿಗೆ ಬಿಟ್ಟು ಬಿಡಲಾಗಿದೆ. ಇಲ್ಲಿ ಪ್ರಭುತ್ವದ ಪಕ್ಷಪಾತಿಯಾಗಿ ಕವಿಮನಸ್ಸು ಕೆಲಸಮಾಡಿಲ್ಲ.

ಕವಿ ಮೊಯಿಲಿಯವರಲ್ಲಿ ಸ್ತ್ರೀಸಮುದಾಯವನ್ನು ಕುರಿತು ವಿಶೇಷ ಕಾಳಜಿ, ಗೌರವಭಾವ ಮತ್ತು ಸಂವೇದನೆ ಇರುವುದು ಸ್ಪಷ್ಟವಾಗುತ್ತದೆ. ಈ ಮಹಾಕಾವ್ಯದ ಅಧ್ಯಯನ ಪ್ರಸ್ತುತ ಸಮಾಜವ್ಯವಸ್ಥೆಯ ಅಧ್ಯಯನವೂ ಹೌದು. ಪ್ರಸ್ತುತ ಸಾಮಾಜಿಕ ಬದುಕನ್ನು ಅನಾವರಣ ಮಾಡುವಲ್ಲಿ ಕವಿ ಯಾವುದೇ ಪಕ್ಷಪಾತ ಧೋರಣೆಯನ್ನು ತಳೆದಿಲ್ಲ. ಇಲ್ಲಿ ಕವಿ ಜೀವನಾನುಭವದ ಹಿನ್ನಲೆಯಲ್ಲಿ ಸಾಮಾಜಿಕ ತುಡಿತ–ಮಿಡಿತಗಳಿಗೆ ಸ್ಪಂದಿಸುತ್ತಾ ಸ್ತ್ರೀಸಂವೇದನೆಯನ್ನು ಅಂತರ್ಗತ ಮಾಡಿಕೊಂಡಿರುವರು. ಇಲ್ಲಿನ ಮಹಿಳಾ ಪಾತ್ರನಿರ್ಮಿತಿಯ ಹಿಂದೆ ಕವಿಯ ಸಂವೇದನಾಶೀಲ ಮನಸ್ಸು, ತಿಳುವಳಿಕೆ ಮತ್ತು ವೈಚಾರಿಕತೆ ಪ್ರಭಾವಿಸಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ನನ್ನ ಅಧ್ಯಯನದ ನೋಟ ಇಲ್ಲಿನ ಸ್ತ್ರೀಜಗತ್ತನ್ನು ಕೇಂದ್ರೀಕರಿಸಿ ಮುಂದೆ ಸಾಗುತ್ತದೆ.

ಸಾಂಪ್ರದಾಯಿಕ ರಾಮಾಯಣದ ಪಠ್ಯಗಳು ಸ್ತ್ರೀಚೈತನ್ಯದ ಬಗೆಗೆ ನಿರ್ಲಕ್ಷ್ಯ ಧೋರಣೆ ತಾಳಿವೆ. ಆದರೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕವಿ ಸ್ತ್ರೀಚೈತನ್ಯದ ಬಗೆಗೆ ವಿಶೇಷ ಕಾಳಜಿ ತೋರಿದ್ದಾರೆ. ಈ ಕಾವ್ಯ ಬದುಕಿನ ದ್ವಂದ್ವಗಳನ್ನು ಮೀರಿನಿಲ್ಲುವ ಮುಖಾಂತರ ಸಹೃದಯ ಓದುಗರನ್ನು ಸ್ಪಂದಿಸಿದೆ. ಕೃತಕತೆಯಿಂದ ದೂರ ಉಳಿದು ನೈಜಬದುಕನ್ನು ಅನಾವರಣ ಮಾಡಿದೆ. ಇಲ್ಲಿ ನನ್ನ ಅಧ್ಯಯನ ಪಾತ್ರವಿಶ್ಲೇಷಣೆಗೆ ಸೀಮಿತಗೊಳ್ಳುವುದಿಲ್ಲ. ವ್ಯಕ್ತಿಯಿಂದ ತೊಡಗಿ ಸಮಷ್ಟಿ ಹಿತವನ್ನು ಪರಿಗ್ರಹಿಸುತ್ತಾ ಮುಂದೆ ಸಾಗುತ್ತದೆ. ಈ ಸಂದರ್ಭದಲ್ಲಿ ಕೆಲವು ಪಾತ್ರಗಳು ಅಭಿವ್ಯಕ್ತಿಸುವ ನಿಲುವು, ಚಿಂತನೆಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಇಲ್ಲಿ ವಿಶ್ವಕಲ್ಯಾಣದ ಪರಿಕಲ್ಪನೆ ಇದೆ. ಹಾಗಾಗಿ ಇಲ್ಲಿನ ಪಾತ್ರಗಳು ಸತ್ವಪೂರ್ಣವಾಗಿ ಅಭಿವ್ಯಕ್ತಗೊಂಡಿವೆ. ಇದು ಆದರ್ಶೀಕೃತ ಪಠ್ಯವಾಗಿಲ್ಲ. ಮಾನವಸಹಜ ದೌರ್ಬಲ್ಯಗಳನ್ನು ಹೇಳಿದೆ. ಪರಿವರ್ತನೆಯ ದಿಕ್ಕನ್ನು ಸೂಚಿಸುತ್ತಾ ಬದುಕಿನ ಸಾರ್ಥಕತೆಗೆ ಅವಕಾಶ ಕಲ್ಪಿಸಿದೆ. ಬದುಕಲ್ಲಿ ಎದುರಾಗುವ ಎಡರು–ತೊಡರುಗಳನ್ನು ಮೀರಿ ನಿಲ್ಲುವ ಶಕ್ತಿ ಇಲ್ಲಿನ ಬಹುತೇಕ ಪಾತ್ರಗಳಿಗೆ ಇದೆ. ಈ ಬಗೆಯ ಮೀರುವಿಕೆ ವ್ಯಕ್ತಿಯ ಅಂತರಂಗದ ದೃಢತೆ ಮತ್ತು ಆತ್ಮವಿಶ್ವಾಸವನ್ನು ವೃದ್ಧಿಸುತ್ತದೆ. ಇಲ್ಲಿ ಬದುಕಿನ ಕುರಿತ ಕಾಳಜಿ ಇದೆ. ವೈಚಾರಿಕ ನೆಲೆಯಿಂದ ಬದುಕನ್ನು ಸ್ವೀಕರಿಸುವಲ್ಲಿ ಇಲ್ಲಿನ ಪಾತ್ರಗಳು ಸಫಲತೆಯನ್ನು ಕಂಡಿವೆ. ಇಂಥ ಮಹಾಕಾವ್ಯದ ಮಹಿಳಾ ಜಗತ್ತನ್ನು ಸ್ತ್ರೀನೆಲೆಯಿಂದ ಪರಿಗ್ರಹಿಸುವ ಉದ್ದೇಶ ನನ್ನದು.

ಇಲ್ಲಿ ಪ್ರತಿಪಾದಿತವಾದ ನೈತಿಕ ಸಿದ್ಧಾಂತಗಳು ಯಾವೊಂದು ವರ್ಗಕ್ಕೆ ಸೀಮಿತಗೊಂಡಿಲ್ಲ. ಸಾರ್ವತ್ರಿಕ ಹಿತಾಸಕ್ತಿಯನ್ನು ಕಾಪಿಡುವ ಉದ್ದೇಶವಿದೆ. ಹಾಗಾಗಿ ಲಿಂಗದ ನೆಲೆಯಲ್ಲಿ ನಡೆಯುವ ಶೋಷಣೆಯನ್ನು ತಪ್ಪಿಸುವ ಕೆಲಸ ಇಲ್ಲಿ ನಡೆದಿದೆ. ಈ ಮಹಾಕಾವ್ಯ ಮಾನವೀಯ ಸ್ಪರ್ಶವನ್ನು ಪಾತ್ರಗಳಿಗೆ ನೀಡುತ್ತಾ ಮುಂದೆ ಸಾಗಿದೆ. ಮಹಿಳಾ ಬದುಕು ಶೋಷಣೆಗೆ ಒಳಗಾಗುವ ಸಂದರ್ಭವನ್ನು ಕವಿ ಮೀರಿದ್ದಾರೆ. ಕವಿಯ ವಿನೂತನ ಪಾತ್ರ ಪರಿಕಲ್ಪನೆ ನಿರ್ದಿಷ್ಟ ಉದ್ದೇಶವನ್ನು ಪ್ರಸ್ತುತಪಡಿಸುತ್ತವೆ. ಕವಿಯ ಪರಿಕಲ್ಪನೆಯು ಸೃಷ್ಟಿಸಿದ ಪಾತ್ರಗಳು ಕಾವ್ಯದೊಳಗೆ ಹೊಸ ಸಂಕಥನವನ್ನು ಹುಟ್ಟುಹಾಕಿವೆ. ಜನಸಾಮಾನ್ಯದಿಂದ ತೊಡಗಿ ರಾಜಪರಂಪರೆಯ ಬದುಕನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಇಲ್ಲಿನ ಮಹಿಳಾ ಪಾತ್ರಗಳನ್ನು ಕವಿ ಮಾನವೀಯತೆಯ ನೆಲೆಯಲ್ಲಿ ಕಟ್ಟಿರುವುದು ಗಮನಾರ್ಹ ಸಂಗತಿ.

ಸಾಮಾಜಿಕ ಸುಧಾರಣೆಯನ್ನು ಅಪೇಕ್ಷಿಸುವ ಇಪ್ಪತ್ತೊಂದನೆಯ ಶತಮಾನದ ಮೊದಲ ಮಹಾಕಾವ್ಯವಾದ 'ಶ್ರೀರಾಮಾಯಣ ಮಹಾನ್ವೇಷಣಂ'ನಲ್ಲಿ ಕವಿಯ ಬೌದ್ಧಿಕಪ್ರಜ್ಞೆ ಕೆಲಸ ಮಾಡಿದೆ. ಮಾನವನಲ್ಲಿ ಅಂತರ್ಗತವಾಗಿರುವ ಚೈತನ್ಯಶಕ್ತಿಯನ್ನು ಹೊರಗೆಡಹುವ ಉದ್ದೇಶ ಈ ಕಾವ್ಯಕ್ಕೆ ಇದೆ. ಬೌದ್ಧಿಕ ವಿಕಾಸದ ನೆಲೆಯು ಶೋಧದೊಂದಿಗೆ ಸಮಸ್ತ ಮಾನವಸಮುದಾಯವನ್ನು ಸಂಸ್ಕಾರಯುತವಾಗಿ ಮಾಡುವ ಉದ್ದೇಶವೂ ಇಲ್ಲಿದೆ. ಈ ಹಿನ್ನೆಲೆಯಲ್ಲಿ ಬದುಕನ್ನು ಎದುರಿಸುವ ದಿಟ್ಟತನ ಇಲ್ಲಿನ ಪಾತ್ರಗಳಿಗೆ ಇದೆ. ಈ ಕಾವ್ಯದ ಬಹುತೇಕ ಅಧ್ಯಾಯಗಳಲ್ಲಿ ಮಾನವತ್ವದ ಅನಾವರಣವಿದೆ. ಭಕ್ತಿಯ ನೆಲೆಯೊಂದಿಗೆ ಆಧ್ಯಾತ್ಮಶಕ್ತಿಯ ಸಂಗಮದಿಂದ ಬದುಕನ್ನು ಉದ್ಧಾರ ಪಥದತ್ತ ಕೊಂಡೊಯ್ಯುವ ಸದಾಶಯವಿದೆ. ಹೀಗೆ ಸಮಗ್ರತೆಯ ಪರಿಕಲ್ಪನೆಯ ನೆಲೆಯಲ್ಲಿ ಸುಧಾರಣಾಪರ ಆಶಯ ಹೊತ್ತ ಈ ಕಾವ್ಯ ಬದುಕಿನ ಸಾರ್ಥಕತೆಯ ಕುರಿತು ಮಾತಾಡುತ್ತದೆ. ಮಂಥರೆಯಂತಹ ದಾಸಿಯ ಪಾತ್ರಕ್ಕೂ ಇಲ್ಲಿ ಸ್ಥಾನವಿದೆ. ಅನಸೂಯೆಯಂತಹ ಋಷಿಪತ್ನಿಯ ವಾಕ್‌ಶಕ್ತಿಗೂ ಇಲ್ಲಿ ಮೌಲ್ಯವಿದೆ. ಸೀತೆಯಂತಹ ರಾಣಿಯ ತೀರ್ಮಾನಕ್ಕೂ ಇಲ್ಲಿ ಮಾನ್ಯತೆ ಇದೆ. ಹಾಗಾಗಿ ಇಲ್ಲಿನ ಮಹಿಳಾ ಪಾತ್ರಗಳು ಸಮಾಜಮುಖಿ ನೆಲೆಯಲ್ಲಿ ಸಾಗಿವೆ. ಸಾಮಾಜಿಕ ಮನ್ನಣೆ ಪಡೆದ ಪಾತ್ರಗಳಾಗಿರಲಿ ಅಥವಾ ಸಾಮಾಜಿಕ ತಿರಸ್ಕಾರಕ್ಕೆ ಒಳಗಾದ ಪಾತ್ರಗಳಾಗಿರಲಿ ಇಲ್ಲಿ ಸ್ವತಂತ್ರ ಅಸ್ತಿತ್ವವನ್ನು ಪಡೆದಿವೆ. ಸಮಾಜವ್ಯವಸ್ಥೆಯ ದೋಷವನ್ನು ಕಂಡಿದೆ. ಸಾಮಾಜಿಕ ಮನ್ನಣೆಯನ್ನ ಅಪೇಕ್ಷಿಸಿದೆ. ಈ ಅಪೇಕ್ಷೆಯ ನೆಲೆಯಲ್ಲಿ ಸಮಾಜವ್ಯವಸ್ಥೆಯನ್ನು ಪ್ರಶ್ನಿಸುವ ಮತ್ತು ನಿರಾಕರಿಸುವ ಮಟ್ಟಕ್ಕೆ ಇಲ್ಲಿನ ಮಹಿಳಾ ಪಾತ್ರಗಳು ಬೆಳೆದಿವೆ. ಈ ಬೆಳವಣಿಗೆಗೆ ಪೂರಕವಾದ ಅನುಕೂಲ ಮತ್ತು ಅವಕಾಶಗಳ ಕುರಿತು ಅಧ್ಯಯನ ನಡೆಸುವುದು ನನ್ನ ಪ್ರಧಾನ ಉದ್ದೇಶವಾಗಿದೆ.

## ಆಕರ ಸೂಚಿ

**೧. ಪ್ರಹ್ಲಾದಾಚಾರ್ಯ ಕು. ಜೋಷಿ ೨೦೦೨**

ಶ್ರೀರಾಮಾಯಣ ಮಹಾನ್ವೇಷಣಂ – ದ್ವಿತೀಯ ಸೋಪಾನ – ಸಹೃದಯ ಸ್ಪಂದನ
ಮಹೇಶ್ವರೀ ಪ್ರಕಾಶನ, ಬೆಂಗಳೂರು

## ಅಧ್ಯಾಯ ೩

# ನಡೆದ ಅಧ್ಯಯನದ ಹಾದಿ

ವಾಲ್ಮೀಕಿ ರಾಮಾಯಣದಿಂದ ತೊಡಗಿ ಬಹುತೇಕ ಕನ್ನಡ ರಾಮಾಯಣಗಳಿಗೆ ತಮ್ಮದೇ ಆದ ಅನನ್ಯತೆ ಇದೆ. ಪ್ರತಿಯೊಂದು ಕಾಲಘಟ್ಟದ ರಾಮಾಯಣಗಳ ಹಿಂದೆ ನಿರ್ದಿಷ್ಟ ಧ್ಯೇಯೋದ್ದೇಶವಿದೆ. ಆಯಾ ಕಾಲದ ಯುಗಧರ್ಮವನ್ನು ಸೈದ್ಧಾಂತಿಕ ನೆಲೆಯಲ್ಲಿ ನಿರೂಪಿಸುವ ಕೆಲಸವನ್ನು ರಾಮಾಯಣ ಮಹಾಕಾವ್ಯಗಳು ಮಾಡಿವೆ. ಹೀಗೆ ಸೈದ್ಧಾಂತಿಕ ನೆಲೆಯಲ್ಲಿ ನಿರೂಪಿತವಾದ ರಾಮಾಯಣ ಕಾವ್ಯಗಳ ನೈತಿಕ ನಿಲುವನ್ನು, ಜೀವನ ಸಿದ್ಧಾಂತವನ್ನು ಜನ ಭಿನ್ನ ಭಿನ್ನ ನೆಲೆಗಳಿಂದ ಸ್ವೀಕರಿಸಿದ್ದಾರೆ. ರಾಮಾಯಣ ಮಹಾಕಾವ್ಯಗಳನ್ನು ಕೇವಲ ಆಧ್ಯಾತ್ಮ ಭಾವದಿಂದ ನೋಡದೆ ವಿಭಿನ್ನ ದೃಷ್ಟಿಕೋನಗಳಿಂದ ನೋಡುವ ಕೆಲಸವನ್ನು ಅಧ್ಯಯನಕಾರರು ಮಾಡಿದ್ದಾರೆ. ಈ ರಾಮಾಯಣ ಮಹಾಕಾವ್ಯಗಳ ಅಧ್ಯಯನದ ಹಿಂದೆ ಅಧ್ಯಯನಕಾರರ ವಿಶೇಷ ಆಸಕ್ತಿ, ಕಾಲದ ಪ್ರಭಾವ, ಕಾಲಿಕ ಬದಲಾವಣೆ, ಸಾಂಸ್ಕೃತಿಕ ಬದುಕು ಮತ್ತು ವೌಲ್ಯಗಳು ಪ್ರಭಾವಿಸಿರುವುದನ್ನು ಗಮನಿಸಬಹುದು. ರಾಮಾಯಣದ ಕುರಿತು ಅಧ್ಯಯನಕಾರರ ದೃಷ್ಟಿಕೋನ ಮತ್ತು ಮನೋಧರ್ಮ ಒಂದೇ ತೆರನಾಗಿಲ್ಲದಿರುವುದು ಗಮನಿಸತಕ್ಕ ಅಂಶ.

ರಾಮಾಯಣ ಕಾವ್ಯವನ್ನು ಐತಿಹಾಸಿಕ ದೃಷ್ಟಿಕೋನದ ನೆಲೆಯಿಂದ, ಆಧ್ಯಾತ್ಮದ ನೆಲೆಯಿಂದ, ಪುರಾಣ ಪ್ರಜ್ಞೆಯ ನೆಲೆಯಿಂದ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಗಳ ಹಿಂದೆ ಆಯಾಯ ಅಧ್ಯಯನಕಾರರ ಯುಗಧರ್ಮ ಮತ್ತು ಮನೋಧರ್ಮ ಪ್ರಭಾವಿಸಿರುವುದು ಗಮನಾರ್ಹ. ಹೀಗೆ ರಾಮಾಯಣ ಕಾವ್ಯವನ್ನು ಹೊಸ ಹೊಸ ಯುಗಧರ್ಮಕ್ಕೆ ಅನುಸಾರಿಯಾಗಿ ವಿನೂತನ ದೃಷ್ಟಿಕೋನದ ನೆಲೆಯಿಂದ ಅಧ್ಯಯನ ಮಾಡಲು ಸಾಧ್ಯವಿದೆ. ರಾಮಾಯಣದ ಕಥಾವಸ್ತುವಿಗೆ ಪ್ರಾಚೀನ ಇತಿಹಾಸ ಇದ್ದರೂ ಸರ್ವಕಾಲಕ್ಕೂ ಅನ್ವಯವಾಗುವ ನೈತಿಕ ಸಿದ್ಧಾಂತಗಳು ಅದರೊಳಗೆ ಮೇಳೈಸಿವೆ. ಇದರ ಪರಿಣಾಮ ಅಧ್ಯಯನಕಾರರು ರಾಮಾಯಣದ ಕುರಿತು ಹೊಸ ನೋಟ ನೋಡಲು ಸಾಧ್ಯವಾಗಿದೆ.

ರಾಮಾಯಣದ ಕಥಾಭಿತ್ತಿ ಒಂದೇ ಆದರೂ ಅಧ್ಯಯನಕಾರರ ನೋಟ ವಿಭಿನ್ನ ತೆರನಾದದ್ದು. ರಾಮಾಯಣಗಳ ಕುರಿತು ಅಧ್ಯಯನಕಾರರು ತಮ್ಮದೇ ಆದ ನೆಲೆಯಲ್ಲಿ

ಪ್ರತಿಕ್ರಿಯಿಸಿದ್ದಾರೆ. ಈ ಪ್ರತಿಕ್ರಿಯೆಯ ಮೇಲೆ ಅಧ್ಯಯನಕಾರರ ಕಾಲಘಟ್ಟದ ಪ್ರಭಾವವಿದೆ. ಈ ಪ್ರತಿಕ್ರಿಯೆ ಬಹುಮುಖಿ ನೆಲೆಯಲ್ಲಿ ಸಾಗಿದೆ. ರಾಮಾಯಣದ ಎಲ್ಲ ತಾತ್ವಿಕ ನಿಲುವುಗಳನ್ನು ಈ ಅಧ್ಯಯನಗಳು ಒಪ್ಪಿಲ್ಲ. ಕೆಲವು ಸಂದರ್ಭಗಳನ್ನು ಸ್ವೀಕರಿಸಿವೆ, ಇನ್ನು ಕೆಲವು ಸಂದರ್ಭಗಳನ್ನು ಪ್ರಶ್ನೆಗೆ ಒಡ್ಡಿವೆ. ಕೆಲವು ಅಧ್ಯಯನಗಳು ರಾಜಪರಂಪರೆಯ ದೋಷ, ಪಕ್ಷಪಾತ, ಪ್ರಭುತ್ವ ಧೋರಣೆಯನ್ನು ಪ್ರಶ್ನಿಸಿದರೆ ಇನ್ನು ಕೆಲವು ಅಧ್ಯಯನಗಳು ಸಾಧನೆ, ತಪಸ್ಸು, ಪಾತಿವ್ರತ್ಯವನ್ನು ಒಪ್ಪಿಕೊಂಡಿವೆ. ಪ್ರತಿ ರಾಮಾಯಣಗಳು ಆಯಾ ಕಾಲದ ಸಾಮಾಜಿಕ ಜೀವನ, ಚಿಂತನೆ, ಮನೋಧರ್ಮವನ್ನು ಪ್ರತಿನಿಧಿಸಿವೆ ಎಂಬುದನ್ನು ರಾಮಾಯಣ ಕುರಿತ ಅಧ್ಯಯನಗಳು ಸ್ಪಷ್ಟಪಡಿಸುತ್ತವೆ. ಅಧ್ಯಯನಕಾರರು ಲಿಖಿತ ರಾಮಾಯಣದೊಂದಿಗೆ ಮೌಖಿಕ ರಾಮಾಯಣವನ್ನು ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಯಾವುದೇ ಲಿಖಿತ ದಾಖಲೆಗಳಿಲ್ಲದ ಮೌಖಿಕ ರಾಮಾಯಣಗಳನ್ನು ಅಧ್ಯಯನಕಾರರು ಅಲಕ್ಷಿಸಿಲ್ಲ. ರಾಮಾಯಣ ಕುರಿತ ಅಧ್ಯಯನಗಳು ಕೇವಲ ಪುರಾಣಕಥೆಯ ಅಧ್ಯಯನಗಳಾಗಿಲ್ಲ. ಒಂದು ಕಾಲದ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಬದುಕಿನೊಂದಿಗೆ ಮಹಿಳಾಸಮುದಾಯದ ಸ್ಥಿತಿಗತಿಯನ್ನೂ ಅವು ಅನಾವರಣಗೊಳಿಸಿವೆ.

ರಾಮಾಯಣ ಮಹಾಕಾವ್ಯಗಳ ಕುರಿತು ಬಹುತೇಕ ವ್ಯಾಖ್ಯಾನಗಳು, ವಿಮರ್ಶೆಗಳು ಬಂದಿವೆ. ರಾಮಾಯಣ ಕಾವ್ಯಗಳು ವಿಭಿನ್ನ ನೆಲೆಯಲ್ಲಿ ಬಹುಮುಖಿ ವಿಮರ್ಶೆಗಳಿಗೆ ಎಡೆಮಾಡಿಕೊಟ್ಟಿವೆ. ಹೀಗೆ ನಡೆದ ವಿಮರ್ಶೆಗಳು, ಅಧ್ಯಯನಗಳು ರಾಮಾಯಣದ ಕೆಲವು ಪಾತ್ರಗಳ ಅನನ್ಯತೆಯನ್ನು ಶೋಧಿಸಿವೆ. ಮತ್ತೆ ಕೆಲವು ಅಧ್ಯಯನಗಳು ಕಾವ್ಯದ ಅನಾದರಕ್ಕೆ ಒಳಗಾದ ಪಾತ್ರಗಳ ಕುರಿತು ಮಾತಾಡಿವೆ.

ಐತಿಹಾಸಿಕ ದೃಷ್ಟಿಕೋನದ ನೆಲೆಯಿಂದಲೂ ರಾಮಾಯಣದ ಅಧ್ಯಯನ ನಡೆದಿದೆ. ಇತಿಹಾಸದ ಮೇಲೆ ರಾಮಾಯಣದ ಪ್ರಭಾವವೇನು? ರಾಮಾಯಣದ ಕಥಾವಸ್ತುವಿನಲ್ಲಿ ಸೇರಿರುವ ಐತಿಹಾಸಿಕ ಅಂಶಗಳು ಎಷ್ಟು? ಎಂಬುದರ ಐತಿಹಾಸಿಕ ನೆಲೆಯ ಅಧ್ಯಯನಗಳು ನಡೆದಿವೆ. ಸಾಮಾಜಿಕ ವಿಶ್ಲೇಷಣೆಯ ನೆಲೆಯಿಂದಲೂ ರಾಮಾಯಣದ ಕುರಿತು ಅಧ್ಯಯನಗಳು ನಡೆದಿವೆ. ರಾಮಾಯಣದಲ್ಲಿ ನಿರೂಪಿತವಾದ ಸಾಮಾಜಿಕ ಸ್ವರೂಪವೇನು? ರಾಮಾಯಣದಲ್ಲಿ ನಿರೂಪಿತವಾದ ಸಮಾಜವ್ಯವಸ್ಥೆ ಎಂತಹುದು? ಹೀಗೆ ಸಮಾಜಶಾಸ್ತ್ರೀಯ ದೃಷ್ಟಿಕೋನದ ನೆಲೆಯಲ್ಲಿ ರಾಮಾಯಣದ ಕುರಿತು ಸಾಮಾಜಿಕ ವಿಶ್ಲೇಷಣೆ ನಡೆದಿದೆ. ರಾಮಾಯಣದ ಕುರಿತು ಅಧ್ಯಯನಕಾರರ ಆಳವಾದ ಅಧ್ಯಯನ ಈ ಬಗೆಯ ಕಾಣುವಿಕೆಗೆ ಎಡೆಮಾಡಿಕೊಟ್ಟಿದೆ. ರಾಮಾಯಣದ ಕುರಿತ ಕೆಲವು ಅಧ್ಯಯನಕಾರರ ನೋಟಗಳನ್ನು ಪರಿಶೀಲಿಸಿ ಅಧ್ಯಯನವನ್ನು ನಡೆಸಿದ್ದೇನೆ.

ಹೆಚ್.ಡಿ. ಸಂಕಾಲಿಯಾ ಅವರು 'THE RAMAYANA IN HISTORICAL PERSPECTIVE' ಎಂಬ ಕೃತಿಯಲ್ಲಿ ಐತಿಹಾಸಿಕ ದೃಷ್ಟಿಕೋನದ ನೆಲೆಯಿಂದ ರಾಮಾಯಣವನ್ನು ಕಂಡಿದ್ದಾರೆ. ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ ಡಾ। ಮಹಾಬಲೇಶ್ವರ್ ರಾವ್ ಅವರು ಸಂಕಾಲಿಯಾ ಅವರ ಐತಿಹಾಸಿಕ ದೃಷ್ಟಿಕೋನವನ್ನು ಗುರುತಿಸಿದ್ದಾರೆ. ಐತಿಹಾಸಿಕ ಆಧಾರಗಳ ಹಿನ್ನೆಲೆಯಲ್ಲಿಯೇ ಲೇಖಕರು ರಾಮಾಯಣದ ಪ್ರಾಚೀನತೆಯನ್ನು ಕಾಣುವ ಪ್ರಯತ್ನ ಮಾಡಿದ್ದಾರೆ. ರಾಮಾಯಣದ ಪ್ರಾಚೀನತೆ ಕ್ರಿ.ಶ. ೫-೬ನೇ ಶತಮಾನಕ್ಕೂ ಹಿಂದಿನದಲ್ಲ ಎಂಬುದು ಅಧ್ಯಯನಕಾರರ ಅಭಿಪ್ರಾಯ. ರಾಮಾಯಣಕ್ಕೆ ಅದರದ್ದೇ ಆದ ಐತಿಹಾಸಿಕ ಹಿನ್ನೆಲೆ ಇದೆ. ಈ ಐತಿಹಾಸಿಕ ಹಿನ್ನೆಲೆಯ ಪರಿಣಾಮ ಕಿಷ್ಕಿಂದಾಕಾಂಡ, ಸುಂದರಕಾಂಡ ಮತ್ತು ಯುದ್ಧಕಾಂಡಗಳು ನಂತರ ಸೇರ್ಪಡೆಗೊಂಡವು ಎಂದು ಅಭಿಪ್ರಾಯಪಟ್ಟಿದ್ದಾರೆ.

ಬಿಹಾರದಲ್ಲಿ ಬಹುತೇಕ ಜನರ ಹೆಸರಿನ ಪೂರ್ವಾರ್ಧದಲ್ಲಿ ರಾಮನಾಮ ಅಡಕವಾಗಿದೆ. ರಾಮ ಮತ್ತು ಹನುಮಂತರ ದೇವಾಲಯಗಳು ವಾರಣಾಸಿಯಿಂದ ತೊಡಗಿ ಬಹುತೇಕ ಕಡೆಗಳಲ್ಲಿ ಇವೆ. ಉತ್ತರದಲ್ಲಿ ತುಲಸೀದಾಸರು ರಾಮಾಯಣವನ್ನು ಜನಪ್ರಿಯಗೊಳಿಸಿದರೆ, ಮಹಾರಾಷ್ಟ್ರದಲ್ಲಿ ರಾಮದಾಸರು ಈ ಕೆಲಸ ಮಾಡಿದ್ದಾರೆ. ಐತಿಹಾಸಿಕ ಮತ್ತು ಪುರಾತತ್ತ್ವ ವಿಶ್ಲೇಷಣೆಯ ನೆಲೆಯಲ್ಲಿ ರಾಮಾಯಣವನ್ನು ಕಂಡ ಸಂಕಾಲಿಯಾ ಅವರು ಐತಿಹಾಸಿಕ ದೃಷ್ಟಿಕೋನದ ನೆಲೆಯಲ್ಲಿ ಮುಖ್ಯವಾಗಿ ನಾಲ್ಕು ವಿಚಾರಗಳನ್ನು ಮುಂದಿಟ್ಟಿದ್ದಾರೆ.

೧. ವ್ಯಕ್ತಿ
೨. ಸ್ಥಳ
೩. ಘಟನೆ
೪. ಕಟ್ಟುಕಟ್ಟಳೆ, ನೀತಿಸಂಹಿತೆ ಮತ್ತು ತಾತ್ತ್ವಿಕ ದೃಷ್ಟಿಕೋನ.

ಹೀಗೆ ನಾಲ್ಕು ಅಂಶಗಳನ್ನು ಪ್ರಧಾನವಾಗಿ ಇರಿಸಿಕೊಂಡ ಸಂಕಾಲಿಯಾ ಅವರು ಈ ಹಿನ್ನೆಲೆಯಲ್ಲಿಯೇ ರಾಮಾಯಣದ ಐತಿಹಾಸಿಕ ನೆಲೆಯನ್ನು ಶೋಧಿಸುವ ಕೆಲಸ ಮಾಡಿದ್ದಾರೆ.

ಎ.ಕೆ. ರಾಮಾನುಜನ್‌ರವರ 'THREE HUNDRED RAMAYANAS' ಎಂಬ ಕೃತಿಯ ಕನ್ನಡಾನುವಾದವನ್ನು ಡಾ। ಮಹಾಬಲೇಶ್ವರ್ ರಾವ್ ಅವರು ಮಾಡಿರುತ್ತಾರೆ. ಇಲ್ಲಿ ಎ.ಕೆ. ರಾಮಾನುಜನ್‌ರವರು ರಾಮಾಯಣವನ್ನು ತೌಲನಿಕ ನೆಲೆಯಲ್ಲಿ ವಿಶ್ಲೇಷಿಸಿರುತ್ತಾರೆ. ಹೀಗೆ ತೌಲನಿಕವಾಗಿ ಪರಿಶೀಲಿಸುತ್ತಾ ವಿವಿಧ ರಾಮಾಯಣಗಳ ಸಾಮ್ಯ ಮತ್ತು ಭಿನ್ನತೆಯನ್ನು ಗುರುತಿಸಿರುತ್ತಾರೆ. ಈ ವಿಮರ್ಶೆ ರಾಮಾಯಣ ನಿರ್ಮಿತಿಯ ಹಿಂದೆ ಅಡಗಿರುವ

ನಿರ್ದಿಷ್ಟ ಉದ್ದೇಶವನ್ನು ಹೇಳುತ್ತದೆ. ವಾಲ್ಮೀಕಿ ರಾಮಾಯಣದ ಕಲ್ಪನೆಗಳನ್ನು ಮತ್ತು ವಿಸಂಗತಿಗಳನ್ನು ಒಡೆವ ಉದ್ದೇಶ ಜೈನ ರಾಮಾಯಣಕ್ಕೆ ಇತ್ತು ಎಂಬುದನ್ನು ಅಧ್ಯಯನಕಾರರು ಸ್ಪಷ್ಟಪಡಿಸಿದ್ದಾರೆ. ವಾಸ್ತವವಾಗಿ ರಾಮಾಯಣದ ಪಾತ್ರಗಳ ಕುರಿತು ಬೇರೂರಿರುವ ಪೂರ್ವಗ್ರಹಗಳನ್ನು ಜೈನ ರಾಮಾಯಣಗಳು ಒಡೆದಿವೆ. ಅಧ್ಯಯನಕಾರರು ಜೈನ ರಾಮಾಯಣ, ದಕ್ಷಿಣ ಭಾರತದ ಜನಪದ ರಾಮಾಯಣ ಕಾವ್ಯ ಮತ್ತು ವಾಲ್ಮೀಕಿ ರಾಮಾಯಣದ ನಿರೂಪಣೆ ಹಾಗೂ ಮೌಲ್ಯಗಳಲ್ಲಿ ವ್ಯತ್ಯಾಸವನ್ನು ಕಂಡಿದ್ದಾರೆ. ರಾಮಾಯಣಗಳ ನಿರೂಪಣೆಯ ಕುರಿತು ಅಭ್ಯಾಸ ಮಾಡುವುದಕ್ಕಿಂತ ಮೌಲ್ಯ ಪ್ರತಿಪಾದನೆಯ ಕುರಿತು ಅಭ್ಯಾಸ ಮಾಡುವಲ್ಲಿ ಅಧ್ಯಯನಕಾರರು ಆಸಕ್ತರು. ಹಾಗಾಗಿ ಅಸ್ತಿತ್ವವಾದದ ಹಿನ್ನೆಲೆಯಲ್ಲಿ ರಾಮಾಯಣವನ್ನು ಅಭ್ಯಸಿಸುವ ಅಧ್ಯಯನಕಾರರಿಗೆ ಪಾತ್ರಗಳೊಂದಿಗೆ ಮೌಲ್ಯಗಳೂ ಬಹುಮುಖ್ಯವಾಗುತ್ತವೆ. ಈ ನೆಲೆಯಲ್ಲಿ ನವ್ಯ ಕಾಲಘಟ್ಟದ ದಟ್ಟ ಛಾಯೆಯನ್ನು ಎ.ಕೆ. ರಾಮಾನುಜನ್‌ರವರ ಅಧ್ಯಯನದಲ್ಲಿ ಕಾಣಬಹುದು.

ಕನ್ನಡ ಸಾಹಿತ್ಯದ ಯಾವ ಅಧ್ಯಯನಕಾರರೂ ನಿರೂಪಿಸದ ವಿಶಿಷ್ಟ ಮಾದರಿಯಲ್ಲಿ ಹೆಚ್ ವಿ. ಸಾವಿತ್ರಮ್ಮನವರು ರಾಮಾಯಣದ ಅಧ್ಯಯನ ನಡೆಸಿದ್ದಾರೆ. ಭಕ್ತಿಯ ನೆಲೆಯಲ್ಲಿ, ಶಕ್ತಿಯ ನೆಲೆಯಲ್ಲಿ, ಪಾತಿವ್ರತ್ಯದ ನೆಲೆಯಲ್ಲಿ ರಾಮಾಯಣ ಕುರಿತ ಅಧ್ಯಯನಗಳು ನಡೆದಿವೆ. ಆದರೆ ಸ್ತ್ರೀಸಂವೇದನೆಯ ನೆಲೆಯಿಂದ ನಡೆದ ಅಧ್ಯಯನಗಳು ವಿರಳ. ಈ ನೆಲೆಯಲ್ಲಿ ಹೆಚ್.ವಿ. ಸಾವಿತ್ರಮ್ಮನವರ 'ಸೀತೆ ರಾಮ ರಾವಣ' ಕಾದಂಬರಿಯೂ ಒಂದು. ಈ ಕಾದಂಬರಿಯ ಊರ್ಮಿಳೆಯ ಪಾತ್ರ ಬಂಡಾಯ ಮನೋಧರ್ಮಕ್ಕೆ ಒಂದು ಪ್ರತ್ಯಕ್ಷ ನಿದರ್ಶನ. ಹೆಚ್.ವಿ. ಸಾವಿತ್ರಮ್ಮನವರ ಈ ಕೃತಿ ವಾಸ್ತವ ಬದುಕಿಗೆ ತೀರಾ ಸಮೀಪವಾಗಿ ಮಹಿಳಾ ಜಗತ್ತಿನ ಬದುಕನ್ನು ಕಟ್ಟಿಕೊಟ್ಟಿದೆ. ರಾಮಾಯಣದ ಸ್ತ್ರೀಪಾತ್ರಗಳ ವೈಚಾರಿಕ ನಿಲುವು, ಅಭಿಪ್ರಾಯ, ಅಭಿಲಾಷೆ, ವೇದನೆ, ಹತಾಶೆ, ಆತ್ಮಾಭಿಮಾನ ಮತ್ತು ಪ್ರತಿಭಟನೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಕಾದಂಬರಿಕಾರ್ತಿ ಮಾಡಿದ್ದಾರೆ. ಈ ಅಧ್ಯಯನದ ಹಿಂದೆ ಕಾಲಘಟ್ಟದ ಪ್ರಭಾವವನ್ನು ಗುರುತಿಸಬಹುದು. ಎಂಭತ್ತರ ದಶಕದ ಹೊತ್ತಿಗೆ ಸ್ತ್ರೀವಾದಿ ಸಾಹಿತ್ಯ ರೂಪುಪಡೆಯುತ್ತಿದ್ದ ಕಾಲ. ಈ ಸಂದರ್ಭದ ಬರವಣಿಗೆಗಳ ಮೇಲೆ ಸ್ತ್ರೀವಾದಿ ನಿಲುವಿನ ಪ್ರಭಾವವಿರುವುದು ಸುಸ್ಪಷ್ಟ. ಹಾಗಾಗಿ ಹೆಚ್.ವಿ. ಸಾವಿತ್ರಮ್ಮನವರ ರಾಮಾಯಣ ಕುರಿತ ಅಧ್ಯಯನ ಪುರಾಣಪ್ರಜ್ಞೆಯನ್ನು ಬಲಗೊಳಿಸುವ ಉದ್ದೇಶ ಹೊಂದಿಲ್ಲ. ಮಹಿಳಾಸಮುದಾಯದ ಅಸ್ತಿತ್ವ, ಹಕ್ಕು, ಆತ್ಮಗೌರವ, ಸ್ವಾತಂತ್ರ್ಯ ಮತ್ತು ವಾಕ್‌ಶಕ್ತಿಯನ್ನು ಎದುರುಗಾಣುತ್ತದೆ. ಹಾಗಾಗಿ ರಾಮಾಯಣದ ಮಹಿಳಾ ಪಾತ್ರಗಳ ಸ್ವತಂತ್ರ ಅಸ್ತಿತ್ವವನ್ನು ನಿರೂಪಿಸುವಲ್ಲಿ ಕಾದಂಬರಿಕಾರ್ತಿ ತಮ್ಮನ್ನು ವಿಶೇಷವಾಗಿ ತೊಡಗಿಸಿಕೊಂಡಿದ್ದು ಸ್ಪಷ್ಟವಾಗುತ್ತದೆ.

ಭಾರತೀಯ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುವ ರಾಮಾಯಣ ಪರಂಪರೆಯ ಕುರಿತು ಅಧ್ಯಯನ ನಡೆಸಿದವರಲ್ಲಿ ಡಾ। ಎಸ್.ವಿ. ಪ್ರಭಾವತಿಯವರು ಮುಖ್ಯರು. 'ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು ಒಂದು ತೌಲನಿಕ ಅಧ್ಯಯನ' ಎಂಬ ಕೃತಿ ಬರೆದ ಡಾ। ಎಸ್.ವಿ. ಪ್ರಭಾವತಿಯವರು ವಿಶಿಷ್ಟ ಸೃಜನಶೀಲ ದೃಷ್ಟಿಕೋನದ ನೆಲೆಯಲ್ಲಿ ರಾಮಾಯಣವನ್ನು ಕಂಡಿದ್ದಾರೆ. ಈ ಕಾಣುವಿಕೆಯ ಹಿಂದೆ ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಶತಮಾನದ ಜೀವನಕ್ರಮ, ಸಾಮಾಜಿಕ ಸ್ಥಿತಿ, ಮಹಿಳಾಸಮುದಾಯದ ಸ್ಥಿತಿಗತಿಯ ಪ್ರಭಾವವಿರುವುದು ಸ್ಪಷ್ಟವಾಗುತ್ತದೆ. ಬಹುತೇಕ ರಾಮಾಯಣಗಳ ಕುರಿತು ಇವರು ನಡೆಸಿದ ಅಧ್ಯಯನ ಸೃಜನಶೀಲ ನೆಲೆಯಲ್ಲಿ ಮೂಡಿದೆ. ಪ್ರಸ್ತುತ ಜಾಗತೀಕರಣದ ಸಂದರ್ಭಕ್ಕೆ ಈ ಬಗೆಯ ನೋಟ ಅಗತ್ಯವಾಗುತ್ತದೆ. ಮೌಲ್ಯಗಳ ದೃಷ್ಟಿಯಿಂದ, ಅಸ್ತಿತ್ವದ ನೆಲೆಯಿಂದ, ವ್ಯಕ್ತಿಸ್ವಾತಂತ್ರ್ಯದ ನೆಲೆಯಿಂದ ಮಹಿಳಾಸಂವೇದನೆಯ ನೆಲೆಯಿಂದ ಮಾನವ ಹಕ್ಕುಗಳ ನೆಲೆಯಿಂದ ಇವರ ಅಧ್ಯಯನ ಸೃಜನಶೀಲ ಬರವಣಿಗೆ ಎಂದೇ ಹೇಳಬೇಕು. ಪರಂಪರೆಯ ನೆಲೆಯಲ್ಲಿ ಚಾರಿತ್ರಿಕ ಕಥನವನ್ನು ಕಟ್ಟುವ ರಾಮಾಯಣ ಕೃತಿಗಳನ್ನು ಸಮಕಾಲೀನ ಸಂದರ್ಭಕ್ಕೆ ಮುಖಾಮುಖಿಯಾಗಿ ಡಾ। ಎಸ್.ವಿ. ಪ್ರಭಾವತಿಯವರು ಅಭ್ಯಾಸಮಾಡಿದ್ದಾರೆ. ಈ ನಿರೂಪಣೆಯ ಹಿಂದೆ ಲೇಖಕಿಯ ಮನೋಧರ್ಮದೊಂದಿಗೆ ಸಮಕಾಲೀನ ಪ್ರಭಾವವಿರುವುದು ಸ್ಪಷ್ಟವಾಗುತ್ತದೆ. ರಾಮಾಯಣ ಪರಂಪರೆಯ ತಳಹದಿಯ ಮೇಲೆ ಡಾ। ಎಸ್. ವಿ. ಪ್ರಭಾವತಿಯವರ ಚಿಂತನೆ ಸಾಗಿದೆ. ಅವರ ಸಮಗ್ರ ರಾಮಾಯಣ ಅಧ್ಯಯನ ಯಾವುದೇ 'ಇಸಂ'ಗಳನ್ನು ಪ್ರತಿಪಾದಿಸುವುದಿಲ್ಲ. ವೈಯಕ್ತಿಕ ನೆಲೆಯಿಂದ ಲೇಖಕಿ ಯಾವುದೇ ಪಾರಂಪರಿಕ ಸಿದ್ಧಾಂತಗಳಿಗೆ ಬದ್ಧರಾದಂತೆ ಕಾಣುವುದಿಲ್ಲ. ಅಧ್ಯಯನದಲ್ಲಿ ವೈದಿಕ, ಜೈನ, ಬೌದ್ಧ, ಕನ್ನಡೇತರ, ವಿಶ್ವ ರಾಮಾಯಣಗಳನ್ನು ಪರಂಪರೆಯ ನೆಲೆಯಲ್ಲಿ ಅಧ್ಯಯನ ಮಾಡಿರುತ್ತಾರೆ. ಅಧ್ಯಯನದಲ್ಲಿ ಯಾವುದೇ ಪೂರ್ವಗ್ರಹಗಳಿಗೆ ಬದ್ಧರಾಗಿಲ್ಲ. ಎಲ್ಲ ರಾಮಾಯಣಗಳಿಗೂ ಮೂಲ ತಳಹದಿ ಜನಪದ ರಾಮಾಯಣ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಮೌಖಿಕ ರಾಮಾಯಣವನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ಪರಿಗ್ರಹಿಸುವ ಲೇಖಕಿ ಮಾತೃಮೂಲೀಯ ಕುಟುಂಬ ವ್ಯವಸ್ಥೆಯ ಕುರಿತು ಗಮನಹರಿಸಿದ್ದಾರೆ. ಸೀತೆಯನ್ನು ರಾಮಾಯಣದ ಕಥಾನಾಯಕಿಯನ್ನಾಗಿ ಅಭ್ಯಾಸ ಮಾಡದೇ ಸಮಸ್ತ ಸ್ತ್ರೀಸಮುದಾಯದ ಪ್ರತಿನಿಧಿಯಾಗಿ ಕಂಡಿದ್ದು ಲೇಖಕಿಯ ಸೃಜನಶೀಲತೆಗೊಂದು ನಿದರ್ಶನ. ಮಹಿಳಾ ಸ್ಥಿತಿಗತಿಯ ಕುರಿತು ಪ್ರತಿ ರಾಮಾಯಣಗಳ ನೋಟದ ಹಿಂದೆ ಆಯಾಯ ಕಾಲದ ಸಾಂಸ್ಕೃತಿಕ ಬದುಕಿನ ದಟ್ಟ ಛಾಯೆಯನ್ನು ಗುರುತಿಸಿದ್ದಾರೆ. ಹೀಗೆ ರಾಮಾಯಣ ಪರಂಪರೆಯನ್ನು ಪ್ರಸ್ತುತ ಸಂದರ್ಭದಲ್ಲಿ ಇಟ್ಟು ನೋಡುವ ಮನೋಧರ್ಮ ಇಲ್ಲಿನದು. ಇಲ್ಲಿನ ಸೃಜನಶೀಲ ನೋಟದ ಹಿಂದೆ ಸಮಕಾಲೀನ ಸಂದರ್ಭಗಳು ಪ್ರಭಾವ ಬೀರಿರುವುದು ಸ್ಪಷ್ಟವಾಗುತ್ತವೆ.

ರಾಮಾಯಣ ಪರಂಪರೆಯ ಕುರಿತು ಡಾ। ಎಸ್.ವಿ. ಪ್ರಭಾವತಿಯವರ ಅಧ್ಯಯನ ಕೆಲವು ವಿಚಾರಗಳನ್ನು ಮುಂದಿಡುತ್ತದೆ.

೧. ರಾಮಾಯಣದಲ್ಲಿ ನೀತಿ ಸಿದ್ಧಾಂತ ಇರುವುದು ಸ್ಪಷ್ಟ.

೨. ಬಹುತೇಕ ಶಿಷ್ಟ ರಾಮಾಯಣಗಳು ಸ್ತ್ರೀಸಂವೇದನೆಯನ್ನು ಗ್ರಹಿಸಲಾರದ ಮಟ್ಟದಲ್ಲಿವೆ.

೩. ದಕ್ಷಿಣ ಭಾರತದ ಮೌಖಿಕ ರಾಮಾಯಣದಲ್ಲಿ ಮಾತೃಮೂಲೀಯ ಕುಟುಂಬ ವ್ಯವಸ್ಥೆಯ ಛಾಯೆಯಿದೆ.

೪. ಸ್ತ್ರೀಸ್ವಾತಂತ್ರ್ಯವನ್ನು ಕಸಿದ ಶಿಷ್ಟ ರಾಮಾಯಣ ಪರಂಪರೆ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನು ಪ್ರೋತ್ಸಾಹಿಸಿದೆ.

ರಾಮಾಯಣ ಪರಂಪರೆಯನ್ನು ಪ್ರಸ್ತುತ ಸಂದರ್ಭದಲ್ಲಿ ಇಟ್ಟು ನೋಡಿದ ಪರಿಣಾಮ ಮೇಲಿನ ಎಲ್ಲಾ ಅಂಶಗಳು ಸ್ಪಷ್ಟವಾಗುತ್ತವೆ. ಈ ಎಲ್ಲ ಅಂಶಗಳನ್ನು ಪರಿಗ್ರಹಿಸುವಲ್ಲಿ ಲೇಖಕಿಯ ಮೇಲೆ ಪ್ರಸ್ತುತ ಆಧುನಿಕ ಸಂದರ್ಭ ಪ್ರಭಾವಿಸಿರುವುದನ್ನು ಗಮನಿಸಬೇಕು.

ಡಾ। ಪಿ. ಶಾಂತಾರಾಂ ಪ್ರಭುಗಳು 'ವಿಶ್ವ ರಾಮಕಥಾವಾಹಿನೀ' ಎಂಬ ಗ್ರಂಥದಲ್ಲಿ ವಿಶ್ವದ ಬಹುತೇಕ ರಾಮಾಯಣಗಳ ಅಧ್ಯಯನ ನಡೆಸಿದ್ದಾರೆ. ಬಹುತೇಕ ರಾಮಾಯಣಗಳಿಗೆ ತಮ್ಮದೇ ಆದ ನೆಲೆಯಲ್ಲಿ ಸ್ಪಂದಿಸಿದ್ದಾರೆ. ರಾಮಾಯಣದ ರಾಜರ ಯಶೋಗಾಥೆ, ಯುದ್ಧವಿಜಯ, ಸಾಹಸ ಕಥೆಯನ್ನು ಪ್ರಧಾನವಾಹಿನಿಗೆ ತಂದು ಅಭ್ಯಸಿಸುವ ಉದ್ದೇಶ ಅವರ ಅಧ್ಯಯನಕ್ಕೆ ಇಲ್ಲ. ಇದಕ್ಕೆ ಪರ್ಯಾಯವಾಗಿ ಆಧ್ಯಾತ್ಮ ಚಿಂತನೆಯ ನೆಲೆಯಲ್ಲಿ ವಿಶ್ವದ ಬಹುತೇಕ ರಾಮಾಯಣಗಳನ್ನು ಅಭ್ಯಾಸ ಮಾಡಿರುವುದು ಸ್ಪಷ್ಟವಾಗುತ್ತದೆ. ಭಗವದ್ ಭಕ್ತಿಯ ನೆಲೆಯಲ್ಲಿ ರಾಮಾಯಣವನ್ನು ಅಭ್ಯಾಸ ಮಾಡಿರುವ ಅಧ್ಯಯನಕಾರರು ಮನುಷ್ಯರನ್ನು ಮನುಷ್ಯರನ್ನಾಗಿ ನೋಡುವ ಬದಲಿಗೆ ದೈವಿಕ ನೆಲೆಯಲ್ಲಿ ನೋಡುವ ಉದ್ದೇಶ ಹೊಂದಿದ್ದಾರೆ. ಹಾಗಾಗಿ ಶರಣಾಗುವಿಕೆ, ಭಕ್ತಿಭಾವ, ಆಧ್ಯಾತ್ಮ ಶಕ್ತಿಯ ನೆಲೆಯಲ್ಲಿಯೇ ವಿಶ್ವ ರಾಮಾಯಣಗಳ ಅಧ್ಯಯನ ನಡೆಸಿದ್ದಾರೆ. ಅವರ ಅಧ್ಯಯನದ ಹಿನ್ನೆಲೆಯಲ್ಲಿ ಕೆಲವು ವಿಚಾರಗಳನ್ನು ಪರಿಗ್ರಹಿಸಬಹುದು.

೧. ಆಧ್ಯಾತ್ಮ ಪರಿಕಲ್ಪನೆಯ ಮೂಲ ತಳಹದಿ ಇಲ್ಲಿ ಅಧ್ಯಯನಕಾರರಿಗೆ ಬಹುಮುಖ್ಯ.

೨. ಪ್ರಭುತ್ವ ಪರಂಪರೆಯ ಏಕಪಕ್ಷೀಯ ನಿಲುವನ್ನು ಗುರುತಿಸುವ ಉದ್ದೇಶ ಈ ಅಧ್ಯಯನಕ್ಕೆ ಇಲ್ಲ.

೩. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯನ್ನಾಗಲಿ, ಮಹಿಳಾಸಮುದಾಯದ ಅಂತರಂಗದ ತುಡಿತವನ್ನಾಗಲಿ ಪ್ರಶ್ನಿಸುವ ಪ್ರಮೇಯವೇ ಇಲ್ಲಿಲ್ಲ.

೪. ರಾಮಾಯಣದ ರಾಮನ ಪಾತ್ರವನ್ನು ದೈವಿಕ ನೆಲೆಯಲ್ಲಿ ಕಾಣುವ ಒಳತೋಟಿ ಅಧ್ಯಯನಕಾರರಲ್ಲಿ ಇರುವುದು ಸ್ಪಷ್ಟವಾಗುತ್ತದೆ.

ಅವರ ಅಧ್ಯಯನ ಭಕ್ತಿಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ತತ್ತ್ವ ಸಿದ್ಧಾಂತಗಳಿಗೆ ಬದ್ಧವಾದಂತಿದೆ. ಮೌಖಿಕ ರಾಮಾಯಣಕ್ಕೆ ಅವರ ಅಧ್ಯಯನದಲ್ಲಿ ವಿಶೇಷ ಸ್ಥಾನ ದೊರೆತಿಲ್ಲ. ಶಿಷ್ಟ ಪರಂಪರೆಯ ನಿಲುವುಗಳು ಇಲ್ಲಿ ಪ್ರಶ್ನೆಗೆ ಒಳಗಾಗಿಲ್ಲ. ಬಹುತೇಕ ಜನಾಂಗೀಯರು ರಾಮನನ್ನು ಆರಾಧ್ಯದೈವವನ್ನಾಗಿ ಸ್ವೀಕರಿಸಿದುದರ ವಿವರಗಳೇ ಇಲ್ಲಿ ಬಂದಿವೆ. ಹೀಗೆ ಡಾ। ಪಿ. ಶಾಂತಾರಾಂ ಪ್ರಭುಗಳ ಅಧ್ಯಯನದ ಮೇಲೆ ಭಕ್ತಿಪಂಥದ ಪ್ರಭಾವವಿರುವುದು ಸ್ಪಷ್ಟವಾಗುತ್ತದೆ. ಭಕ್ತಿಯ ಪರಾಕಾಷ್ಠೆಯೊಂದಿಗೆ ಮಾನವಸಮುದಾಯವನ್ನು ಮನುಷ್ಯತ್ವದ ನೆಲೆಯಲ್ಲಿ ನಿರೂಪಿಸುವುದಕ್ಕಿಂತ ದೈವತ್ವದ ನೆಲೆಯಲ್ಲಿ ನಿರೂಪಿಸಲು ಅಧ್ಯಯನಕಾರರು ಆಸಕ್ತರಾಗಿರುವುದು ಕಂಡುಬರುತ್ತದೆ.

ಕನ್ನಡದ ಸಂದರ್ಭದಲ್ಲಿ ಹೆಚ್ಚಿನ ಅಧ್ಯಯನಗಳು, ವಿಶ್ಲೇಷಣೆಗಳು ನಡೆದದ್ದು ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಕೃತಿಯನ್ನು ಕುರಿತು. ಇವುಗಳಲ್ಲಿ ಬಹುಮುಖ್ಯವಾಗಿ ಸ್ತ್ರೀಪರ ಅಧ್ಯಯನಗಳನ್ನು ನನ್ನ ಸಂಶೋಧನ ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿದೆ. ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯ ವಿಮರ್ಶೆಗೆ ಒಳಗಾದಷ್ಟು ಮತ್ತಾವ ಮಹಾಕಾವ್ಯವೂ ಒಳಗಾಗಿಲ್ಲ ಎಂದೇ ಹೇಳಬೇಕು. ವಾಲ್ಮೀಕಿ ರಾಮಾಯಣದ ಅಂತರ್ಗತ ಅಂಶಗಳಲ್ಲಿ ಕೆಲವನ್ನು ಉಳಿಸಿಕೊಂಡು ಸಂದರ್ಭಾನುಸಾರಿಯಾಗಿ ಹೊಸ ಹೊಸ ಮೌಲ್ಯ, ತಾತ್ವಿಕತೆ, ನಿಲುವುಗಳನ್ನು ಅಳವಡಿಸಿಕೊಂಡ ಮಹಾಕಾವ್ಯ ಕುವೆಂಪುರವರ 'ಶ್ರೀ ರಾಮಾಯಣದರ್ಶನಂ'. ಬಾಹ್ಯನೋಟಕ್ಕೆ ಸಾಂಪ್ರದಾಯಿಕ ಕಥಾಹಂದರದಲ್ಲಿ ಮುಂದೆ ಸಾಗಿದಂತೆ ಭಾಸವಾದರೂ ವಾಸ್ತವವಾಗಿ ಹೊಸ ಹೊಸ ಹೊಳಹುಗಳನ್ನು ರೂಢಿಸಿಕೊಂಡು ಮಾರ್ಪಾಟಿಗೆ ಒಳಗಾದ ಕಾವ್ಯ ಇದಾಗಿದೆ. ವಾಲ್ಮೀಕಿಯ ಸಾಂಪ್ರದಾಯಿಕ ಚಿಂತನೆಯೊಂದಿಗೆ ಜೈನಪರಂಪರೆಯ ಅಹಿಂಸಾ ಪರಿಕಲ್ಪನೆಯು ಕುವೆಂಪು ಮಹಾಕಾವ್ಯದಲ್ಲಿ ಮಿಳಿತಗೊಂಡಿದೆ. ಕುವೆಂಪು ರಾಮಾಯಣವನ್ನು ವಿಭಿನ್ನ ದೃಷ್ಟಿಕೋನಗಳಿಂದ ಅಧ್ಯಯನಕಾರರು ಅಭ್ಯಸಿಸಿದ್ದಾರೆ. ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಮಹಿಳಾ ಪಾತ್ರಗಳೊಂದಿಗೆ ರಾಜಧರ್ಮ, ಯುಗಧರ್ಮ, ನೀತಿ, ವಿಜ್ಞಾನ, ಸಮಕಾಲೀನತೆಯ ಕುರಿತು ಅಪಾರ ಪ್ರಮಾಣದ ವಿಮರ್ಶೆಗಳು ಬಂದಿವೆ. ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯ ಸಮನ್ವಯ ದೃಷ್ಟಿಯ ರೂಪಕ. ಕುವೆಂಪುರವರ ವಿಶ್ವಮಾನವ ಪ್ರಜ್ಞೆ, ಮಾನವೀಯ ನೆಲೆ, ಸಮಾನತಾಭಾವವನ್ನು ಬಿತ್ತುವ ಉದ್ದೇಶ 'ಶ್ರೀ ರಾಮಾಯಣದರ್ಶನಂ'ಗೆ ಇದೆ.

ಕುವೆಂಪು ರಾಮಾಯಣದ ಅಧ್ಯಯನಕಾರರು ವಿಭಿನ್ನ ಮನೋಧರ್ಮದ ನೆಲೆಯಲ್ಲಿ ಅಧ್ಯಯನ ನಡೆಸಿದ್ದಾರೆ. 'ಕುವೆಂಪು ಕೃತಿ ಚಿಂತನ' ಎಂಬ ಕೃತಿಯ 'ಕವಿಕ್ರತುದರ್ಶನ' ಎಂಬ ಲೇಖನದಲ್ಲಿ 'ಸಾಕ್ಷಿ'ಯವರು ಕುವೆಂಪು ಮಹಾಕಾವ್ಯದ ಅನ್ಯನತೆಯನ್ನು ಕುರಿತು ಹೇಳಿದ್ದಾರೆ. ಕುವೆಂಪು ಕಾವ್ಯದ ಹಿನ್ನೆಲೆಯಲ್ಲಿ ಕವಿಕ್ರತುದರ್ಶನದ ಕುರಿತು ಪ್ರಸ್ತಾಪಿಸಿದ 'ಸಾಕ್ಷಿ'ಯವರು ಇದನ್ನು ಶಕ್ತಿಯ ನೆಲೆಯಾಗಿ ಪರಿಗ್ರಹಿಸಿದ್ದಾರೆ. ಈ ಶಕ್ತಿ ಜ್ಞಾನದಿಂದ ಕೂಡಿದ ಸಂಕಲ್ಪಶಕ್ತಿ ಎಂದು ತಿಳಿದ ಅಧ್ಯಯನಕಾರರು ಮಂಥರೆಯನ್ನು ಕುಟಿಲತೆಯ ನೆಲೆಯಲ್ಲಿ ಪರಿಭಾವಿಸಿಲ್ಲ. ಮಂಥರೆಯ ಸಂಕಲ್ಪಶಕ್ತಿಯ ಪರಿಣಾಮವೇ ಭರತವಾತ್ಸಲ್ಯದ ರೂಪು ಪಡೆಯುವಂತಾಯಿತು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯವನ್ನು ಕ್ರತುಶಕ್ತಿಯ ನೆಲೆಯಲ್ಲಿ ಪರಿಗ್ರಹಿಸಿದ ಅಧ್ಯಯನಕಾರರಾದ 'ಸಾಕ್ಷಿ'ಯವರಿಗೆ ರಾಮಾಯಣದ ಪ್ರಭುತ್ವ ಪರಂಪರೆಯನ್ನು ವೈಭವೀಕರಿಸುವ ಉದ್ದೇಶವಿಲ್ಲ. ಬದಲಿಗೆ ರಾಮಾಯಣದಲ್ಲಿ ತಿರಸ್ಕಾರಕ್ಕೆ ಒಳಗಾದ ಮಂಥರೆಯ ಪಾತ್ರವೂ ಅವರಿಗೆ ಪ್ರಧಾನವಾಗಿದೆ. ಈ ಹಿನ್ನೆಲೆಯಲ್ಲಿ ಮಂಥರೆಯ ಪಾತ್ರವನ್ನು ಪ್ರಸ್ತಾಪಿಸಿದ ಅಧ್ಯಯನಕಾರರಿಗೆ ಆಕೆಯ ಬದುಕಿನ ಕುರಿತು ವಿಶೇಷ ಕಾಳಜಿ ಇರುವುದು ಸ್ಪಷ್ಟವಾಗುತ್ತದೆ. ರಾಮಾಯಣದ ಮಂಥರೆಯಲ್ಲೂ ಸಂಕಲ್ಪಶಕ್ತಿಯನ್ನು ಅಧ್ಯಯನಕಾರರು ಕಂಡಿದ್ದಾರೆ.

'ಶ್ರೀ ಕುವೆಂಪು ಸಂದರ್ಶನ ಮತ್ತು ಪ್ರಸಂಗಗಳು' ಎಂಬ ಕೃತಿಯಲ್ಲಿ ಕೋ. ಚೆನ್ನಬಸಪ್ಪನವರು ಕುವೆಂಪು ರಾಮಾಯಣದ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಪರಿಗ್ರಹಿಸಿದ್ದಾರೆ. 'ಶ್ರೀ ರಾಮಾಯಣದರ್ಶನಂದಲ್ಲಿ ಪ್ರಾದೇಶಿಕತೆ' ಎಂಬ ಲೇಖನದಲ್ಲಿ ಕುವೆಂಪುರವರ ಪ್ರಕೃತಿಪ್ರೇಮದ ಕುರಿತು ಬರೆಯುತ್ತಾರೆ. ರಾಮಾಯಣದ ಅರಣ್ಯ ಸಂದರ್ಭವನ್ನು ವಿವರಿಸುವಾಗೆಲ್ಲ ಕುವೆಂಪು ಮಲೆನಾಡನ್ನೇ ಉಪಮೆಯಾಗಿ ಬಳಸಿದ್ದಾರೆ. ನವೋದಯ ಸಾಹಿತ್ಯದ ಲಕ್ಷಣಗಳಲ್ಲಿ ಒಂದಾದ ಪ್ರಕೃತಿಪ್ರೇಮವನ್ನು ಕುವೆಂಪು ಮಹಾಕಾವ್ಯದ ಹಿನ್ನೆಲೆಯಲ್ಲಿ ಅಧ್ಯಯನಕಾರರು ಗುರುತಿಸಿದ್ದಾರೆ. ಕವಿಯ ಕಾವ್ಯದಲ್ಲಿ ಮಲೆನಾಡ ಸೊಬಗೇ ತುಂಬಿರುವುದು ಗಮನಾರ್ಹ ಸಂಗತಿ. ಎಲ್ಲೆಲ್ಲಿ ಪ್ರಕೃತಿ ಸೌಂದರ್ಯವನ್ನು ತುಂಬಲು ಸಾಧ್ಯವೋ ಅಲ್ಲೆಲ್ಲಾ ಮಲೆನಾಡ ವೈಭವವನ್ನು ತುಂಬುತ್ತಾ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯವನ್ನು ಹಸಿರಾಗಿಸಿದ್ದಾರೆ. ಕವಿ ಕುವೆಂಪುರವರ ಪ್ರಕೃತಿಪ್ರೇಮ ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಹಾಗಾಗಿ ರಾಮನ ವನವಾಸದ ಸಂದರ್ಭವನ್ನು ಕವಿ ಮನೋಜ್ಞವಾಗಿ ನಿರೂಪಿಸಿದ್ದಾರೆ.

ಈ ನೆಲೆಯಲ್ಲಿ ನವೋದಯ ಸಾಹಿತ್ಯದ ಪ್ರಭಾವ ಕವಿಯ ಮೇಲೆ ಆಗಿರುವುದನ್ನು ಕೋ. ಚೆನ್ನಬಸಪ್ಪನವರು ಗುರುತಿಸುತ್ತಾರೆ. ಹೀಗೆ ನವೋದಯ ಸಾಹಿತ್ಯದ ಪ್ರಕೃತಿ ಮತ್ತು ಪರಿಸರ ಪ್ರಜ್ಞೆಯ ಕುರಿತು ಪ್ರಸ್ತುತ ಸಂದರ್ಭದಲ್ಲಿ ಕೋ. ಚೆನ್ನಬಸಪ್ಪನವರು ಅಧ್ಯಯನ ನಡೆಸಿರುತ್ತಾರೆ. ಹಾಗಾಗಿ ಪ್ರಸ್ತುತ ಸಂದರ್ಭದಲ್ಲಿ ನಿಂತು ನವೋದಯ ಕಾವ್ಯ ಲಕ್ಷಣವನ್ನು ಕುವೆಂಪು ಕಾವ್ಯದ ಹಿನ್ನೆಲೆಯಲ್ಲಿ ಕಾಣುವ ಉದ್ದೇಶ ಅಧ್ಯಯನಕಾರರದು.

'ಕುವೆಂಪು ದರ್ಶನ ಮತ್ತು ಸಂದೇಶ' ಎಂಬ ಕೃತಿಯ 'ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ಸಂದೇಶ' ಎಂಬ ಲೇಖನದಲ್ಲಿ ದೇಜಗೌ ಅವರು ತಮ್ಮದೇ ಆದ ವಿಶಿಷ್ಟ ಹೊಳಹಿನಿಂದ ಕುವೆಂಪು ರಾಮಾಯಣವನ್ನು ಕಂಡಿದ್ದಾರೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕಥಾವಸ್ತು ಪುರಾತನದ್ದಾದರೂ ಕವಿ ಕುವೆಂಪುರವರು ಅದರಲ್ಲಿ ಆಧುನಿಕ ಯುಗದ ವೈಜ್ಞಾನಿಕ ದೃಷ್ಟಿಕೋನವನ್ನು ಮಿಳಿತಗೊಳಿಸಿದ್ದಾರೆ ಎಂಬುದು ಅಧ್ಯಯನಕಾರರ ಅಭಿಮತ. ಕವಿಯ ಕಲ್ಪನಾನುಭವ ಮತ್ತು ಭಾವಾಲೋಚನೆಗಳು ದರ್ಶನಂನಲ್ಲಿ ಪ್ರತಿಫಲಿಸಿವೆ ಎಂಬುದು ಇವರ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಈ ದಿಕ್ಕಿನಲ್ಲಿ ಕುವೆಂಪು ರಾಮಾಯಣದ ಕುರಿತು ದೇಜಗೌ ಅವರ ಅಧ್ಯಯನ ಸಮಕಾಲೀನ ಸಂದರ್ಭಕ್ಕೆ ಪೂರಕವಾದ ಮೌಲ್ಯಗಳನ್ನು ಎತ್ತಿಹಿಡಿಯುತ್ತವೆ.

ಅಧ್ಯಯನಕಾರರು ವಾಲ್ಮೀಕಿ ರಾಮಾಯಣದ ಕೈಕೆ, ಮಂಥರೆ, ಮಂಡೋದರಿ, ಭರತ ಮತ್ತು ರಾವಣರ ಪಾತ್ರಗಳಿಗೂ ಕುವೆಂಪು ರಾಮಾಯಣದ ಪಾತ್ರಗಳಿಗೂ ಬಹುತೇಕ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. ಕುವೆಂಪು ರಾಮಾಯಣ ನಿತ್ಯಸತ್ಯ ಮತ್ತು ಶಾಶ್ವತ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ ಎಂಬುದನ್ನು ದೇಜಗೌರವರು ಕಾಣಿಸಿದ್ದಾರೆ. ಕುವೆಂಪು ರಾಮಾಯಣದಲ್ಲಿ ಪ್ರತಿಮಾ ವಿಧಾನವನ್ನು ಗುರುತಿಸುತ್ತಾ ಅಧ್ಯಯನಕಾರರು ಭಾರತದ ಮೌಲ್ಯಗಳನ್ನು ಗುರುತಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇಪ್ಪತ್ತನೆಯ ಶತಮಾನದ ಪ್ರಭಾವ ಚಿಂತಕರ ಮೇಲೆ ಆಗಿರುವುದು ಸುಸ್ಪಷ್ಟ. ಗಾಂಧಿಯುಗದ ಮಹಾನ್ ಶಕ್ತಿಗಳಾದ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮತ್ತು ಅರವಿಂದರ ಸತ್ಯ, ಅಹಿಂಸೆ, ಪ್ರೇಮ, ಅಪರಿಗ್ರಹ ಮೊದಲಾದ ತತ್ತ್ವಗಳಿಂದ ಕುವೆಂಪು ಪ್ರಭಾವಿತರಾಗಿರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ. ಹೀಗೆ ಅಧ್ಯಯನಕಾರರು ಕುವೆಂಪು ರಾಮಾಯಣದ ಹಿನ್ನೆಲೆಯಲ್ಲಿ ಸರ್ವಸಮನ್ವಯತೆ, ಸಮಕಾಲೀನ ಪ್ರಜ್ಞೆ, ಆಧ್ಯಾತ್ಮ ಹಾಗೂ ವಿಜ್ಞಾನ, ಸಂಸಾರ ಮತ್ತು ಸನ್ಯಾಸ ತತ್ತ್ವ ಸಿದ್ಧಾಂತಗಳನ್ನು ಕಂಡಿದ್ದಾರೆ.

'ಕುವೆಂಪು ಮನರಾವಲೋಕನ' ಎಂಬ ಕೃತಿಯ 'ಶ್ರೀರಾಮಾಯಣದರ್ಶನಂ : ಒಂದು ನೋಟ' ಎಂಬ ಲೇಖನದಲ್ಲಿ ಜಿ.ಎಸ್. ಶಿವರುದ್ರಪ್ಪನವರು ಪ್ರಸ್ತುತ ಯುಗಧರ್ಮದ ಮೌಲ್ಯ, ಚಿಂತನೆ ಮತ್ತು ವೈಚಾರಿಕತೆಯನ್ನು ಕುವೆಂಪು ರಾಮಾಯಣದ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ರಾಮಾಯಣದ ಕಥಾವಸ್ತುವಿಗೆ ಒಂದು ಪ್ರಾಚೀನ ಪರಂಪರೆ ಇದೆ. ಹಾಗಾಗಿ ಕವಿ ಕುವೆಂಪುರವರಿಗೆ ಕತೆಯಾಗಲಿ, ಕತೆಗೆ ಹಿನ್ನೆಲೆಯಾದ ಇತಿಹಾಸವಾಗಲಿ ಮುಖ್ಯವಾಗಲಿಲ್ಲ. ಕಥೆ ಹಳೆಯದಾದರೂ ಕುವೆಂಪುರವರ ಕೈಯಲ್ಲಿ ರಾಮಾಯಣ ಮರುಹುಟ್ಟನ್ನು ಪಡೆದಿದೆ ಎಂಬುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ. ಹಳೆಯ ಕಥಾವಸ್ತುವನ್ನು ಹೊಸ ದೃಷ್ಟಿಕೋನದಲ್ಲಿಟ್ಟು ಅಧ್ಯಯನ ಮಾಡುವುದು ಮತ್ತು ನಿರ್ವಚಿಸುವುದು ಆಧುನಿಕ ಸಂದರ್ಭದಲ್ಲಿ ಮಾತ್ರ. ಹಾಗಾಗಿ ಜಿ.ಎಸ್. ಶಿವರುದ್ರಪ್ಪನವರ ಅಧ್ಯಯನದ ಹಿಂದೆ ಸಮಕಾಲೀನ ಪ್ರಭಾವವನ್ನು ಗುರುತಿಸಲು ಸಾಧ್ಯ. ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಮೇಲೆ ಇಪ್ಪತ್ತನೆಯ ಶತಮಾನದ ವಿದ್ಯಮಾನ ಪ್ರಭಾವಿಸಿರುವುದನ್ನು ಅಧ್ಯಯನಕಾರ ಜಿ. ಎಸ್. ಶಿವರುದ್ರಪ್ಪನವರು ಗುರುತಿಸಿದ್ದಾರೆ. ಹೊಸ ಯುಗಧರ್ಮದ ಅಳವಡಿಸುವಿಕೆಯಿಂದ ಕವಿ ಕುವೆಂಪು ರಾಮಾಯಣಕ್ಕೆ ಒಂದು ಪುನರ್‌ವ್ಯಾಖ್ಯಾನ ನೀಡಿದ್ದಾರೆ ಎಂಬುದು ಅಧ್ಯಯನಕಾರರ ಅಭಿಮತ. ಈ ಹಿನ್ನೆಲೆಯಲ್ಲಿ ಅಧ್ಯಯನಕಾರರು 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯವನ್ನು ಆಧುನಿಕ ದೃಷ್ಟಿಕೋನದ ನೆಲೆಯಿಂದ ಪರಿಗ್ರಹಿಸಿರುವುದು ಗಮನಾರ್ಹ ಸಂಗತಿ.

'ಸಹ್ಯಾದ್ರಿ' ಗ್ರಂಥದಲ್ಲಿ ಎ.ಎಸ್. ಧರಣೇಂದ್ರಯ್ಯನವರು ಕುವೆಂಪು ರಾಮಾಯಣವನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಅಭ್ಯಾಸ ಮಾಡಿರುತ್ತಾರೆ. 'ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಮನೋವೈಜ್ಞಾನಿಕ ಹೊಳಹುಗಳು' ಎಂಬ ಲೇಖನದಲ್ಲಿ ಅಧ್ಯಯನಕಾರರು ಕುವೆಂಪು ರಾಮಾಯಣದ ಬಹುತೇಕ ಪಾತ್ರಗಳ ಪ್ರತಿಕ್ರಿಯೆಗಳಿಗೆ ಮನೋವೈಜ್ಞಾನಿಕ ನೆಲೆಯಲ್ಲಿ ಕಾರಣ ಕಂಡುಕೊಂಡಿದ್ದಾರೆ. ರಾಮಾಯಣದ ಪಾತ್ರಗಳನ್ನು ಕೇವಲ ಪಾತ್ರಗಳಾಗಿ ನೋಡುವುದಕ್ಕಿಂತ ಭಿನ್ನವಾಗಿ ಮನುಷ್ಯನ ಗುಣಸ್ವಭಾವ, ಚಿಂತನೆಯ ನೆಲೆಗಳನ್ನು ವಿಶ್ಲೇಷಿಸಿದ್ದಾರೆ. ಎ.ಎಸ್. ಧರಣೇಂದ್ರಯ್ಯನವರು ರಾಮಾಯಣದ ಪಾತ್ರಗಳನ್ನು ಅತಿಮಾನುಷ ನೆಲೆಯಲ್ಲಿ ಕಾಣುವ ಪ್ರಯತ್ನ ಮಾಡಿಲ್ಲ. ಬದಲಿಗೆ ಪಾತ್ರಗಳನ್ನು ಮನುಷ್ಯರನ್ನಾಗಿ ಕಂಡಿದ್ದಾರೆ. ಹಾಗಾಗಿ ಕುವೆಂಪು ರಾಮಾಯಣದ ಪಾತ್ರಗಳು ಇಲ್ಲಿ ವಾಸ್ತವ ಬದುಕಿಗೆ ತೀರಾ ಸಮೀಪವಾಗಿ ಕಾಣಿಸುತ್ತವೆ. ಮನುಷ್ಯನ ಮನೋವ್ಯಾಪ್ತಿಗೆ ಒಳಪಡುವ ಕೀಳರಿಮೆ, ವ್ಯಾಮೋಹ, ಪ್ರತೀಕಾರ, ಭಾವತುಮುಲ ಸಾಮೂಹಿಕ ಭಾವಸಂಕ್ಷೋಭೆ ಮತ್ತು ವಿಭ್ರಮೆಗಳನ್ನು ರಾಮಾಯಣದ ಪಾತ್ರಗಳಲ್ಲಿ ಕಂಡಿದ್ದಾರೆ. ಈ ಎಲ್ಲ ಮನೋವೈಕಲ್ಯಕ್ಕೆ ಒಳಗಾದ ಪಾತ್ರಗಳು ವಿಭಿನ್ನ ನೆಲೆಯಲ್ಲಿ ಪ್ರತಿಕ್ರಿಯಿಸುತ್ತವೆ ಎಂಬ ಸಹಜ ಸತ್ಯವನ್ನು ತಿಳಿಸಿದ್ದಾರೆ. ಹೀಗೆ

ಅಧ್ಯಯನಕಾರರು ಮನುಷ್ಯನ ಪ್ರತಿಕ್ರಿಯೆ, ಸ್ವಭಾವ, ಉದ್ದೇಶಗಳಿಗೆ ನಿರ್ದಿಷ್ಟ ಮನೋವಿಶ್ಲೇಷಣಾತ್ಮಕ ಕಾರಣಗಳನ್ನು ಕಂಡುಕೊಂಡಿದ್ದಾರೆ. ಈ ಮೂಲಕ ಕುವೆಂಪು ರಾಮಾಯಣದಲ್ಲಿ ಮನುಷ್ಯಸ್ವಭಾವದ ಭಿನ್ನ ಮುಖಗಳಿಗೆ ಕಾರಣಗಳನ್ನು ಕಂಡುಕೊಂಡಿದ್ದಾರೆ. ಲೇಖಕರ ಅಧ್ಯಯನದ ಮೇಲೆ ಪ್ರಸ್ತುತ ಕಾಲಘಟ್ಟದ ಪ್ರಭಾವವಿದೆ. ವೈಜ್ಞಾನಿಕ ಆವಿಷ್ಕಾರ, ವೈಚಾರಿಕತೆ ಮತ್ತು ಮನೋವಿಶ್ಲೇಷಣಾತ್ಮಕ ಚಿಂತನೆಗಳು ಹುಟ್ಟಿದ್ದು ಆಧುನಿಕ ಸಂದರ್ಭದಲ್ಲಿ. ಈ ನೆಲೆಯಲ್ಲಿ ಸಾಹಿತ್ಯ ಕೃತಿಗಳ ಅಧ್ಯಯನ ನಡೆದದ್ದು ಇತ್ತೀಚಿನ ಬೆಳವಣಿಗೆ. ಹಾಗಾಗಿ ವೈದಿಕ ಪರಂಪರೆ ಕಟ್ಟಿಕೊಟ್ಟ ಪೂರ್ವಗ್ರಹದಿಂದ ರಾಮಾಯಣವನ್ನು ನೋಡುವ ಉದ್ದೇಶ ಇಲ್ಲಿ ಅಧ್ಯಯನಕಾರರಿಗೆ ಇಲ್ಲ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಇಪ್ಪತ್ತನೆಯ ಶತಮಾನದ ಸಾಮಾಜಿಕ, ರಾಜಕೀಯ ಮತ್ತು ವೈಜ್ಞಾನಿಕ ಪ್ರಜ್ಞೆ ಪ್ರಕಟವಾಗಿದೆ ಎಂಬುದು ಅವರ ಅಭಿಪ್ರಾಯ.

ರಾಮಾಯಣದ ಕುರಿತು ಬಹುತೇಕ ಅಧ್ಯಯನಗಳು ತಮ್ಮದೇ ಆದ ವಿಶಿಷ್ಟ ನೆಲೆಯಿಂದ ರಾಮಾಯಣವನ್ನು ಕಂಡಿವೆ. ಪ್ರಾದೇಶಿಕ, ಮನೋವಿಶ್ಲೇಷಣಾತ್ಮಕ, ಪಾರಂಪರಿಕ, ಆಧ್ಯಾತ್ಮ, ಆದರ್ಶ, ಮೌಲ್ಯಗಳ ನೆಲೆಯಿಂದ ರಾಮಾಯಣದ ಅಧ್ಯಯನಗಳು ನಡೆಸಿವೆ. ಈ ಎಲ್ಲ ಅಧ್ಯಯನಗಳು ರಾಮಾಯಣ ಪರಂಪರೆಯ ಸಾಂಸ್ಕೃತಿಕ ಬದುಕನ್ನು ವಿಭಿನ್ನ ನೆಲೆಗಳಲ್ಲಿ ಪ್ರಸ್ತುತಪಡಿಸುತ್ತವೆ. ರಾಮಾಯಣ ಅಧ್ಯಯನಕಾರರ ಮೇಲೆ ಸಮಕಾಲೀನತೆಯು ಪ್ರಭಾವ ಬೀರಿರುವುದು ಗಮನಾರ್ಹ ಸಂಗತಿ. ಬಹುತೇಕ ವಿಮರ್ಶಾ ಬರಹಗಳು ರಾಮಾಯಣವನ್ನು ವಿಭಿನ್ನ ನೆಲೆಯಲ್ಲಿ ಪರಿಗ್ರಹಿಸಿವೆ. ಆದರೆ ಕನ್ನಡ ರಾಮಾಯಣ ಪರಂಪರೆಯ ಅಧ್ಯಯನಗಳು ಸ್ತ್ರೀಸಮುದಾಯದ ಒಳತೋಟಿಯನ್ನು ಪರಿಗ್ರಹಿಸಿದ್ದು ವಿರಳ ಎಂದೇ ಹೇಳಬೇಕು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕುರಿತು ವಿಚಾರ ಸಂಕಿರಣಗಳು, ಬಿಡಿಬರಹಗಳು, ವಿಮರ್ಶೆಗಳು ಪ್ರಕಟಗೊಂಡಿವೆ. ಆದರೆ ಸ್ತ್ರೀಸಂವೇದನೆಯ ನೆಲೆಯಲ್ಲಿ ಸಮಗ್ರ ಕಾವ್ಯದ ಸಂಶೋಧನಾತ್ಮಕ ಅಭ್ಯಾಸ ಈ ಮೊದಲು ನಡೆದಿಲ್ಲ. ಆ ಒಂದು ಪ್ರಯತ್ನ ಇಲ್ಲಿ ನನ್ನದು. ಸಮಕಾಲೀನ ಸಂದರ್ಭಕ್ಕೆ ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯವನ್ನು ಮುಖಾಮುಖಿಯಾಗಿರಿಸಿ ಅಭ್ಯಾಸ ಮಾಡಲಾಗಿದೆ. ಪ್ರಸ್ತುತ ಸಂದರ್ಭದೊಂದಿಗೆ ಸ್ಪಂದಿಸುವ, ಪ್ರತಿಕ್ರಿಯಿಸುವ ಮತ್ತು ತಿರಸ್ಕರಿಸುವ ಮಹಿಳಾ ಪಾತ್ರಗಳಿಗೆ ಇಲ್ಲಿ ಆತ್ಮಗೌರವದ ಪ್ರಶ್ನೆ ಬಹುಮುಖ್ಯವಾಗುತ್ತದೆ. ವ್ಯಕ್ತಿಗೆ ದಕ್ಕಬೇಕಾದ ಮಾನ್ಯತೆ, ಸ್ವಾತಂತ್ರ್ಯ ಅವಕಾಶದ ಕುರಿತು ರಾಮಾಯಣದ ಮಹಿಳಾ ಪಾತ್ರಗಳ ಮೂಲಕ ಚರ್ಚಿಸಲಾಗಿದೆ. ಹೀಗೆ ರಾಮಾಯಣದ ಮಹಿಳಾ ಪಾತ್ರಗಳ ತುಡಿತ ಮಿಡಿತಗಳಿಗೆ ಸ್ಪಂದಿಸುವ ನೆಲೆಯಲ್ಲಿ ನನ್ನ ಅಧ್ಯಯನ ಸಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಶೋಷಿತ ಸಮುದಾಯದ ಪರ ದನಿ ಎತ್ತುತ್ತದೆ. ಸೀತೆಯ ಪಾತಿವ್ರತ್ಯ, ಊರ್ಮಿಳೆಯ ತಪಸ್ಸು, ಶೂರ್ಪನಖಿಯ ಪ್ರತೀಕಾರ, ಮಂಥರೆಯ ಕುಟಿಲತೆ, ಕೈಕೆಯ ಮಾತ್ಸರ್ಯ, ಅಹಲ್ಯೆಯ ಪಶ್ಚಾತ್ತಾಪ ಹೀಗೆ ಒಂದೊಂದು ಪಾತ್ರಗಳಿಗೆ ಒಂದೊಂದು ಗುಣವನ್ನು ಆರೋಪಿಸುತ್ತಾ ರಾಮಾಯಣ ಪರಂಪರೆ ಬೆಳೆದಿದೆ. ಇಂಥ ಆರೋಪಗಳನ್ನು ಒಡೆದು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಅತ್ಯುತ್ಕೃಷ್ಟ ನೆಲೆಯಲ್ಲಿ ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಟ್ಟಿದೆ. ಒಬ್ಬ ಪುರುಷ ಮಹಿಳಾಸಂವೇದನೆಯನ್ನು ಅನುಭವಿಸುತ್ತಾ ಮಹಿಳಾಸಮುದಾಯದ ಬದುಕನ್ನು ಉನ್ನತ ನೆಲೆಯಲ್ಲಿ ಕಟ್ಟಿಕೊಡುವ ಕೆಲಸ ಮಾಡಿದ್ದು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ವಿಶಿಷ್ಟತೆ.

ಪುರುಷಪ್ರಭುತ್ವವನ್ನು ಪ್ರಶ್ನಿಸುವ ಮತ್ತು ಪುರುಷ ರಾಜಕಾರಣದ ಪಕ್ಷಪಾತ ನಿಲುವನ್ನು ಒಡೆಯುವ ದಿಕ್ಕಿನಲ್ಲಿ ನನ್ನ ಈ ಅಧ್ಯಯನ ಸಾಗಿದೆ. ರಾಮಾಯಣದ ಮಹಿಳಾ ಪಾತ್ರಗಳನ್ನು ಅಭ್ಯಸಿಸುವಲ್ಲಿ ರಾಣಿ, ದಾಸಿ ಎಂಬ ಭೇದ ಇಲ್ಲ. ಸಮಸ್ತ ಸ್ತ್ರೀಸಮುದಾಯದ ಒಳತೋಟಿಯನ್ನು ಭಿನ್ನ ಭಿನ್ನ ಸ್ತರಗಳಲ್ಲಿ ಅಭ್ಯಾಸ ಮಾಡಲಾಗಿದೆ. ಸ್ತ್ರೀಸಮುದಾಯ ತನ್ನ ವ್ಯಾಪ್ತಿಯ ಒಳಗೆ ಹೇಗೆ ಶೋಷಣೆಗೆ ಒಳಗಾಗುತ್ತಿವೆ? ಹೇಗೆ ಬಿಡುಗಡೆ ಹೊಂದಲು ತವಕಿಸುತ್ತಿವೆ? ಮತ್ತು ಹೇಗೆ ಪ್ರತಿಭಟಿಸುತ್ತಿವೆ? ಎಂಬುದನ್ನು ಅಭ್ಯಾಸ ಮಾಡಲಾಗಿದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಹಿನ್ನೆಲೆಯಲ್ಲಿ ರಾಮಾಯಣದ ಮಹಿಳಾಸಮುದಾಯದ ಜೀವನ ಕ್ರಮವನ್ನು ನಿರೂಪಿಸುವ ಸೀಮಿತ ಉದ್ದೇಶವಿಲ್ಲ. ಇದನ್ನೂ ಮೀರಿ ವಿಶಾಲ ವ್ಯಾಪಕ ದೃಷ್ಟಿಕೋನದ ನೆಲೆಯಲ್ಲಿ ಮಹಿಳಾ ವಿಕಾಸವನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಶೋಷಣೆಗೆ ಒಳಗಾದ ಸ್ತ್ರೀಸಮುದಾಯಕ್ಕೆ ತನ್ನ ಅಸ್ತಿತ್ವ, ವ್ಯಕ್ತಿತ್ವ, ಸ್ವಾತಂತ್ರ್ಯ ಮತ್ತು ಶಕ್ತಿಯ ಪ್ರಶ್ನೆ ಬಹುಮುಖ್ಯವಾಗುತ್ತದೆ ಎಂಬುದನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮೂಲಕ ಕಂಡುಕೊಳ್ಳಲಾಗಿದೆ. ಪ್ರಸ್ತುತ ಸಂದರ್ಭದ ಮಹಿಳಾ ಸ್ಥಿತಿಗತಿಯನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ಅನಾವರಣಗೊಳಿಸುವ ಉದ್ದೇಶವಿದೆ. ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ, ಬೌದ್ಧಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಹಿಳೆಗೆ ಒದಗಬೇಕಾದ ಅವಕಾಶಗಳ ಕುರಿತು ಮಾತಾಡಲಾಗಿದೆ. ಹೀಗೆ ವಿಭಿನ್ನ ಕ್ಷೇತ್ರಗಳಲ್ಲಿ ಮಹಿಳಾ ಸಮುದಾಯದ ಸಾಧನೆ, ಶಕ್ತಿ, ಸಾಮರ್ಥ್ಯಗಳನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಹಿನ್ನೆಲೆಯಲ್ಲಿ ನೋಡುವ ಮೂಲಕ ನನ್ನ ಅಧ್ಯಯನದ ಹಾದಿ ನಡೆದಿದೆ.

ವಾಲ್ಮೀಕಿ ರಾಮಾಯಣದಿಂದ ತೊಡಗಿ ಬಹುತೇಕ ರಾಮಾಯಣಗಳು ಮಹಿಳೆಯರ ಅಂತರಂಗವನ್ನು ಪರಿಗಣಿಸಿಲ್ಲ. ಮಹಿಳಾಜಗತ್ತಿನ ಚಿಂತನೆ, ಯೋಚನಾಲಹರಿ, ಮನೋಭೂಮಿಕೆಗೆ ಯಾವುದೇ ಸ್ಥಾನ ನೀಡಿಲ್ಲ. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಶಿಷ್ಟ ರಾಮಾಯಣಕ್ಕಿಂತ ಪರ್ಯಾಯ ಮಾದರಿಯಲ್ಲಿ ಇದೆ. ಪ್ರಸ್ತುತ ಮಹಿಳಾ ಬದುಕಿನ ಆಗುಹೋಗುಗಳ ನೈಜ ಚಿತ್ರಣದ ಅನಾವರಣದೊಂದಿಗೆ ವ್ಯಕ್ತಿಯ ವೈಯಕ್ತಿಕ ಬದುಕಿನ ಕುರಿತು ವಿಶೇಷ ಆಸ್ಥೆ ವಹಿಸಿದೆ. ಪುರುಷಕೇಂದ್ರಿತ ವ್ಯವಸ್ಥೆಗೆ ಬದ್ಧರಾಗುವ ಮಹಿಳಾಪರಂಪರೆಯ ನಿರೂಪಣೆ ಇಲ್ಲಿಲ್ಲ. ಪುರುಷಪರ ನಿಲುವನ್ನು ಒಪ್ಪುವ, ಪಕ್ಷಪಾತ ತೀರ್ಮಾನವನ್ನು ಅಸಹಾಯಕತೆಯಿಂದ ಸ್ವೀಕರಿಸುವ, ಈ ಮೂಲಕ ವಾಸ್ತವದಿಂದ ಬಹುದೂರ ಉಳಿಯುವ ಮಹಿಳಾಸಮುದಾಯ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕಾಣಸಿಗುವುದಿಲ್ಲ. ವ್ಯವಸ್ಥೆಯನ್ನು ಒಪ್ಪುವ, ಪ್ರಶ್ನಿಸುವ ಮತ್ತು ಪ್ರತಿಭಟಿಸುವ ಮಹಿಳಾಸಮುದಾಯ ಇಲ್ಲಿ ಕಾಣಿಸುತ್ತದೆ. ಇಲ್ಲಿನ ಪ್ರತಿಯೊಂದು ಮಹಿಳಾ ಪಾತ್ರಗಳಲ್ಲೂ ಪ್ರಜ್ಞಾಪೂರ್ವಕ ಮನಸ್ಥಿತಿ ಪ್ರಭಾವಿಸಿದೆ. ಪುರುಷಪ್ರಭುತ್ವ ಸ್ತ್ರೀಸಮುದಾಯದ ಮೇಲೆ ಒಡ್ಡುವ ಒತ್ತಡ, ಸವಾಲುಗಳನ್ನು ಪರಿಗಣಿಸುವ ಮಟ್ಟಕ್ಕೆ ಇಲ್ಲಿನ ಮಹಿಳಾ ಪಾತ್ರಗಳು ಬೆಳೆದಿವೆ.

ಬಹುತೇಕ ರಾಮಾಯಣ ಕಾವ್ಯಗಳು ಪಾತಿವ್ರತ್ಯದ ಮೌಲ್ಯಗಳನ್ನು ಮಹಿಳಾ ಪಾತ್ರಗಳಿಗೆ ಮಾತ್ರ ಆರೋಪಿಸಿದೆ. ಪುರುಷ ಪಾತ್ರಗಳಿಂದ ಅಪೇಕ್ಷಿಸಿಯೂ ಇಲ್ಲ. ಶಿಷ್ಟ ರಾಮಾಯಣ ಪರಂಪರೆ ಹೆಣ್ಣಿನ ಚಾರಿತ್ರ್ಯವನ್ನು ಪ್ರಶ್ನಿಸುವ ಮತ್ತು ಅಗತ್ಯವಿದ್ದಲ್ಲಿ ದಂಡಿಸುವ ಅವಕಾಶವನ್ನು ಪುರುಷ ಪಾತ್ರಗಳಿಗೆ ನೀಡಿದೆ. ಇಂತಹ ಕಾವ್ಯಗಳಿಗೆ ಆದರ್ಶ ಪತಿತ್ವದ ಪರಿಕಲ್ಪನೆ ಮುಖ್ಯವಾಗುವುದೇ ಇಲ್ಲ. ಇಂಥ ಕಾವ್ಯಗಳಲ್ಲಿ ಒಬ್ಬ ಪುರುಷನ ಕ್ರೌರ್ಯ ಸಾಧನೆಯಾಗಿ ಕಾಣಿಸುತ್ತದೆ. ಶಿಷ್ಟ ರಾಮಾಯಣ ಪರಂಪರೆಗಳು ಪುರುಷರ ದಬ್ಬಾಳಿಕೆಯನ್ನು, ಆಕ್ರೋಶವನ್ನು ಪ್ರೋತ್ಸಾಹಿಸಿವೆ. ಈ ಹಿನ್ನೆಲೆಯಲ್ಲಿ ಪುರುಷ ಆಜ್ಞಾಧಾರಕನಾಗಿಯೇ ಕಾಣಿಸುತ್ತಾನೆ. ಮಹಿಳೆ ಆಜ್ಞಾಪಾಲಕಿಯಾಗಿಯೇ ನಿರೂಪಿತಳಾಗುತ್ತಾಳೆ. ಇಂಥ ಪಕ್ಷಪಾತ ಧೋರಣೆಗೆ ವ್ಯತಿರಿಕ್ತವಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಕಾಣಿಸಿದೆ.

ಪ್ರಾಚೀನ ರಾಮಾಯಣ ಕಾವ್ಯಗಳಿಗೆ ವೀರತ್ವದ ನೆಲೆಯಲ್ಲಿ ಬದುಕನ್ನು ಕಟ್ಟಿಕೊಡುವ ಉದ್ದೇಶವಿದೆ. ಇಂಥ ರಾಮಾಯಣ ಕಾವ್ಯಗಳು ವೀರರಸ ಪ್ರಧಾನವಾಗಿರುತ್ತವೆ. ಶಕ್ತಿಯ ನೆಲೆಯಿಂದ, ದೈಹಿಕ ಸದೃಢತೆಯ ನೆಲೆಯಿಂದ, ವೀರಾವೇಶದ ಹೋರಾಟದ ನೆಲೆಯಿಂದ ರಾಮಾಯಣದ ಪುರುಷ ಪಾತ್ರಗಳನ್ನು ಕಟ್ಟುವ ಉದ್ದೇಶ ಇಂತಹ ಮಹಾಕಾವ್ಯಗಳಿಗೆ ಇದೆ. ಭಕ್ತಿಯುಗದ ಪ್ರಭಾವಕ್ಕೆ ಒಳಗಾದ ರಾಮಾಯಣ ಕಾವ್ಯಗಳಿಗೆ ಅದರದ್ದೇ ಆದ ಧ್ಯೇಯೋದ್ದೇಶವಿದೆ. ಆಧ್ಯಾತ್ಮಶಕ್ತಿ ಮತ್ತು ಭಕ್ತಿಪ್ರಧಾನತೆಯ ನೆಲೆಯಲ್ಲಿ ರಾಮಾಯಣದ

ಬಹುತೇಕ ಪಾತ್ರಗಳನ್ನು ಕಟ್ಟುವ ಉದ್ದೇಶ ಇಂಥ ಮಹಾಕಾವ್ಯಗಳಿಗೆ ಇದೆ. ಭಕ್ತಿಯ ನೆಲೆಯಿಂದ ಬದುಕನ್ನು ಕಂಡುಕೊಳ್ಳುವ ಮತ್ತು ಈ ಹಿನ್ನೆಲೆಯಲ್ಲಿಯೇ ಬದುಕನ್ನು ಸಾರ್ಥಕಪಡಿಸಿಕೊಳ್ಳುವ ಉದ್ದೇಶ ಇಂಥ ಮಹಾಕಾವ್ಯಗಳಿಗೆ ಇದೆ. ಇಂಥ ರಾಮಾಯಣಗಳ ಕುರಿತು ಬಹುತೇಕ ಅಧ್ಯಯನಗಳು ನಡೆದಿವೆ. ಆದರೆ ಆಧುನಿಕ ಕನ್ನಡ ರಾಮಾಯಣ ಕಾವ್ಯಗಳಲ್ಲಿ ವೈಚಾರಿಕ ಹೊಳವು ಇದೆ. ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯ ದೋಷವನ್ನು ಗುರುತಿಸುವ ಮಟ್ಟಕ್ಕೆ ಆಧುನಿಕ ಕನ್ನಡ ರಾಮಾಯಣಗಳು ಬೆಳೆದಿವೆ. ಇಂಥ ಮಹಾಕಾವ್ಯಗಳಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಕೂಡಾ ಒಂದು. ಈ ಮಹಾಕಾವ್ಯ ಪ್ರಸ್ತುತ ವಿದ್ಯಮಾನದೊಂದಿಗೆ ಸ್ಪಂದಿಸುತ್ತಾ ಮುಂದೆ ಸಾಗಿದೆ. ಹೀಗೆ ಪ್ರಸ್ತುತ ಯುಗಧರ್ಮದ ಮೌಲ್ಯಗಳನ್ನು ಬಿತ್ತರಿಸುವ ಈ ಮಹಾಕಾವ್ಯದ ಮಹಿಳಾ ಪಾತ್ರಗಳ ಅಧ್ಯಯನ ಇದುವರೆಗೆ ನಡೆದಿಲ್ಲ. ನನ್ನ ಅಧ್ಯಯನದ ಮೂಲಕ ಈ ಪ್ರಯತ್ನ ನಡೆಸಲಾಗಿದೆ.

ವಿವಿಧ ನೆಲೆಗಟ್ಟಿನಲ್ಲಿ ರಾಮಾಯಣದ ಕುರಿತು ಅಧ್ಯಯನಗಳು ನಡೆಯುತ್ತಾ ಬಂದಿವೆ. ಆದರೆ ಸ್ತ್ರೀಸಂವೇದನೆಯ ನೆಲೆಯಲ್ಲಿ ಮಹಿಳಾ ಸಮುದಾಯದ ಬದುಕನ್ನು ಕಟ್ಟಿಕೊಡುವ ಉದ್ದೇಶ ಬಹುತೇಕ ಅಧ್ಯಯನಗಳಿಗೆ ಇಲ್ಲ ಎಂದೇ ಹೇಳಬೇಕು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕಾಣಿಸುವ ಪ್ರತಿಯೊಂದು ಮಹಿಳಾ ಪಾತ್ರಗಳಿಗೂ ಅದರದ್ದೇ ಆದ ಅನನ್ಯತೆ ಇದೆ. ಅಪೂರ್ವ ಗುಣವಿಶೇಷವಿದೆ. ಇಂಥ ಮಹಾಕಾವ್ಯದ ಮಹಿಳಾಜಗತ್ತಿನ ಶಕ್ತಿ ಮತ್ತು ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸುವ ನೆಲೆಯಲ್ಲಿ ನನ್ನ ಅಧ್ಯಯನದ ಹಾದಿ ನಡೆದಿದೆ. ಈ ಮಹಾಕಾವ್ಯದ ಕವಿಯಲ್ಲಿ ಸ್ತ್ರೀಸಂವೇದನಾಶೀಲ ತುಡಿತ ಇದೆ. ಮಹಿಳೆಯರ ಬದುಕನ್ನು ಕಟ್ಟುವ ಉದಾತ್ತ ಚಿಂತನೆ ಇದೆ. ಈ ಚಿಂತನೆ ಸಮಾಜವಿಮರ್ಶೆಗೆ ಎಡೆ ಮಾಡಿದೆ. ಹಾಗಾಗಿ ಇಲ್ಲಿನ ಮಹಿಳಾ ಪಾತ್ರಗಳು ವ್ಯವಸ್ಥೆಗೆ ಬೆನ್ನು ತೋರಿಸದೆ ಎಡರು ತೊಡರಿಗೆ ಎದೆ ಒಡ್ಡುತ್ತವೆ. ದಿಟ್ಟತನ, ಆಶಾವಾದ, ಆತ್ಮವಿಶ್ವಾಸ, ಸಂಯಮ, ಮಾನಸಿಕ ಸ್ಥಿಮಿತತೆ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳಲ್ಲಿ ಅಭಿವ್ಯಕ್ತವಾಗಿದೆ. ಮಹಿಳಾ ಪಾತ್ರ ನಿರೂಪಣೆಯಲ್ಲಿ ಕವಿ ಎಲ್ಲಾ ತೊಡಕುಗಳನ್ನು ಮೀರಿ ನಿಂತಿದ್ದಾರೆ. ಹೀಗೆ ಪಾತ್ರ ನಿರೂಪಿಸುವಲ್ಲಿ ಕವಿಗೆ ಜನಾಕರ್ಷಣೆಯ ಹಂಬಲವಾಗಲಿ, ಪ್ರಸಿದ್ಧಿಯ ಹಂಬಲವಾಗಲಿ ಇಲ್ಲ. ಈ ಮಹಾಕಾವ್ಯದ ವಿಶ್ಲೇಷಣೆ ಪ್ರಸ್ತುತ ಸಮಾಜವ್ಯವಸ್ಥೆಯ ವಿಶ್ಲೇಷಣೆಯೂ ಹೌದು. ಸಮಾಜವ್ಯವಸ್ಥೆಯ ಒಳಹೊಕ್ಕು ದೋಷಗಳನ್ನು ಪರಿಗ್ರಹಿಸುತ್ತಾ ಕಾವ್ಯ ಮುಂದಕ್ಕೆ ಸಾಗಿದೆ. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ಪರಿಣಾಮಗಳನ್ನು ಈ ಮಹಾಕಾವ್ಯದ ಮಹಿಳಾ ಪಾತ್ರಗಳು ಎದುರಿಸಿವೆ. ಸರಿ–ತಪ್ಪುಗಳನ್ನು ಪರಾಮರ್ಶಿಸುವ ಇಲ್ಲಿನ ಮಹಿಳಾ ಪಾತ್ರಗಳು ಸ್ವೀಕರಣ ಮತ್ತು ನಿರಾಕರಣ ಶಕ್ತಿಯನ್ನು ಪಡೆದಿವೆ. ಈ ಶಕ್ತಿ ಸ್ವಂತಿಕೆಯ ನೆಲೆಯಿಂದ ಸಾಗಿದ್ದು ಸ್ವತಂತ್ರ ತೀರ್ಮಾನ ಕೈಗೊಳ್ಳುವ ಮಟ್ಟಕ್ಕೆ ಬೆಳೆದಿವೆ.

ಪ್ರಗತಿಪರ ನಿಲುವಿನೊಂದಿಗೆ ಮಹಿಳಾ ನಿರ್ಲಕ್ಷ್ಯವನ್ನು ನಿರಾಕರಿಸುವ ಇಲ್ಲಿನ ಮಹಿಳಾ ಪಾತ್ರಗಳು ವಿಶಿಷ್ಟ ಧೋರಣೆ ತಳೆದಿವೆ. ಇಲ್ಲಿನ ಮಹಿಳಾ ಪಾತ್ರಗಳು ಸೀಮಿತ ಉದ್ದೇಶ ಮತ್ತು ವ್ಯಾಪ್ತಿಯಿಂದ ಆಚೆ ವಿಶಾಲವಾಗಿ ಬೆಳೆದಿವೆ. ಹೀಗೆ ವಿಶಾಲ ಧ್ಯೇಯೋದ್ದೇಶದ ನೆಲೆಯಲ್ಲಿ ಬದುಕನ್ನು ರೂಪಿಸುವ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನ ಪ್ರಸ್ತುತ ಮಹಿಳಾ ಸ್ಥಿತಿಗತಿಯ ಅಧ್ಯಯನವೂ ಆಗಿದೆ.

ಮೌಖಿಕ ರಾಮಾಯಣ ಪರಂಪರೆಗಳು ಲಿಖಿತ ರೂಪದಲ್ಲಿ ದಾಖಲಾಗದೆ ಹೋದರೂ ಜನಪದರ ಸಾಂಸ್ಕೃತಿಕ ಬದುಕನ್ನು ಅನಾವರಣ ಮಾಡಿವೆ. ಲಿಖಿತ ರಾಮಾಯಣ ಪರಂಪರೆಗಳು ಭಿನ್ನ ಭಿನ್ನ ಮಾದರಿಯಲ್ಲಿ ಬದುಕನ್ನು ಕಟ್ಟಿಕೊಟ್ಟಿವೆ. ಈ ಕಟ್ಟುವಿಕೆಯ ಹಿಂದೆ ಬೇರೆ ಬೇರೆ ಉದ್ದೇಶಗಳಿವೆ. ದೈವಿಕ ಮತ್ತು ಆಧ್ಯಾತ್ಮಿಕ ಚಿಂತನೆಯ ನೆಲೆಯಲ್ಲಿ ಧರ್ಮ-ಅಧರ್ಮದ ನೆಲೆಗಳನ್ನು ಪರಿಚಯಿಸುವ ಪೌರಾಣಿಕ ಮಾದರಿಯ ರಾಮಾಯಣ ಕಾವ್ಯಗಳು ಕೆಲವು. ಇದಕ್ಕೆ ಪೂರಕವಾಗಿ ಭಕ್ತಿಯ ಪರಿಕಲ್ಪನೆಗೆ ಬದ್ಧವಾದ ಭಕ್ತಿಪರಂಪರೆಯ ರಾಮಾಯಣಗಳು ಇನ್ನು ಕೆಲವು. ಇಂಥ ಮಹಾಕಾವ್ಯಗಳಿಗೆ ಭಕ್ತಿಯ ತೀವ್ರತೆಯನ್ನು ಅನಾವರಣ ಮಾಡುವ ಉದ್ದೇಶ ಇದೆ. ರಾಷ್ಟ್ರೀಯತೆಯ ಪರಿಕಲ್ಪನೆಯ ನೆಲೆಯಲ್ಲಿ ನಿರೂಪಿತವಾದ ರಾಮಾಯಣಗಳು ಐತಿಹಾಸಿಕ ಮಹಾಕಾವ್ಯಗಳೆಂಬುದಾಗಿ ಕರೆಯಿಸಿಕೊಂಡಿವೆ. ಇಂಥ ಮಹಾಕಾವ್ಯಗಳಿಗೆ ರಾಷ್ಟ್ರೀಯತೆಯ ಪ್ರಜ್ಞೆ ಇದೆ. ರಾಜರ ಯುದ್ಧವಿಜಯ, ಯಶೋಗಾಥೆ, ಸಾಹಸ, ದಿಗ್ವಿಜಯ, ದಾನ, ಶಾಸನಗಳ ವಿವರಗಳೇ ಇಲ್ಲಿ ಪ್ರಧಾನ ಸ್ಥಾನ ಪಡೆದಿವೆ. ಜೈನ, ಬೌದ್ಧ ರಾಮಾಯಣಗಳು ಅಹಿಂಸೆ, ಧರ್ಮ, ದಯೆ, ಕ್ಷಮೆ ಇವೇ ಮೊದಲಾದ ಸೂತ್ರಗಳನ್ನು ರಾಮಾಯಣಗಳಲ್ಲಿ ಅಳವಡಿಸುವ ಮೂಲಕ ತನ್ನದೇ ನೆಲೆಯ ಸೈದ್ಧಾಂತಿಕ ನಿಲುವನ್ನು ಪ್ರತಿಪಾದಿಸಿವೆ. ಹೀಗೆ ತನ್ನದೇ ಆದ ನಿಲುವನ್ನು ಅಭಿವ್ಯಕ್ತಿಸುವ ವಿಭಿನ್ನ ರಾಮಾಯಣಗಳ ಕುರಿತು ಅಧ್ಯಯನಗಳು ನಡೆದಿವೆ.

ಸಾಂಸ್ಕೃತಿಕ ಬದುಕನ್ನು ಅನಾವರಣ ಮಾಡುವ ಉದ್ದೇಶ ಕೆಲವು ರಾಮಾಯಣಗಳಿಗೆ ಇದೆ. ಅದರಲ್ಲಿ ಮುಖ್ಯವಾಗಿ ಸೀತೆಯ ವೈವಾಹಿಕ ಆಚರಣೆಗಳನ್ನು ಅಭಿವ್ಯಕ್ತಿಸುವ ರಾಮಾಯಣದ ಕಥೆಯನ್ನು ಆಧರಿಸಿದ ಸಾಹಿತ್ಯ ಅನೇಕ ವಿಶಿಷ್ಟತೆಗಳಿಂದ ಕೂಡಿದೆ. ಆಧುನಿಕ ಕನ್ನಡ ರಾಮಾಯಣದ ಸ್ತ್ರೀಬದುಕಿನ ಅಂತರಂಗಸಂವೇದನೆಯನ್ನು ಗ್ರಹಿಸುತ್ತಾ ಸ್ತ್ರೀಯರ ವೈಯಕ್ತಿಕ ಹಿತಾಸ್ತಕಿಗಳನ್ನು ಪರಿಗಣಿಸಿವೆ. ಇಂಥ ರಾಮಾಯಣಗಳು ಸ್ತ್ರೀಯರ ಹಕ್ಕು, ಅಸ್ತಿತ್ವ, ವ್ಯಕ್ತಿತ್ವ, ಸ್ವಾತಂತ್ರ್ಯದ ಕುರಿತು ಮಾತಾಡಿವೆ. ತಮಗಾದ ಅನ್ಯಾಯವನ್ನು ಪರಿಗ್ರಹಿಸುತ್ತಾ, ತಮ್ಮದೇ ನೆಲೆಯಲ್ಲಿ ಪ್ರತಿಕ್ರಿಯಿಸಿವೆ. ಇಂಥ ಮಹಾಕಾವ್ಯಗಳಲ್ಲಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ

ಕೂಡಾ ಒಂದು. ಈ ಮಹಾಕಾವ್ಯದ ಮಹಿಳಾಸಮುದಾಯವನ್ನು ಕೇಂದ್ರೀಕರಿಸಿ ನನ್ನ ಅಧ್ಯಯನದ ಹಾದಿಯನ್ನು ವಿಸ್ತರಿಸಲಾಗಿದೆ.

## ಆಕರ ಸೂಚಿ


೧. ಇತಿಹಾಸದ ಕಣ್ಣಲ್ಲಿ ರಾಮಾಯಣ (ಸಂಗ್ರಹಾನುವಾದ) – ೧೯೯೦
ಡಾ। ಮಹಾಬಲೇಶ್ವರ್ ರಾವ್
ನವಕರ್ನಾಟಕ ಪ್ರಕಾಶನ, ಬೆಂಗಳೂರು

೨. ಮೂನ್ನೂರು ರಾಮಾಯಣಗಳು: ಅನುವಾದದ ಕುರಿತು ಮೂರು ವಿಚಾರಗಳು – ಐದು ಉದಾಹರಣೆಗಳೊಂದಿಗೆ (ಕನ್ನಡಾನುವಾದ)
ಡಾ। ಮಹಾಬಲೇಶ್ವರ್ ರಾವ್
ಎ.ಕೆ. ರಾಮಾನುಜನ್ ಅವರ ಆಯ್ದ ಬರಹಗಳು – ೨೦೦೯
ಅಕ್ಷರ ಪ್ರಕಾಶನ, ಹೆಗ್ಗೋಡು

೩. ಸೀತೆ ರಾಮ ರಾವಣ – ೧೯೮೦
ಸಾವಿತ್ರಮ್ಮ ಹೆಚ್.ವಿ.
ಕಾವ್ಯಾಲಯ, ಮೈಸೂರು

೪. ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು ಒಂದು ತೌಲನಿಕ ಅಧ್ಯಯನ – ೨೦೦೫
ಡಾ। ಪ್ರಭಾವತಿ ಎಸ್. ವಿ.
ಸುಮುಖ ಪ್ರಕಾಶನ, ಬೆಂಗಳೂರು

೫. ವಿಶ್ವರಾಮಕಥಾವಾಹಿನೀ – ೨೦೦೮
ಡಾ। ಶಾಂತಾರಾಂ ಪ್ರಭು ಪಿ.
ಪುಸ್ತಕ ನಿಧಿ, ಕುಂದಾಪುರ

೬. ಕವಿಕ್ರತುದರ್ಶನ
ಸಾಕ್ಷಿ (ಲೇ)
ಕುವೆಂಪು ಕೃತಿ ಚಿಂತನ – ೨೦೦೬
ಚೆನ್ನಬಸಪ್ಪ ಎಸ್.
ಕುವೆಂಪು ವಿಚಾರ ವೇದಿಕೆ, ಮೈಸೂರು

೭. ಶ್ರೀ ರಾಮಾಯಣದರ್ಶನಂದಲ್ಲಿ ಪ್ರಾದೇಶಿಕತೆ
ಚೆನ್ನಬಸಪ್ಪ ಕೋ.
ಶ್ರೀ ಕುವೆಂಪು ಸಂದರ್ಶನ ಮತ್ತು ಪ್ರಸಂಗಗಳು – ೨೦೦೨
ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ, ಮೈಸೂರು

೮. ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ಸಂದೇಶ
ದೇ.ಜ.ಗೌ.
ಕುವೆಂಪು ದರ್ಶನ ಮತ್ತು ಸಂದೇಶ – ೧೯೭೫
ಸಹ್ಯಾದ್ರಿ ಪ್ರಕಾಶನ, ಮೈಸೂರು

೯. ಶ್ರೀ ರಾಮಾಯಣ ದರ್ಶನಂ: ಒಂದು ನೋಟ
ಶಿವರುದ್ರಪ್ಪ ಜಿ.ಎಸ್.
ಕುವೆಂಪು ಪುನರಾವಲೋಕನ – ೨೦೦೫
ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೧೦. ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಮನೋವೈಜ್ಞಾನಿಕ ಹೊಳಹುಗಳು
ಧರಣೇಂದ್ರಯ್ಯ ಎ.ಎಸ್.
ಸಹ್ಯಾದ್ರಿ – ೧೯೭೫
ದೇ.ಜ.ಗೌ.
ಕುವೆಂಪು ವಿದ್ಯಾವರ್ಧಕ ಟ್ರಸ್ಟ್

# ಅಧ್ಯಾಯ – ೪

# ಸ್ತ್ರೀ ಕಥನದ ಪರಿಕಲ್ಪನೆ

## ಅಧ್ಯಾಯ ೪

# ಸ್ತ್ರೀ ಕಥನದ ಪರಿಕಲ್ಪನೆ

### ೪.೧ ತಾತ್ವಿಕತೆ

ಸ್ತ್ರೀವಾದ ಎಂಬದು ವಿಮರ್ಶಾ ಕ್ರಮ ಮಾತ್ರವಲ್ಲ ತಾತ್ವಿಕತೆಯೂ ಹೌದು. ಪುರುಷಪ್ರಧಾನ ಸಮಾಜದಲ್ಲಿ ಮಹಿಳಾ ಶೋಷಣೆಯನ್ನು ಹತ್ತಿಕ್ಕುವ ಪ್ರಯತ್ನಗಳು ನಡೆಯುತ್ತಿವೆ. ಆದರೂ ಇದುವರೆಗೆ ಸಂಪೂರ್ಣ ಮಹಿಳಾ ಸ್ವಾತಂತ್ರ್ಯವನ್ನು ಸಾಧಿಸಲು ಸಾಧ್ಯವಾಗಿಲ್ಲ. ಹೊರನೋಟಕ್ಕೆ ಮಹಿಳಾ ಸ್ವಾತಂತ್ರ್ಯ ಕಲ್ಪಿಸಿದಂತೆ ಕಾಣಿಸುತ್ತದೆಯಾದರೂ ವಾಸ್ತವದಲ್ಲಿ ಪುರುಷಪರ ನಿಲುವನ್ನು ಗಟ್ಟಿಗೊಳಿಸಲಾಗುತ್ತಿದೆ. ಸ್ತ್ರೀವಾದ ಸ್ತ್ರೀಬದುಕಿನ ಸ್ವರೂಪ, ನಿಲುವುಗಳ ಕುರಿತು ಮಾತಾಡುತ್ತದೆ.

ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಮಗು ಹೆಣ್ಣೊ, ಗಂಡೊ, ಎಂಬ ಪ್ರಶ್ನೆಯ ಮೂಲಕ ಆರೈಕೆಯ ಸಾಧ್ಯತೆಗಳನ್ನು ಅಳೆಯಲಾಗುತ್ತಿದೆ. ಈ ನೆಲೆಯಲ್ಲಿ ಲಿಂಗ ತರತಮತೆಯನ್ನು ಕಾಯ್ದಿಡುವ ಪುರುಷಪ್ರಧಾನ ವ್ಯವಸ್ಥೆಗೆ ಸ್ತ್ರೀವಾದ ಹಲವು ಸವಾಲನ್ನು ಒಡ್ಡುತ್ತದೆ. ಲಿಂಗದ ಹೆಸರಲ್ಲಿ ಅಸಮಾನತೆ ಸಾಧಿಸುತ್ತಾ ಅದನ್ನೇ ಪ್ರಕೃತಿ ನಿಯಮ ಎಂಬುದಾಗಿ ನಿರೂಪಿಸಲಾಗುತ್ತಿದೆ. ಪರಿಣಾಮ ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆ ಎಂದೇ ಪರಿಗಣಿಸಲಾಗಿದೆ. ಹೀಗೆ ಮಹಿಳೆಯರ ವೈಯಕ್ತಿಕ ಹಿತಾಸಕ್ತಿ, ಅಸ್ತಿತ್ವ ವ್ಯಕ್ತಿತ್ವ, ಸ್ವಾತಂತ್ರ್ಯವನ್ನು ಕಸಿಯಲಾಗಿದೆ. ಅರ್ಥಹೀನ ಆಚರಣೆ, ಮೂಢನಂಬಿಕೆ ಮತ್ತು ಸಾಂಪ್ರದಾಯಿಕ ಒತ್ತಡವನ್ನು ಹೇರುವ ಮುಖಾಂತರ ಸ್ತ್ರೀಸಮುದಾಯವನ್ನು ಅವಕಾಶ ವಂಚಿತರನ್ನಾಗಿಸಿದೆ. ಧಾರ್ಮಿಕ ಮತ್ತು ಸಾಂಪ್ರದಾಯಿಕ ಧೋರಣೆಗೆ ಬದ್ಧರಾಗದ ಮಹಿಳೆಯರನ್ನು ಅನ್ಯತ್ರ ಭಾವಿಸುವ ಪರಿಪಾಠ ಇದೆ. 'ಗಂಡುಬೀರಿ' ಎಂಬ ಹಣೆಪಟ್ಟಿ ಕಟ್ಟುತ್ತಾ ಆಕೆಯ ಸಹಜ ವ್ಯಕ್ತಿತ್ವವನ್ನೇ ಮರೆಮಾಚಿದೆ.

ಲಿಂಗದ ನೆಲೆಯಲ್ಲಿ, ಜಾತಿಯ ನೆಲೆಯಲ್ಲಿ, ಆರ್ಥಿಕತೆಯ ನೆಲೆಯಲ್ಲಿ, ವರ್ಣದ ನೆಲೆಯಲ್ಲಿ ಮಹಿಳಾ ಶೋಷಣೆಗಳು ನಡೆಯುತ್ತ ಬಂದಿವೆ. ಈ ಶೋಷಣೆ ಆಕೆಯ ಮಾನಸಿಕ ಸ್ಥಿತಿಯನ್ನು ಹದಗೆಡಿಸಿದೆ. ವೈಚಾರಿಕ, ವೈಜ್ಞಾನಿಕ, ಸಂಶೋಧನಾತ್ಮಕ ಚಿಂತನಶೀಲ ಪ್ರವೃತ್ತಿಯಿಂದ ಆಕೆಯನ್ನು ದೂರ ಉಳಿಸಿದೆ. ಹೀಗೆ ದೂರ ಉಳಿಸುತ್ತಾ ದುರ್ಬಲ ವ್ಯಕ್ತಿತ್ವವಾಗಿ ನಿರೂಪಿಸಿದೆ. ಉಚ್ಚ-ನೀಚ ಪರಿಕಲ್ಪನೆಯ ತಳಹದಿಯಲ್ಲಿ ಆಕೆಯನ್ನು ಕಟ್ಟಿಹಾಕಲಾಗಿದೆ. ಸ್ವಾತಂತ್ರ್ಯ, ಅವಕಾಶ, ಹಕ್ಕು, ಅಸ್ತಿತ್ವಗಳ ಪ್ರಶ್ನೆ ಎದುರಾದಂತೆಲ್ಲ

ಮಹಿಳೆಯರನ್ನು ಬಹುದೂರ ಉಳಿಸಲಾಗಿದೆ. ಸ್ತ್ರೀಯರ ಕೌಟುಂಬಿಕ, ಸಾಮಾಜಿಕ ಬದುಕಿನ ಕುರಿತು ಕಳಕಳಿ ತಾಳದ ಶೋಷಕವರ್ಗ ಬೆಳೆದಿದೆ. ಈ ವರ್ಗ ತನ್ನ ದನಿಯನ್ನು ಗಟ್ಟಿಗೊಳಿಸುತ್ತಾ ಸ್ತ್ರೀಸಮುದಾಯವನ್ನು ತಾತ್ಸಾರವಾಗಿ ಕಂಡಿದೆ. ಪಾರಂಪರಿಕ ನಿಲುವನ್ನು ಸಾಮಾಜಿಕರು ಸ್ವೀಕರಿಸುವಂತೆ ಒತ್ತಾಯಿಸಿದೆ. ಈ ಸ್ವೀಕರಣ ಮನಸ್ಥಿತಿಯ ಹಿಂದೆ ಪುರುಷರಾಜಕಾರಣ ಕೆಲಸ ಮಾಡಿದೆ. ಪುರುಷನಿಷ್ಠ ಧೋರಣೆಗಳನ್ನು ವೈಭವೀಕರಿಸಿ ಮಹಿಳಾ ದೌರ್ಜನ್ಯವನ್ನು ಅಡಗಿಸಿದೆ. ಪ್ರಭುತ್ವದ ಪ್ರತಿನಿಧಿಯಾಗಿ ಪುರುಷನನ್ನು ನಿರೂಪಿಸಿದೆ.

ಎಂಭತ್ತರ ದಶಕದ ಸಾಹಿತ್ಯ ಸ್ತ್ರೀಸಂವೇದನಾಶೀಲ ನೆಲೆಯಲ್ಲಿ ಸಾಗಿದೆ. ಮಹಿಳೆಯರಿಗೆ ದಕ್ಕಬೇಕಾದ ಅವಕಾಶ, ಪ್ರೋತ್ಸಾಹದ ಕುರಿತು ಮಾತಾಡಿದೆ. ಈ ನಿಟ್ಟಿನಲ್ಲಿ ಬಂದ ಸಾಹಿತ್ಯ ಕ್ರಾಂತಿಕಾರಿ ಧೋರಣೆಯವನ್ನು ತಳೆದಿದೆ. ಈ ಬಗೆಯ ಬರವಣಿಗೆ ಪುರುಷನಿಷ್ಠ ಸಮಾಜಕ್ಕೆ ಅರಗಿಸಿಕೊಳ್ಳಲಾಗದ ತುತ್ತಾಗಿ ಪರಿಣಮಿಸಿದೆ. ಸ್ತ್ರೀಸಂವೇದನಾಶೀಲ ಬರವಣಿಗೆಗಳು ಮಹಿಳಾ ಸ್ಥಿತಿಗತಿಯನ್ನು ನಿರೂಪಿಸುತ್ತಾ ಸಾಮಾಜಿಕ ತಿರುವನ್ನು ಅಪೇಕ್ಷಿಸಿದೆ.



ವೇದಗಳ ಕಾಲಘಟ್ಟದಲ್ಲಿ ಸ್ತ್ರೀಬದುಕಿಗೆ ವಿಶೇಷ ಸ್ಥಾನಮಾನ ಲಭ್ಯವಾಗಿತ್ತು. ತದನಂತರ ಜಾತಿಪದ್ಧತಿಯ ಅನಿಷ್ಟಕ್ಕೆ ಸಿಕ್ಕು ನಲುಗಿದ ಮಹಿಳಾಸಮುದಾಯದ ಸ್ಥಿತಿ ದುಸ್ತರವಾಯಿತು. ಬೌದ್ಧಧರ್ಮ ಅಸ್ತಿತ್ವದಲ್ಲಿ ಇದ್ದ ಕಾಲದಲ್ಲಿ ಬಾಲ್ಯವಿವಾಹ ಮತ್ತು ಸತಿ ಸಹಗಮನದಂತಹ ದುಷ್ಟ ಪದ್ಧತಿಗಳು ನಶಿಸಿದವು. ಈ ಸಂದರ್ಭದಲ್ಲಿ ಏಕಾಂಗಿತನದ ಬದುಕನ್ನು ಸವಿಯುವ ಅವಕಾಶ ಮಹಿಳೆಯರಿಗೆ ಇತ್ತು. ಕ್ರಿ.ಶ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಲಿಂಗ ಸಮಾನತೆಯ ತತ್ತ್ವವನ್ನು ಪ್ರತಿಪಾದಿಸಿತು. ಸಾಮಾಜಿಕ ಮೌಢ್ಯತೆಗಳನ್ನು ನಾಶಪಡಿಸಿತು. ಈ ಸಂದರ್ಭದಲ್ಲಿ ಸ್ತ್ರೀಯ ಅಸ್ತಿತ್ವ, ವ್ಯಕ್ತಿತ್ವ, ವೈಯಕ್ತಿಕ ನೆಲೆಯ ಬದುಕು ಬಹುಮುಖ್ಯವಾಯಿತು. ವಿಧವಾ ವಿವಾಹಕ್ಕೆ ಮಾನ್ಯತೆ ದೊರೆಯಿತು. ಈ ಸಂದರ್ಭದಲ್ಲಿ ಮಹಿಳಾ ಸ್ಥಿತಿಗತಿ ಸುಧಾರಿಸುವ ಪ್ರಯತ್ನಗಳು ನಡೆದರೂ ಸಂಪೂರ್ಣ ಯಶಸ್ಸು ಸಾಧಿಸಲಾಗಿಲ್ಲ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಗಂಡುಗುಣ ಮತ್ತು ಹೆಣ್ಣುಗುಣಗಳು ಇರುತ್ತವೆ. ಆದರೆ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆ ಕೆಲವು ಗುಣಗಳನ್ನು ಗಂಡುಗುಣಗಳು ಎಂಬುದಾಗಿಯೂ ಇನ್ನು ಕೆಲವು ಗುಣಗಳನ್ನು ಹೆಣ್ಣುಗುಣಗಳು ಎಂಬುದಾಗಿಯೂ ವಿಭಾಗಿಸಿದೆ. ಅಂತೆಯೇ ಗಂಡುಗುಣಗಳನ್ನು ಶ್ರೇಷ್ಠ ಎಂಬುದಾಗಿಯೂ ಹೆಣ್ಣುಗುಣಗಳನ್ನು ಕನಿಷ್ಠ ಎಂಬುದಾಗಿಯೂ ಪರಿಗಣಿಸಿದೆ. ಪ್ರಸ್ತುತ ಶಿಕ್ಷಣ, ಉದ್ಯೋಗ ಮತ್ತು ಆರ್ಥಿಕ ಸ್ವಾವಲಂಬಿಗಳಾದ ಮಾತ್ರಕ್ಕೆ ಮಹಿಳೆಯರು ಸಬಲರಾಗಿದ್ದಾರೆ ಎಂಬ ತೀರ್ಮಾನಕ್ಕೆ ಬರುವಂತಿಲ್ಲ. ಆದರೂ ಕೌಟುಂಬಿಕ ವ್ಯಾಪ್ತಿಯೊಳಗೆ ಹೆಚ್ಚು ಹೊಂದಾಣಿಕೆ

ಮಾಡಿಕೊಳ್ಳುತ್ತಿರುವವರು ಮಹಿಳೆಯರೇ ಆಗಿದ್ದಾರೆ. ಕೆಲವೊಮ್ಮೆ ಹೊಂದಾಣಿಕೆ ಮಾಡಿದಾಗಲೂ ನರಳುವ ಸಂದರ್ಭಗಳು ಇರುತ್ತವೆ.

ಅಂದಿನಿಂದ ಇಂದಿನವರೆಗೆ ಒಂದಲ್ಲ ಒಂದು ನೆಲೆಯಲ್ಲಿ ಮಹಿಳಾ ದೌರ್ಜನ್ಯ ನಡೆಯುತ್ತಲೇ ಬಂದಿದೆ. ಸ್ತ್ರೀಯರು ಬೌದ್ಧಿಕವಾಗಿ ಬೆಳೆದಂತೆಲ್ಲ ಪ್ರತಿಭೆ ಮತ್ತು ಅವಕಾಶವನ್ನು ಕಸಿಯುವ ಪ್ರಯತ್ನಗಳು ನಡೆಯುತ್ತಿವೆ. ಸ್ತ್ರೀಯರ ಕುರಿತ ಸ್ಥಾಪಿತ ಪೂರ್ವಗ್ರಹಗಳು ಸಂಪೂರ್ಣ ನಶಿಸಿಲ್ಲ. ಮಹಿಳಾಸ್ವಾತಂತ್ರ್ಯ ಮತ್ತು ಹಕ್ಕುಗಳ ಕುರಿತು ಅಲ್ಲಲ್ಲಿ ಧ್ವನಿ ಕೇಳಿಬಂದರೂ ಆಕೆಯ ವಾಸ್ತವ ಬದುಕು ದುಃಖದ ಮಡುವಿನಲ್ಲಿದೆ. ಪ್ರಸ್ತುತ ಸಾಹಿತ್ಯಿಕ ಸಾಮಾಜಿಕ, ಸಾಂಸ್ಕೃತಿಕ ಮತ್ತು ಔದ್ಯೋಗಿಕ ನೆಲೆಯಲ್ಲಿ ಮಹಿಳಾ ಶೋಷಣೆಗಳು ನಡೆಯುತ್ತಿವೆ. ಈ ಶೋಷಣೆಯನ್ನು ಹತ್ತಿಕ್ಕುವ ಪ್ರಯತ್ನಗಳು ಅಲ್ಲಲ್ಲಿ ಕಂಡರೂ ಫಲಕಾರಿ ಆಗಿಲ್ಲ. ಮಹಿಳಾ ಸುಧಾರಣೆಯ ಆಶಯದ ಅಡಿ ಬಹುತೇಕ ಸಾಹಿತ್ಯಿಕ, ಸಾಮಾಜಿಕ ಕಾರ್ಯ ಚಟುವಟಿಕೆಗಳು ನಿರಂತವಾಗಿ ನಡೆಯುತ್ತಿವೆ. ಸ್ತ್ರೀಸಂವೇದನಾಶೀಲತೆ ಪುರುಷರಲ್ಲೂ ಮೊಳಕೆ ಒಡೆಯಬೇಕು.

ಸ್ತ್ರೀಬದುಕಿನ ಏಳು-ಬೀಳುಗಳು ಒಂದು ಕಥನವನ್ನೇ ಸೃಷ್ಟಿಸಿವೆ. ಚಾರಿತ್ರಿಕ, ಸಾಂಸ್ಕೃತಿಕ, ಶೈಕ್ಷಣಿಕ ಔದ್ಯೋಗಿಕ ನೆಲೆಯಲ್ಲಿ ಮಹಿಳೆಯರ ಬದುಕು ಮತ್ತು ಸಾಧನೆಯನ್ನು ಗ್ರಹಿಸಬೇಕಿದೆ. ಈ ಗ್ರಹಿಕೆಯ ಹಿಂದೆ ಪೂರ್ವನಿರ್ಧಾರಿತ ಮನಸ್ಥಿತಿ ಕೆಲಸ ಮಾಡುವಂತಿಲ್ಲ. ಮಹಿಳೆಯರ ಬದುಕು, ನಿಲುವು, ಅಭಿಪ್ರಾಯ, ಆಶೋತ್ತರಗಳನ್ನು ಪಾರದರ್ಶಕ ನೆಲೆಯಲ್ಲಿ ಬಿತ್ತರಿಸಬೇಕು. ಸ್ತ್ರೀಯರ ಬೇಕು-ಬೇಡಗಳನ್ನು ಇದುವರೆಗೆ ತೀರ್ಮಾನಿಸಿದವರು ಪುರುಷರೇ ಆಗಿರುತ್ತಾರೆ. ಪರಿಣಾಮ ಪ್ರಸ್ತುತ ಬಹುತೇಕ ಮಹಿಳೆಯರು ಅಭಿಪ್ರಾಯಸ್ವಾತಂತ್ರ್ಯದಿಂದ ಬಹುದೂರ ಉಳಿಯುವಂತಾಗಿದೆ. ಇಂಥ ಮಹಿಳೆಯರ ಬದುಕನ್ನು ವಿಶ್ಲೇಷಿಸುವ ಅಗತ್ಯತೆ ಇದೆ. ಇದರಿಂದ ಪುರುಷಪ್ರಧಾನ ವ್ಯವಸ್ಥೆಯ ದೋಷಗಳನ್ನು ಪರಿಗ್ರಹಿಸಲು ಸಾಧ್ಯ. ಈ ಗ್ರಹಿಕೆಯ ಆಧಾರದಲ್ಲಿ ಲಿಂಗ ಸಮಾನತೆಯ ನೆಲೆಗಳನ್ನು ಶೋಧಿಸಲು ಸಾಧ್ಯ.

ಸಾಹಿತ್ಯದಲ್ಲಿ ಹೆಣ್ಣನ್ನು ದೇವಿ ಅಥವಾ ರಕ್ಕಸಿಯಾಗಿ ನಿರೂಪಿಸುವ ತುಡಿತದಲ್ಲಿ ಮಾನವತ್ವವನ್ನು ಸಂಪೂರ್ಣ ಅಡಗಿಸಲಾಗಿದೆ. ಮಾತೆಯಾಗಿ, ಸತಿಯಾಗಿ, ಸುತೆಯಾಗಿ ಪುರುಷನ ನೆಲೆಯಿಂದ ಆಕೆಯನ್ನು ನಿರ್ವಚಿಸಲಾಗಿದೆ. ಶೀಲದ ಕಲ್ಪನೆಯ ಎದುರಿಗೆ ಆಕೆಯ ಮನೋಕಲ್ಪನೆಯನ್ನು ತಳ್ಳಿಹಾಕಲಾಗಿದೆ. ದೈಹಿಕ ಪಾತಿವ್ರತ್ಯಕ್ಕೆ ಪ್ರಾಶಸ್ತ್ಯ ನೀಡುತ್ತಾ ಆಕೆಯ ಬೌದ್ಧಿಕ ಶಕ್ತಿಯನ್ನು ಕಸಿಯಲಾಗಿದೆ. ಹೀಗೆ ಸ್ತ್ರೀಸಮುದಾಯದ ಮಾನಸಿಕ ನೆಲೆಯನ್ನು ಸಂಪೂರ್ಣ ಅಡಗಿಸಲಾಗಿದೆ. ಪುರುಷರ ಯಶೋಗಾಥೆ, ದಿಗ್ವಿಜಯ,

ಯುದ್ಧನೀತಿಗಳು ಸಾಹಿತ್ಯದಲ್ಲಿ ದಾಖಲಾಗಿವೆ. ಸ್ತ್ರೀಯ ಮಾನಾಪಮಾನ, ಸಂಕಟ, ಅಂತರಂಗಸಂವೇದನೆ ಸಾಹಿತ್ಯದಲ್ಲಿ ದಾಖಲಾಗಿಲ್ಲ. ಸಹನೆ, ನಾಚಿಕೆ, ಮೂಕತೆ ಮತ್ತು ಕಣ್ಣೀರು ಹೆಣ್ಣಿನ ಜನ್ಮಕ್ಕೆ ಅಂಟಿದ ಗುಣಗಳು ಎಂಬುದಾಗಿ ಸಾಹಿತ್ಯ ನಿರೂಪಿಸಿದೆ. ಇಂಥ ಸಾಹಿತ್ಯ ಕೃತಿಗಳು ಪುರುಷಪರ ನಿಲುವನ್ನು, ಚಿಂತನೆಯನ್ನು ಪುಷ್ಟೀಕರಿಸುತ್ತವೆ. ಪುರುಷಕೇಂದ್ರಿತ ಸಾಹಿತ್ಯ ಎಲ್ಲಿಯೂ ಮಹಿಳೆಯ ಅಸ್ಮಿತೆಯನ್ನು ಗ್ರಹಿಸಿಲ್ಲ. ಮೌನ ಮುರಿದರೆ ರಕ್ಕಸಿಯಾಗಿ ಕಂಡಾಳು ಎಂಬ ಕಲ್ಪನೆಯ ಹಿನ್ನೆಲೆಯಲ್ಲಿಯೇ 'ನಾರಿ ಮುನಿದರೆ ಮಾರಿ' ಎಂಬ ಮಾತನ್ನು ಹುಟ್ಟುಹಾಕಿರಬೇಕು. ಪುರುಷನಿಷ್ಠ ಸಮಾಜ ಸ್ವಹಿತವನ್ನು ಕೇಂದ್ರೀಕರಿಸಿ ಸ್ತ್ರೀಯರ ಕುರಿತು ನಿಯಮಾವಳಿಗಳನ್ನು ರೂಪಿಸಿದೆ. ಈ ನೆಲೆಯಲ್ಲಿ ಸ್ತ್ರೀಯನ್ನು ಬಂಧಿಯಾಗಿಸಿದೆ.

ಸಾಹಿತ್ಯದಲ್ಲಿ ಮಹಿಳಾ ಪಾತ್ರಗಳ ರೂಪ ಮತ್ತು ಗುಣಗಳ ನಡುವೆ ಸಾಮ್ಯ ಕಲ್ಪಿಸಲಾಗಿದೆ. ರಾಮಾಯಣದ ಸ್ತ್ರೀ ಪಾತ್ರಗಳನ್ನು ಹೀಗೆಯೇ ನಿರ್ವಚಿಸಬೇಕು ಎಂಬ ಪೂರ್ವನಿರ್ಧಾರಿತ ಮನಸ್ಥಿತಿ ಶಿಷ್ಟ ರಾಮಾಯಣ ಪರಂಪರೆಯ ಕವಿಗಳಿಗೆ ಇತ್ತು. ಸೀತೆಯನ್ನು ದೈವಿಕ ನೆಲೆಯಿಂದ ಕಂಡ ರಾಮಾಯಣ ಶೂರ್ಪನಖಿಯನ್ನು ರಕ್ಕಸಿಯಾಗಿ ಕಂಡಿದೆ. ರೂಪ ಮತ್ತು ಗುಣಗಳ ನಡುವಣ ಸಾಮರಸ್ಯಕ್ಕಾಗಿ ಸೀತೆಯನ್ನು ಸ್ಫುರದ್ರೂಪಿಯನ್ನಾಗಿ ಶೂರ್ಪನಖಿಯನ್ನು ಕುರೂಪಿಯನ್ನಾಗಿ ಚಿತ್ರಿಸಲಾಯಿತು. ಪರಿಣಾಮ ಓದುಗರಿಗೆ ಸೀತೆಯ ಕುರಿತು ದೈನ್ಯಭಾವ ಮತ್ತು ಶೂರ್ಪನಖಿಯ ಕುರಿತು ಅಸಹ್ಯಭಾವ ಹುಟ್ಟುವಂತಾಯಿತು.

ಪುರಾಣ, ಮಹಾಕಾವ್ಯಗಳು ಜನಮನವನ್ನು ಪ್ರಭಾವಿಸಿವೆ. ಮಹಾಕಾವ್ಯಗಳಲ್ಲಿ ನಿರೂಪಿತವಾದ ಮಹಿಳಾ ಪಾತ್ರಗಳ ಬದುಕನ್ನು ವಾಸ್ತವದ ನೆಲೆಯಲ್ಲಿಯೇ ಸಾಮಾಜಿಕರು ಸ್ವೀಕರಿಸಿದ್ದಾರೆ. ಹಾಗಾಗಿ ವ್ಯವಸ್ಥೆಯ ದೋಷವನ್ನು ಪ್ರಶ್ನಿಸುವ, ಪ್ರತಿಭಟಿಸುವ ಮಹಿಳಾ ಮನೋಧರ್ಮ ಸಮಾಜಕ್ಕೆ ಹಿತ ಎನಿಸುವುದಿಲ್ಲ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಮಹಿಳಾ ಭಾವನೆಗಳಿಗೆ ಬೆಲೆಯೇ ಇಲ್ಲ. ರಾಮನ ಆದರ್ಶ, ಪ್ರಜಾ ಪಾಲನಾತತ್ತ್ವ ಮತ್ತು ತೀರ್ಮಾನಗಳ ಎದುರು ಸೀತೆಯ ಸಂಕಷ್ಟ ಪ್ರಸ್ತಾಪವಾಗಲೇ ಇಲ್ಲ. ಲಕ್ಷ್ಮಣನ ಭ್ರಾತೃಪ್ರೇಮದ ಎದುರು ಊರ್ಮಿಳೆಯ ತಪಸ್ಸು ಹೇಳ ಹೆಸರಿಲ್ಲದೆ ಹೋಯಿತು. ಪುರುಷ ಪ್ರಭುತ್ವವನ್ನು ಪುಷ್ಟೀಕರಿಸುವ ಹಲವಾರು ಸನ್ನಿವೇಶಗಳು ಶಿಷ್ಟ ರಾಮಾಯಣ ಪರಂಪರೆಯಲ್ಲಿ ಇವೆ. ಸ್ತ್ರೀಸಮುದಾಯದ ಸಾಧನೆಯ ಸಾಧ್ಯತೆಗಳನ್ನು ಶೋಧಿಸುವ ಉದ್ದೇಶ ಶಿಷ್ಟ ರಾಮಾಯಣ ಪರಂಪರೆಗೆ ಇಲ್ಲ. ಈ ಬಗೆಯ ನಿರೂಪಣೆಯನ್ನು ಸಮಾಜ ಹೇಗೆ ಗ್ರಹಿಸುತ್ತದೆ? ಮತ್ತು ಹೇಗೆ ಸ್ವೀಕರಿಸುತ್ತದೆ? ಎಂಬುದು ಪ್ರಧಾನ ಪ್ರಶ್ನೆ. ಪುರುಷಪರ ಚಿಂತನೆಯನ್ನು ಬೆಂಬಲಿಸುವ ಸಮಾಜವ್ಯವಸ್ಥೆಗೆ ಈ ಬಗೆಯ ಸ್ವೀಕರಣ ಕಷ್ಟ ಎನಿಸುವುದಿಲ್ಲ.

ಪುರುಷಕೇಂದ್ರಿತ ಅಭಿಪ್ರಾಯ, ತೀರ್ಮಾನ, ಮನಸ್ಥಿತಿಯನ್ನು ಸಾಧನೆಯ ನೆಲೆಯಲ್ಲಿ ಸಮಾಜ ಸ್ವೀಕರಿಸುತ್ತದೆ. ಕಾರಣ ಸಾಮಾಜಿಕರ ಮನಸ್ಥಿತಿ ಪುರುಷಪರ ಚಿಂತನೆಯ ನೆಲೆಯಲ್ಲಿಯೇ ಸಾಗಿರುತ್ತದೆ. ಪುರುಷನನ್ನು ಪೂರ್ಣ ವ್ಯಕ್ತಿತ್ವವಾಗಿ ಅಭ್ಯಾಸ ಮಾಡಲಾಗುತ್ತದೆ. ಮಹಿಳೆಯ ವಿಚಾರದಲ್ಲಿ ಈ ದೃಷ್ಟಿಕೋನ ತೀರಾ ಸಂಕುಚಿತಗೊಳ್ಳುತ್ತದೆ. ಈ ತಾರತಮ್ಯ ಧೋರಣೆಯ ಕುರಿತು ಚಿಂತನೆ ನಡೆಯಬೇಕಿದೆ. ಎಂಭತ್ತರ ದಶಕದ ಇತ್ತೀಚಿನ ಬರವಣಿಗೆಗಳು ಸ್ತ್ರೀಸಂವೇದನೆಯನ್ನು ಪರಿಗ್ರಹಿಸಿವೆ. ಪರಿಣಾಮ ಮಹಿಳಾ ಹಕ್ಕು, ಸ್ವಾತಂತ್ರ್ಯ, ಅಸ್ತಿತ್ವದ ಕುರಿತು ಮಾತುಗಳು ಕೇಳಿಬರುತ್ತಿವೆ.

ಪುರುಷರೂಪಿ ಸಂಸ್ಕೃತಿ ಸ್ತ್ರೀಯ ಭಾವಗಳಿಗೆ ತಡೆ ಒಡ್ಡಿದೆ. 'ನಾನು ನಾನು' ಎಂದು ಗ್ರಂಥಗಳಲ್ಲಿ ಪದೇ ಪದೇ ಉಲ್ಲೇಖವಾದಂತೆಲ್ಲ ಪುರುಷಸೂಚಕ ಪ್ರತ್ಯಯಗಳಾಗಿಯೇ ಕಾಣಿಸುತ್ತವೆ. ಜೈವಿಕವಾಗಿ ಗಂಡುಗುಣ ಹೆಣ್ಣುಗುಣ ಎಂಬ ವ್ಯತ್ಯಯ ಇಲ್ಲ. ಪುರುಷನಿಷ್ಠ ಧೋರಣೆಯನ್ನು ಪ್ರೋತ್ಸಾಹಿಸುವ ಆರೋಪಿತ ಮೌಲ್ಯಗಳು ಸಮಾಜದಲ್ಲಿ ಇವೆ. ಇವುಗಳಲ್ಲಿ ಪ್ರಧಾನ ಗುಣಗಳನ್ನು ಪುರುಷರಿಗೆ, ಪುರುಷರಿಂದ ನಿರಾಕೃತ ಗುಣಗಳನ್ನು ಮಹಿಳೆಯರಿಗೆ ಆರೋಪಿಸಲಾಗಿದೆ. ಹೆಣ್ಣು ಹೀಗೆಯೇ ಇರಬೇಕು ಎಂಬ ಸಿದ್ಧ ಮಾದರಿಯ ಚೌಕಟ್ಟನ್ನು ಪ್ರಸ್ತುತ ಸಾಹಿತ್ಯದ ಸಂದರ್ಭದಲ್ಲಿ ಒಡೆಯಲಾಗಿದೆ.

ಅನುಪಮಾ ನಿರಂಜನರ 'ಮಾಧವಿ' ಕಾದಂಬರಿಯ ಮಾಧವಿಯ ಬದುಕು ಕಟುಕರ ಹೃದಯವನ್ನು ಕರಗಿಸುವಂತಿದೆ. ಗಾಲವ ತನ್ನ ಸ್ವಾರ್ಥ ಸಾಧನೆಗೆ ಮಾಧವಿಯನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಾನೆ. ಹೀಗೆ ಮಾಧವಿಯನ್ನು ಸರಕಿನ ಮಟ್ಟದಲ್ಲಿ ಇಟ್ಟು ನೋಡಲಾಗುತ್ತದೆ. ಪುರುಷಪ್ರಧಾನ ವ್ಯವಸ್ಥೆ ಅವಳ ಅಂತರಂಗಶಕ್ತಿಯನ್ನು ಅರಿಯುವಲ್ಲಿ ವಿಫಲವಾಗುತ್ತದೆ. ಈ ಕಾದಂಬರಿಯಲ್ಲಿ ಮಾಧವಿಯ ಅಸ್ತಿತ್ವ, ವ್ಯಕ್ತಿತ್ವದ ಪ್ರಶ್ನೆ ಮುಖ್ಯವಾಗಿಲ್ಲ. ಇಲ್ಲಿ ವ್ಯವಸ್ಥೆಯನ್ನು ಪ್ರಶ್ನಿಸದ ದುರ್ಬಲ ವ್ಯಕ್ತಿತ್ವವಾಗಿ ಮಾಧವಿಯನ್ನು ನಿರೂಪಿಸಲಾಗಿದೆ. ತನ್ನ ಬದುಕಿನ ಕುರಿತ ಪ್ರಜ್ಞೆ ಮಾಧವಿಯಲ್ಲಿ ಇರಲಿಲ್ಲವೇ? ಎಂಬ ಪ್ರಶ್ನೆ ಎದುರಾಗುತ್ತದೆ. ಇಲ್ಲಿ ಮಾಧವಿ ತನ್ನ ಬದುಕಲ್ಲಿ ಎದುರಾದ ಸನ್ನಿವೇಶವನ್ನು ಮೌನಿಯಾಗಿಯೇ ಸ್ವೀಕರಿಸುತ್ತಾಳೆ. ಮಾಧವಿಯ ಮೂಕತೆಗೆ ಸಂಬಧಿಸಿದಂತೆ ಮುಖ್ಯವಾಗಿ ಎರಡು ಪ್ರಶ್ನೆಗಳು ಎದುರಾಗುತ್ತವೆ.

೧. ಮಾಧವಿ ಗಾಲವನ್ನು ಕ್ಷಮಿಸಿರಬಹುದೇ?

೨. ತನಗಾದ ಅನ್ಯಾಯಕ್ಕೆ ವಿಧಿ ಎಂಬ ಹಣೆಪಟ್ಟಿ ಕಟ್ಟಿರಬಹುದೇ?

ಮಾಧವಿ ಗಾಲವನ್ನು ಕ್ಷಮಿಸಿದ್ದೇ ಆದಲ್ಲಿ ಇಂಥ ನೂರಾರು ಗಾಲವರು ಹುಟ್ಟಿಕೊಳ್ಳುತ್ತಾರೆ ಎಂಬುದು ನಿಸ್ಸಂಶಯ. ತನಗಾದ ಅನ್ಯಾಯಕ್ಕೆ ವಿಧಿಯನ್ನು ದೂಷಿಸಿದಲ್ಲಿ ಗಾಲವನನ್ನು ನಿರ್ದೋಷಿಯನ್ನಾಗಿಸಿದಂತಾಯಿತು. ಒಟ್ಟಿನಲ್ಲಿ ಅವಳ ಅಂತರಂಗದ ವೇದನೆಯನ್ನು ಕಾದಂಬರಿಯ ಯಾವ ಪುರುಷ ಪಾತ್ರಗಳೂ ಗ್ರಹಿಸಿಲ್ಲ. ಮಾಧವಿಯ ತೀರ್ಮಾನದ ಹಿಂದೆ ಪುರುಷರ ಶಕ್ತಿರಾಜಕಾರಣ ಕೆಲಸ ಮಾಡಿದೆ. ಯಜಮಾನ ಸಂಸ್ಕೃತಿ ತನ್ನ ಅನುಕೂಲಕ್ಕೆ ತಕ್ಕಂತೆ ಮಹಿಳಾಸಮುದಾಯವನ್ನು ನಿಯಂತ್ರಣದಲ್ಲಿ ಇರಿಸಿದೆ. ಅವರ ವೈಯಕ್ತಿಕ ಹಿತಾಸಕ್ತಿ ಹಾಗೂ ಅಭಿಪ್ರಾಯಗಳನ್ನು ಲೆಕ್ಕಿಸದೆ ಹೀನಾಯವಾಗಿ ನಡೆಸಿಕೊಂಡಿದೆ. ಈ ನೆಲೆಯಲ್ಲಿ ಪುರುಷವರ್ಗದ ಶಕ್ತಿರಾಜಕಾರಣ ಕಾರ್ಯ ನಿರ್ವಹಿಸಿದೆ ಎನ್ನಬೇಕು. ಹೀಗೆ ಹೆಣ್ಣೊಬ್ಬಳ ಬದುಕನ್ನು ಜಂಜಡವಾಗಿಸಿದ ಪುರುಷಕ್ರೌರ್ಯ 'ಮಾಧವಿ' ಕಾದಂಬರಿಯಲ್ಲಿ ವ್ಯಕ್ತ.

ಬೇಂದ್ರೆಯವರ 'ಅವಳ ಹಿಂದೆ' ಕವನದಲ್ಲಿ ಹೆಣ್ಣೊಬ್ಬಳ ಸಮಗ್ರ ಬದುಕನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ. ಗಂಡನಿಲ್ಲದ ಬದುಕನ್ನು ಆಕೆ ಊಹಿಸಲೂ ಸಾಧ್ಯವಿಲ್ಲದ ಮಟ್ಟಿಗೆ ಮಾನಸಿಕವಾಗಿ ದುರ್ಬಲಳಾಗುವ ನಿರೂಪಣೆ ಇದೆ. ಇದಕ್ಕೆ ಪೂರಕವಾಗಿ ಡಾ। ಶಿವರಾಮ ಕಾರಂತರ 'ಮೈ ಮನಗಳ ಸುಳಿಯಲ್ಲಿ' ಕಾದಂಬರಿ ಮತ್ತು ನಿರಂಜನರ 'ಕೊನೆಯ ಗಿರಾಕಿ' ಯಲ್ಲೂ ಇಂಥಹುದೇ ವಿವರಗಳು ಕಾಣಸಿಗುತ್ತವೆ.

ಒಂದು ಕಾಲದ ಮಹಿಳೆಯರ ಬದುಕು, ಸ್ಥಿತಿಗತಿ, ಜವಾಬ್ದಾರಿ ಜನಪದ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿದೆ. 'ಕೆರೆಗೆ ಹಾರ' ಜನಪದ ಕಾವ್ಯದಲ್ಲಿ ಹೆಣ್ಣನ್ನು ಬಲಿಕೊಡುವ ಪ್ರಸಂಗವನ್ನು ಪ್ರೋತ್ಸಾಹಿಸಲಾಗಿದೆ. ಜನಪದ ಸಾಹಿತ್ಯ ಪುರುಷ ಕೇಂದ್ರಿತ ಚಿಂತನೆಗಳನ್ನು ಪ್ರತಿಪಾದಿಸಿದೆ. ಮಹಿಳಾ ಜಗತ್ತಿನ ಮೂಕತೆಗೆ ಆದ್ಯತೆ ನೀಡಲಾಗಿದೆ. ಈ ಮೂಕತೆಯನ್ನೇ ವೈಭವೀಕರಿಸಿ ನಿರೂಪಿಸಲಾಗಿದೆ. 'ಕೆರೆಗೆ ಹಾರ'ದ ಭಾಗೀರಥಿ ಜನಪದರಿಗೆ ತ್ಯಾಗಮಯಿಯಾಗಿ ಕಾಣುತ್ತಾಳೆ. ಸ್ವತಂತ್ರ ಅಸ್ತಿತ್ವದಿಂದ ಬಹುದೂರ ಉಳಿಸಿ ಭಾಗೀರಥಿಯ ಬದುಕನ್ನು ಕಟ್ಟಲಾಗಿದೆ. ದಾನದ, ತ್ಯಾಗದ, ಶೀಲದ ಪರಿಕಲ್ಪನೆಯ ನೆಲೆಯಲ್ಲಿ ಸ್ತ್ರೀಯರ ಬದುಕನ್ನು ನಿರ್ವಚಿಸಲಾಗಿದೆ. ಈ ನಿರೂಪಣೆಯು ಹಿಂದೆ ಜನಪದ ಮನಸ್ಸು ಪುರುಷಪರ ಚಿಂತನೆಯನ್ನು ಹುಟ್ಟುಹಾಕಿರುವುದು ಸ್ಪಷ್ಟವಾಗುತ್ತದೆ.

ಸ್ತ್ರೀಸಂವೇದನಾಶೀಲ ಸಾಹಿತ್ಯದಲ್ಲಿ ಸುಧಾರಣಾಪರ ನಿಲುವುಗಳು ಅಭಿವ್ಯಕ್ತಗೊಂಡಿರುತ್ತವೆ. ಆದರೂ ಮಹಿಳಾ ಪಾತ್ರನಿರೂಪಣೆಗೆ ಸಂಬಧಿಸಿದಂತೆ ಕೊನೆಗೊಂದು ಪಶ್ಚಾತ್ತಾಪದ ಲೇಪವಿರುತ್ತದೆ. ತನಗಾದ ಅನ್ಯಾಯದ ವಿರುದ್ಧ ಬಂಡೇಳುವ ಕ್ರಾಂತಿಕಾರಿ ಶಕ್ತಿಯಾಗಿ

ಮಹಿಳೆಯರನ್ನು ನಿರೂಪಿಸಲಾಗುತ್ತದೆ. ಕೊನೆಗೆ ತನ್ನ ಉದ್ದೇಶದ ಕುರಿತು ಪಶ್ಚಾತ್ತಾಪಪಡುವ ದುರ್ಬಲ ವ್ಯಕ್ತಿತ್ವವಾಗಿ ನಿರೂಪಿಸಲಾಗುತ್ತದೆ. ಮಾಸ್ತಿಯವರ 'ಚಿಕ್ಕ ಮಲ್ಲಮ್ಮ' ಎಂಬ ಕಥೆಯಲ್ಲಿ ಕಥಾನಾಯಕಿ ದುಷ್ಟರಿಂದ ಅಪಹರಣಕ್ಕೆ ಒಳಗಾಗುತ್ತಾಳೆ. ಅತ್ಯಾಚಾರಕ್ಕೆ ಒಳಗಾದ ಪರಿಣಾಮ ಪ್ರಾಣ ಕಳೆದುಕೊಳ್ಳುತ್ತಾಳೆ. ಶೀಲಕ್ಕೂ, ಪಾತಿವ್ರತ್ಯಕ್ಕೂ ಅಧಿಕ ಮಹತ್ವ ನೀಡಿದ ಸಾಹಿತ್ಯ ಸ್ತ್ರೀಯರ ಬದುಕಿನ ಕುರಿತು ಮೌನ ವಹಿಸುತ್ತದೆ. ಕಥಾನಾಯಕಿ ಬದುಕಿ ಸಾಧಿಸಬೇಕು ಎಂಬ ನಿಲುವನ್ನು ಈ ಕಥೆ ಸಾಬೀತುಪಡಿಸಿಲ್ಲ.

ಎಂ.ಕೆ. ಇಂದಿರಾರವರ 'ಫಣಿಯಮ್ಮ' ಕಥೆ ಬಾಲ ವಿಧವೆಯ ಬದುಕನ್ನು ಕಟ್ಟಿಕೊಡುತ್ತದೆ. ಜಿಡ್ಡು ಸಂಪ್ರದಾಯದ ಪರಿಣಾಮ ಫಣಿಯಮ್ಮನ ಬದುಕೇ ಜೀವಂತ ಶವವಾಗುತ್ತದೆ. ಇದೇ ಕಥೆಯ ದಾಕ್ಷಾಯಿಣಿಯ ಪಾತ್ರ ವ್ಯವಸ್ಥೆಯ ವಿರುದ್ಧ ತಿರುಗಿ ನಿಲ್ಲುತ್ತದೆ. ವಿಧವೆಯ ತಲೆ ಬೋಳಿಸುವ ಪರಿಪಾಠವನ್ನು ಪ್ರಶ್ನಿಸುತ್ತಾ ಪ್ರತಿಭಟಿಸುತ್ತದೆ. ಈ ಬಗೆಯ ಪ್ರತಿಭಟನಾತ್ಮಕ ನಿರೂಪಣೆಯ ಹಿಂದೆ ಕಥೆಗಾರ್ತಿಯ ಸ್ತ್ರೀಸಂವೇದನಾಶೀಲ ಮನೋಧರ್ಮ ಅಭಿವ್ಯಕ್ತಗೊಂಡಿದೆ. ಪುರುಷರಿಂದ ತನಗಾದ ಅನ್ಯಾಯಕ್ಕೆ ಮಹಿಳೆಯರು ಯಾತನೆ ಪಡುವ ಸ್ಥಿತಿ ಸಾಹಿತ್ಯದಲ್ಲಿ ಇದೆ. ಅಂತೆಯೇ ವಾಸ್ತವ ಬದುಕಲ್ಲೂ ಕೂಡಾ. ಹೀಗೆ ತನ್ನದಲ್ಲದ ತಪ್ಪಿಗೆ ಶಿಕ್ಷೆ ಅನುಭವಿಸುವ ಪಾಠವನ್ನು ಸಾಹಿತ್ಯ ಮತ್ತು ಸಮಾಜ ಹೆಣ್ಣಿಗೆ ಕಲಿಸಿಕೊಡುತ್ತದೆ. ಆದರೆ ಇಲ್ಲಿ ದಾಕ್ಷಾಯಿಣಿಯ ಬದುಕು ಭಿನ್ನ ನೆಲೆಯಲ್ಲಿ ಸಾಗಿದೆ. ಮೈದುನನಿಂದ ಗರ್ಭಿಣಿಯಾದ ದಾಕ್ಷಾಯಿಣಿ ಅತ್ತೆಯ ಮೂದಲಿಕೆಯ ಮಾತುಗಳನ್ನು ಸಹಿಸುವುದಿಲ್ಲ. ನಿಮ್ಮ ಮಗನಿಂದ ಆದುದಕ್ಕೆ ನೀವೇ ಬಾಣಂತನ ಮಾಡಬೇಕೆಂದು ಷರತ್ತು ಒಡ್ಡುತ್ತಾಳೆ. ವಿಧವೆ ಗರ್ಭಿಣಿಯಾದಾಗ ಸಮಾಜ ಬಹಿಷ್ಕಾರ ಹಾಕುವುದನ್ನು ಇಲ್ಲಿ ತಡೆಯಲಾಗಿದೆ. ಈ ವಿಚಾರದಲ್ಲಿ ಹೆಣ್ಣೊಬ್ಬಳನ್ನೇ ಆರೋಪಿಯನ್ನಾಗಿಸಲು ಸಾಧ್ಯವಿಲ್ಲ. ಆರೋಪಿಸಿದ್ದೇ ಆದಲ್ಲಿ ಅದರ ವಿರುದ್ಧ ಪ್ರತಿಭಟನೆ ನಡೆಯಬೇಕು. ಸ್ತ್ರೀಯರ ಬದುಕನ್ನು ನಾಶಗೊಳಿಸುವ ಉದ್ದೇಶ ಸಮಾಜಕ್ಕೆ ಇರಬಾರದು. ಇಂಥ ಸಂದರ್ಭದಲ್ಲಿ ಮಹಿಳೆ ದಿಟ್ಟತನದಿಂದ ವರ್ತಿಸಬೇಕು. ಆಗ ಮಾತ್ರ ಸಾಮಾಜಿಕ ಸುಧಾರಣೆ ಸಾಧ್ಯ ಎಂಬುದು ಈ ಕಥೆಯ ಆಶಯ.

ಪುರುಷ ನಿರ್ಮಿತ ಸಾಹಿತ್ಯದಲ್ಲಿ ಸ್ತ್ರೀಸಂಬಂಧಿ ಕಾಳಜಿ, ಕ್ರಾಂತಿ ಅಭಿವ್ಯಕ್ತಗೊಂಡರೆ ಪುರುಷರಲ್ಲಿರುವ ಸ್ತ್ರೀಸಂವೇದನಾಶೀಲತೆ ವ್ಯಕ್ತವಾಗುತ್ತದೆ. ಆದರೂ ಪುರುಷವರ್ಗ ಮಹಿಳೆಯರ ಅಂತರಂಗಶಕ್ತಿಯನ್ನು ಗ್ರಹಿಸುವಲ್ಲಿ ಸಂಪೂರ್ಣ ಯಶಸ್ಸು ಸಾಧಿಸಿಲ್ಲ. ಹೆಣ್ಣಿನ ಮೂಕತೆಯನ್ನು ಪುರುಷಪ್ರಧಾನ ಸಮಾಜ ಅಪೇಕ್ಷಿಸುತ್ತದೆ. ಮೌನಿ ಎಂಬ ಪಟ್ಟಕಟ್ಟಿ ಆಕೆಯನ್ನು ಅವಕಾಶ ವಂಚಿತಳನ್ನಾಗಿಸುತ್ತದೆ. ಹೀಗೆ ಮಾತಿನಿಂದ ಬಹುದೂರ

ಉಳಿಸುತ್ತ ಮೂಕತೆಯ ನೆಲೆಯಲ್ಲಿ ದುರ್ಬಲಳನ್ನಾಗಿ ನಿರೂಪಿಸುತ್ತದೆ. ಗಂಡಿನ ಮಾತಿಗೂ, ಅಸ್ತಿತ್ವಕ್ಕೂ ವಿಶೇಷ ಸ್ಥಾನಮಾನ ಇದೆ. ಹಾಗಾಗಿ ಅವನ ಮಾತುಗಳು ಸಂಸ್ಕಾರಯುತವಾಗಿ ಇರಬೇಕು ಎಂಬ ನಿಯಮವಿಲ್ಲ. ಅವನ ತಪ್ಪುಗಳಿಗೆ ಪದೇಪದೇ ಕ್ಷಮೆ ದೊರಕುತ್ತಿರುತ್ತದೆ. ತನ್ನಿಂದಾದ ತಪ್ಪಿಗೆ ಆತ ಕ್ಷಮೆ ಯಾಚಿಸುವುದನ್ನು ಪುರುಷನಿಷ್ಠ ಸಮಾಜ ಅಪೇಕ್ಷಿಸುವುದಿಲ್ಲ. ಹೆಣ್ಣಿನ ಮೂಕತೆಯನ್ನು ಅಸಹಾಯಕತೆ ಎಂದೇ ಬಗೆದಿದೆ.

ಕುಟುಂಬದ ಅಳಿವು ಉಳಿವಿನ ಪ್ರಶ್ನೆ ಗೃಹಿಣಿಯ ಮೇಲೆ ಅವಲಂಬಿತವಾಗಿರುತ್ತದೆ ಎಂಬ ಆರೋಪಿತ ಮೌಲ್ಯಗಳನ್ನು ಒಡೆಯುವ ಪ್ರಯತ್ನ ಇತ್ತೀಚಿನದ್ದು. ಎಂಭತ್ತರ ದಶಕದ ಸ್ತ್ರೀಸಂವೇದನಾಶೀಲ ಸಾಹಿತ್ಯ ಈ ಕೆಲಸ ಮಾಡಿದೆ. ಲಿಂಗ ಸಮಾನತೆಯನ್ನು ಪ್ರತಿಪಾದಿಸುತ್ತಾ ಸ್ತ್ರೀ-ಪುರುಷರ ಜವಾಬ್ದಾರಿಯನ್ನು ಮನಗಂಡಿದೆ. ಆದರೂ ಸ್ತ್ರೀಯರ ಸಹನೆ, ತ್ಯಾಗವನ್ನು ವೈಭವೀಕರಿಸುವ ಸಾಹಿತ್ಯ ಇಂದಿಗೂ ಇದೆ. ಪುರುಷರನ್ನು ಪರಿಸ್ಥಿತಿಯ ಕೈಗೊಂಬೆಗಳನ್ನಾಗಿ ನಿರೂಪಿಸುತ್ತ ಓದುಗರಿಗೆ ಮರುಕ ಹುಟ್ಟುವಂತೆ ಮಾಡಲಾಗಿದೆ. ಮಹಿಳೆಯರ ಬುದ್ಧಿಶಕ್ತಿ, ಕೌಶಲ್ಯ, ಹೋರಾಟದ ನೆಲೆಗಳನ್ನು ನಿರೂಪಿಸಿದ ಪುರುಷನಿರ್ಮಿತ ಸಾಹಿತ್ಯ ಕೆಲವೇ ಕೆಲವು ಎನ್ನಬೇಕು. ಸಾಹಿತ್ಯಕ್ಕೆ ಸಮಾಜವನ್ನು ಕಟ್ಟುವ ಶಕ್ತಿ ಇದೆ. ಸಾಹಿತ್ಯ ಸಮಾಜದ ಪಡಿಯಚ್ಚು. ಪುರುಷ ಕೇಂದ್ರಿತ ಸಾಹಿತ್ಯದಲ್ಲಿ ಮಹಿಳಾ ಬದುಕು ನಿರ್ದಿಷ್ಟ ವ್ಯಾಪ್ತಿಯ ಒಳಗೇ ನಿಂತುಬಿಡುತ್ತದೆ. ಪುರುಷನ ಬದುಕಿನ ನಿರೂಪಣೆ ಇತಿಮಿತಿಗಳನ್ನು ಮೀರಿ ಮುಂದಕ್ಕೆ ಪ್ರವಹಿಸುತ್ತದೆ.

## ೪.೨ ಸಾಹಿತ್ಯಿಕ

ವೇದಕಾಲದಲ್ಲಿ ಮಹಿಳೆಯರ ಸ್ಥಾನಮಾನ ಉತ್ತಮವಾಗಿತ್ತು. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅವರ ಸ್ಥಿತಿಗತಿ ಸುಧಾರಿಸಿತ್ತು. ಅಂತೆಯೇ ಈ ಸಂದರ್ಭದಲ್ಲಿ ಸಾಹಿತ್ಯಿಕವಾಗಿಯೂ ಮಹಿಳೆ ತನ್ನನ್ನು ತೊಡಗಿಸಿಕೊಂಡಿದ್ದಳು. ಈ ತೊಡಗುವಿಕೆಯ ಹಿಂದೆ ಯಾರ ಒತ್ತಾಯವೂ ಇರಲಿಲ್ಲ. ಸ್ವಇಚ್ಛೆಯಿಂದ ಧಾರ್ಮಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಂತೆ ಸಾಹಿತ್ಯಿಕವಾಗಿಯೂ ಮಹಿಳೆಯರು ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ವೇದಕಾಲದ ಲೋಪಾಮುದ್ರ, ಉಪಾಲಾ, ಇಂದ್ರಾಣಿ, ಶಚೀ ಮತ್ತು ವಿಶ್ವಾವರ ಮುಂತಾದ ಮಹಿಳೆಯರು ಋಕ್‌ಕರ್ತೃಗಳೆಂದು ಕರೆಯಿಸಿಕೊಂಡಿದ್ದಾರೆ. ಉಪನಿಷತ್ತುಗಳ ಕಾಲದಲ್ಲಿ ಮಹಿಳೆಯರು ತಮ್ಮನ್ನು ಸಾಹಿತ್ಯ ರಚನಾಕಾರ್ಯದಲ್ಲಿ ತೊಡಗಿಸಿಕೊಂಡುದರ ವಿವರಗಳು ಕಾಣಸಿಗುತ್ತದೆ. ವೇದೋಪನಿಷತ್ತುಗಳ ಕಾಲದಲ್ಲಿ ಮಹಿಳೆಯರಿಗೆ ಧಾರ್ಮಿಕ ವಿದ್ಯೆ ಕಲಿಯಲು ಅವಕಾಶ ಇತ್ತು. ಆದರೆ ಶಾಸ್ತ್ರಕಾರರ ಕಾಲಕ್ಕೆ ಬಂದಾಗ ಮಹಿಳೆಯರಿಗೆ ಇದ್ದ ಈ ಅವಕಾಶವನ್ನು ಕಸಿಯಲಾಯಿತು. ಹೀಗೆ ವೇದಕಾಲದಲ್ಲಿ ಇದ್ದ ಹೆಣ್ಣಿನ ಕುರಿತ ಉದಾರವಾದಿ

ನೀತಿ ಧರ್ಮಶಾಸ್ತ್ರಗಳ ಕಾಲಕ್ಕೆ ಮರೆಯಾಯಿತು. ಈ ಸಂದರ್ಭದಲ್ಲಿ ಧಾರ್ಮಿಕ ಮತ್ತು ಸಾಹಿತ್ಯಿಕ ಅವಕಾಶಗಳಿಂದ ಮಹಿಳೆಯರನ್ನು ಬಹುದೂರ ಉಳಿಸಲಾಯಿತು. ಪುರುಷರನ್ನು ಪ್ರಧಾನತೆಯ ನೆಲೆಯಲ್ಲೂ ಮಹಿಳೆಯನ್ನು ಅಧೀನತೆಯ ನೆಲೆಯಲ್ಲಿಯೂ ಪರಿಕಲ್ಪಿಸಲಾಯಿತು. ಹೆಣ್ಣಿನ ವೈಯಕ್ತಿಕ ನೆಲೆಯ ಆಸೆ, ಆಕಾಂಕ್ಷೆಗಳಿಗೆ ಸ್ಥಾನ ದೊರಕಿಸದೆ ಆಕೆಯನ್ನು ನಿರ್ದಿಷ್ಟ ವ್ಯಾಪ್ತಿಯೊಳಗೆ ಬಂಧಿಯಾಗಿಸಲಾಯಿತು. ಇದರ ಪರಿಣಾಮದಿಂದಾಗಿ ಧರ್ಮಶಾಸ್ತ್ರಗಳ ಕಾಲಕ್ಕೆ ಮಹಿಳೆಯರು ಸಾಹಿತ್ಯ ರಚನಾಕಾರ್ಯದಿಂದ ವಿಮುಖರಾಗುವಂತಾಯಿತು.

ಧರ್ಮಶಾಸ್ತ್ರದ ಕಾಲಕ್ಕೆ ಬಿಗುಗೊಳಿಸಿದ ನೀತಿ ನಿರ್ಬಂಧಗಳು ವಚನಯುಗಕ್ಕೆ ಬರುವಾಗ ಸಡಿಲಗೊಂಡಿತು. ವಚನಯುಗವು ಮಹಿಳಾಸಮುದಾಯದ ಬದುಕಿಗೆ ವಿಶೇಷ ಸ್ಥಾನಮಾನವನ್ನು ಒದಗಿಸಿತು. ವಚನ ಚಳುವಳಿಯಲ್ಲಿ ಪಾಲ್ಗೊಂಡವರಲ್ಲಿ ಬಹುತೇಕ ಮಹಿಳೆಯರು ಜನಸಾಮಾನ್ಯರೇ ಆಗಿರುವುದು ಗಮನಾರ್ಹ ಸಂಗತಿ. ಸಾಮಾಜಿಕವಾಗಿ, ಸಾಹಿತ್ಯಿಕವಾಗಿ ಹೆಣ್ಣು ತನ್ನನ್ನು ಒಳಗುಪಡಿಸಲು ವಚನಯುಗ ಅವಕಾಶ ಕಲ್ಪಿಸಿತು. ಹನ್ನೆರಡನೆಯ ಶತಮಾನದ ವಚನಕಾರ್ತಿ ಅಕ್ಕಮಹಾದೇವಿಯಿಂದ ತೊಡಗಿ ಬಹುತೇಕ ವಚನಕಾರ್ತಿಯರು ತಮ್ಮದೇ ವಿಶಿಷ್ಟ ನೆಲೆಯಿಂದ ವಚನ ರಚನಾ ಕಾರ್ಯದಲ್ಲಿ ತೊಡಗಿದರು.

ವಚನಸಾಹಿತ್ಯದ ಸಂದರ್ಭದಲ್ಲಿ ಮಹಿಳಾಸಮುದಾಯ ತನ್ನನ್ನು ಗರಿಷ್ಠ ಪ್ರಮಾಣದಲ್ಲಿ ತೊಡಗಿಸಿಕೊಳ್ಳುವಂತಾಯಿತು. ಅಕ್ಷರಸ್ಥ, ಅನಕ್ಷರಸ್ಥ ಎಂಬ ಭೇದವಿಲ್ಲದೆ ಬಹುತೇಕ ಮಹಿಳೆಯರು ವಚನಚಳುವಳಿಯಲ್ಲಿ ಭಾಗವಹಿಸಿ ತಮ್ಮ ಬದುಕಿನ ಅನನ್ಯತೆಯನ್ನು ಕಂಡುಕೊಂಡರು. ಈ ವಚನಸಾಹಿತ್ಯದ ಸಂದರ್ಭದಲ್ಲಿ ತಮ್ಮನ್ನು ತೊಡಗಿಸಿಕೊಂಡರಲ್ಲಿ ಮಧ್ಯಮವರ್ಗ ಮತ್ತು ಜನಸಾಮಾನ್ಯ ವರ್ಗದ ಮಹಿಳೆಯರೇ ಅಧಿಕ. ಆರಂಭದಲ್ಲಿ ಬೆರಳೆಣಿಕೆಯಷ್ಟು ವಚನಕಾರರನ್ನು ಹೊಂದಿದ್ದ ವಚನ ಚಳುವಳಿ ಹನ್ನೆರಡನೆಯ ಶತಮಾನದ ಸಂದರ್ಭದಲ್ಲಿ ಒಂದು ದಾಖಲೆಯನ್ನೇ ರೂಪಿಸಿತು. ನೂರಾರು ವಚನಕಾರರೊಂದಿಗೆ ವಚನಕಾರ್ತಿಯರನ್ನೂ ಸೃಷ್ಟಿಸಿತು. ಹೀಗೆ ವಚನಸಾಹಿತ್ಯದ ಸಂದರ್ಭ ಮಹಿಳಾಸಮುದಾಯ ತನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ಪ್ರಧಾನ ವೇದಿಕೆಯಾಯಿತು.

ಯಜಮಾನ ಸಂಸ್ಕೃತಿಯ ಪುರುಷಪರ ಧೋರಣೆಯನ್ನು ವಚನ ಸಾಹಿತ್ಯ ಒಡೆಯಿತು. ಹೀಗೆ ಒಡೆಯುವ ಮೂಲಕ ಮಹಿಳಾಸಮುದಾಯಕ್ಕೆ ವಿಶೇಷ ಸ್ಥಾನಮಾನವನ್ನು ಕಲ್ಪಿಸಿತು. ವಚನಸಾಹಿತ್ಯ ಮಹಿಳಾ ಲೋಕಕ್ಕೆ ಧಾರ್ಮಿಕ ಮತ್ತು ಸಾಮಾಜಿಕ ಮಟ್ಟದ ಅವಕಾಶವನ್ನು ಒದಗಿಸಿಕೊಟ್ಟಿತು. ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳಾಸಮುದಾಯ ಶೋಷಣೆಗೆ ಒಳಗಾಗಿದೆ

ಎಂಬ ವಾಸ್ತವವನ್ನು ವಚನಕಾರರು ಮನಗಂಡರು. ಧಾರ್ಮಿಕ ಕ್ಷೇತ್ರದಿಂದ ಹೊರಗೆ ಉಳಿದ ಮಹಿಳಾ ಜಗತ್ತನ್ನು ಕೇಂದ್ರಕ್ಕೆ ತರುವ ಕೆಲಸ ಮಾಡಿದರು. ಇದರ ಪರಿಣಾಮವಾಗಿ ಅಕ್ಕಮಹಾದೇವಿ ಅನುಭವಮಂಟಪದ ಕೇಂದ್ರಶಕ್ತಿಯಾಗುವ ಹಂತ ತಲುಪುವಂತಾಯಿತು. ಹೀಗೆ ವಚನಕಾರರು ಹೊಸ ಹೊಸ ಮೌಲ್ಯಗಳನ್ನು ಸಮಾಜವ್ಯವಸ್ಥೆಯಲ್ಲಿ ಹುಟ್ಟುಹಾಕುವ ಮೂಲಕ ಸಾಮಾಜಿಕ ಅಭ್ಯುದಯಕ್ಕೆ ಕಾರಣರಾದರು. ಇದರ ಪರಿಣಾಮವಾಗಿ ಹನ್ನೆರಡನೆಯ ಶತಮಾನದ ವಚನಸಾಹಿತ್ಯ ಮತ್ತು ಚಳುವಳಿಯಲ್ಲಿ ಮಹಿಳಾ ಜಗತ್ತಿನ ಸಕ್ರಿಯ ಸಹಭಾಗಿತ್ವ ಸಾಧ್ಯವಾಗುವಂತಾಯಿತು.

ಭಾರತೀಯ ಸಂಸ್ಕೃತಿಯಲ್ಲಿ ಅದರಲ್ಲೂ ಶಿಷ್ಟ ಸಂಸ್ಕೃತಿಯಲ್ಲಿ ಮಹಿಳೆಯರು ದುಡಿಯುವ ಕ್ಷೇತ್ರಕ್ಕೆ ತಮ್ಮನ್ನು ತೊಡಗಿಸಿಕೊಂಡಿದ್ದು ತೀರಾ ವಿರಳ. ಆದರೆ ವಚನಸಾಹಿತ್ಯ ಈ ಶಿಷ್ಟ ಸಂಸ್ಕೃತಿಗೆ ಪರ್ಯಾಯವಾಗಿ ಮಹಿಳೆಗೆ ದುಡಿಯುವ ಅವಕಾಶವನ್ನು ಒದಗಿಸಿತು. ಇದರ ಹಿಂದಿನ ಉದ್ದೇಶ ಸಮಾನತೆಯನ್ನು ಕಾಯ್ದುಕೊಳ್ಳುವುದು ಆಗಿತ್ತು. ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಿ, ರೆಮ್ಮವ್ವೆ, ಸೋಮವ್ವ ಮುಂತಾದ ವಚನಕಾರ್ತಿಯರು ತಮ್ಮನ್ನು ನಿತ್ಯವೂ ಕಾಯಕದಲ್ಲಿ ತೊಡಗಿಸಿಕೊಳ್ಳುತ್ತಿದ್ದರು.

ಸ್ವಾಭಿಮಾನವನ್ನು ಪ್ರಬಲ ಮೌಲ್ಯವಾಗಿ ಸ್ವೀಕರಿಸಿದ ವಚನ ಚಳುವಳಿಯಲ್ಲಿ ಪುರುಷರಿಗೆ ಸರಿಸಮಾನವಾಗಿ ಮಹಿಳೆಯರೂ ಬೆಳೆದುನಿಂತರು. ಶಿವಶರಣರ ಸ್ವಾಭಿಮಾನ ವಚನ ಚಳುವಳಿಯ ತಾತ್ವಿಕ ನಿಲುವುಗಳಿಗೆ ಸಂಬಂಧಿಸಿದ್ದಾಗಿತ್ತು. ವಚನಕಾರ್ತಿಯರು ತಮ್ಮ ಸ್ವಾಭಿಮಾನದಿಂದ ಆ ತಾತ್ತ್ವಿಕ ನಿಲುವುಗಳಿಗೆ ಧ್ವನಿಗೂಡಿಸಿದರು. ಹೀಗೆ ಶಿವಶರಣೆಯರ ಕ್ರಾಂತಿಕಾರಕ ಧೋರಣೆಗಳು ಹನ್ನೆರಡನೆಯ ಶತಮಾನದ ಜೀವನಪರ ಮೌಲ್ಯವಾಗಿ ಪರಿಣಮಿಸಿತು.

ದಾಸ ಸಾಹಿತ್ಯ ಮತ್ತು ಸಾಂಗತ್ಯ ಸಾಹಿತ್ಯದ ಸಂದರ್ಭದಲ್ಲಿ ಮಹಿಳೆಯರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ತದನಂತರ ಹದಿನೇಳನೆಯ ಶತಮಾನದಲ್ಲಿ ಮಹಿಳಾ ದನಿ ಕೇಳಿಬಂದದ್ದು ಸಂಚಿಹೊನ್ನಮ್ಮನ 'ಹದಿಬದೆಯ ಧರ್ಮ' ಎಂಬ ಸಾಂಗತ್ಯ ಸಾಹಿತ್ಯದಲ್ಲಿ. ಪತಿ ಪಾಲಿಸಬೇಕಾದ ನಿಯಮಗಳ ಕುರಿತು ಮಾತನಾಡುತ್ತಾ ಸ್ತ್ರೀಸಮುದಾಯದ ಪರವಾಗಿ ನಿಂತವಳು ಸಂಚಿ ಹೊನ್ನಮ್ಮ. ಅವಳು ಪ್ರತಿಪಾದಿಸಿರುವ ತಾತ್ವಿಕ ಚಿಂತನೆಗಳು ಇಂದಿಗೂ ಪ್ರಸ್ತುತ.

ಭಕ್ತಿಯುಗ ಸಾಹಿತ್ಯದಲ್ಲಿ ಸ್ತ್ರೀಸಮುದಾಯ ತನ್ನನ್ನು ಗರಿಷ್ಠ ಪ್ರಮಾಣದಲ್ಲಿ ತೊಡಗಿಸಿತು ಎನ್ನಬೇಕು. ಭಾರತದ ಬೇರೆ ಬೇರೆ ಭಾಗದಲ್ಲಿ ಬೆಳೆದ ಅನುಭಾವ ಪರಂಪರೆಯಲ್ಲಿ ಮುಖ್ಯವಾಗಿ ಆಂಡಾಳ್, ಕಾರಿಕಾಲೆಮ್ಮ, ಮೀರಾಬಾಯಿ, ಮುಕ್ತಾಬಾಯಿ, ಜಿನಬಾಯಿ, ಮೃಗನಯನೆಯರನ್ನು ಹೆಸರಿಸಬಹುದು. ದಾಸ ಸಾಹಿತ್ಯ ಮತ್ತು ಸಾಂಗತ್ಯ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹಿಳಾ ಬರಹಗಾರ್ತಿಯರಲ್ಲಿ ಮುಖ್ಯವಾಗಿ ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಹರಪನ ಹಳ್ಳಿ ಭೀಮವ್ವ, ಭಾಗವ್ವ, ಚೆಲ್ಲಮ್ಮ, ಕುರುಡಿ ಶಂಕ್ರವ್ವ, ಓರುಬಾಯಿ ಲಕ್ಷ್ಮೀಬಾಯಿ, ಗಣಪಕ್ಕ, ಸುಂದರಿ ಬಾಯಿ, ಕೋಲಾರ ಪದ್ಮಾವತಮ್ಮನವರನ್ನು ಹೆಸರಿಸಬಹುದು.

ಪ್ರಥಮ ಮಹಿಳಾ ದಾಸರಾಗಿರುವ ಗಲಗಲಿ ಅವ್ವನವರು 'ಉಗಾಭೋಗ ಸೇತುಬಂಧನ', 'ಮುಯ್ಯ ಒಯ್ದ ಹಾಡು', 'ಮುಯ್ಯ ತಿರುಗಿಸಿದ ಹಾಡು' ಮತ್ತು 'ಕೋಲು ಹಾಡು'ಗಳೆಂದು ಇನ್ನೂರ ಅರವತ್ತಾರು ಹಾಡುಗಳನ್ನು ರಚಿಸಿದ್ದಾರೆ. 'ಹೆಳವನಕಟ್ಟೆ ರಂಗ' ಎಂಬ ಅಂಕಿತದಲ್ಲಿ ಕಾವ್ಯ ರಚಿಸಿದ ಹೆಳವನಕಟ್ಟೆ ಗಿರಿಯಮ್ಮ 'ಕೃಷ್ಣ ಕೊರವಂಜಿ', 'ಬ್ರಹ್ಮ ಕೊರವಂಜಿ', 'ಉದ್ದಾಳಕನ ಕಥೆ', 'ಸೀತಾ ಕಲ್ಯಾಣ', 'ಲವಕುಶರ ಕಾಳಗ', 'ಚಂದ್ರಹಾಸನ ಕಥೆ' ರಚಿಸಿದ್ದಾರೆ. ಹರಪನಹಳ್ಳಿ ಭೀಮವ್ವ ಭೀಮೇಶ ಕೃಷ್ಣ ಎಂಬ ಅಂಕಿತದಲ್ಲಿ 'ನಳಚರಿತ್ರೆ', 'ಪತಿದಾನ ಕೊಟ್ಟ ಹಾಡು', 'ರತಿ ಕಲ್ಯಾಣ', 'ಸುಭದ್ರಾ ಕಲ್ಯಾಣ', 'ಶಕುಂತಲೆ ದುಷ್ಯಂತ ಮಹಾರಾಜನ ಹಾಡು' ಮುಂತಾದ ಕಾವ್ಯಗಳನ್ನು ರಚಿಸಿದ್ದಾರೆ. ವಚನಸಾಹಿತ್ಯ ಗಂಡು ಹೆಣ್ಣಿನ ಸಂಬಂಧವನ್ನು ವಿವಿಧ ಆಯಾಮದಲ್ಲಿ ಕಟ್ಟಿಕೊಟ್ಟಿದೆ. ಭಕ್ತಿಪಂಥದ ವಿಶೇಷತೆ ಎಂದರೆ ಗಂಡು ಹೆಣ್ಣಾಗುವ ಪ್ರಕ್ರಿಯೆ. ಸ್ತ್ರೀಸಂವೇದನೆಯನ್ನು ಭಕ್ತಿ ಸಾಹಿತ್ಯ ಪರಂಪರೆ ಕಟ್ಟಿಕೊಟ್ಟಿದೆ ಎನ್ನಬೇಕು. ಪ್ರಸ್ತುತ ದಾಸಸಾಹಿತ್ಯದ ಛಾಪು ಇಂದಿಗೂ ಉಳಿದಿದೆ ಎಂದರೆ ಅದಕ್ಕೆ ಕಾರಣೀಭೂತರು ಮಹಿಳೆಯರು. ಇಂದಿಗೂ ಕೀರ್ತನೆಗಳನ್ನು ಹಾಡಿ ಮನೆಮನೆಗಳಲ್ಲಿ, ಮನಮನಗಳಲ್ಲಿ ಅದನ್ನು ಉಳಿಸಿ ಬೆಳೆಸಿದ ಕೀರ್ತಿ ಮಹಿಳಾಸಮುದಾಯಕ್ಕೆ ಸಲ್ಲುತ್ತದೆ.

ಜನಪದ ಸಾಹಿತ್ಯ ಹೆಣ್ಣಿನ ಬದುಕಿನ ವಿವಿಧ ಮುಖಗಳನ್ನು ಪರಿಚಯಿಸಿದೆ. ಹೆಣ್ಣನ್ನು ಹೊಗಳಿರುವ ಅಥವಾ ತೆಗಳಿರುವ ಜನಪದ ಹಾಡನ್ನು ಕಟ್ಟಿರುವವರು ಶ್ರಮಿಕವರ್ಗದ ಮಹಿಳೆಯರೇ ಆಗಿದ್ದಾರೆ. ಮದುವೆ, ತವರುಮನೆ ಇತ್ಯಾದಿ ವಿಚಾರಗಳೇ ಜನಪದ ಮಹಿಳೆಯರಿಗೆ ಪ್ರಮುಖ ಅಂಶವಾಯಿತು. ಜನಪದ ಕಥೆಗಳಲ್ಲಿ ಹೆಣ್ಣನ್ನು ಬಹಳ ಶಕ್ತಿಶಾಲಿಯಾಗಿ ನಿರೂಪಿಸಲಾಗಿದೆ. ಜನಪದ ಗೀತೆಗಳು ಹೆಣ್ಣಿನ ಬದುಕಿನ ತಲ್ಲಣ, ಹತಾಶೆ, ನೋವನ್ನು ಮಾತ್ರ ಹೇಳಿಲ್ಲ. ಇದರೊಂದಿಗೆ ಆಕೆಯ ಹೋರಾಟದ ಹಾದಿಯನ್ನು

ನಿರೂಪಿಸಿದೆ. ಅಭಿಮಾನ ಮತ್ತು ಆತ್ಮವಿಶ್ವಾಸದ ನೆಲೆಯಲ್ಲಿ ಜನಪದ ಗೀತೆಗಳು ಸ್ತ್ರೀಸಮುದಾಯದ ಬದುಕನ್ನು ಕಟ್ಟಿಕೊಟ್ಟಿದೆ.

ನಂಜನಗೂಡು ತಿರುಮಲಾಂಬಾ, ಆರ್. ಕಲ್ಯಾಣಮ್ಮ, ಸರಸ್ವತಿಬಾಯಿ ರಾಜವಾಡೆ, ಶ್ಯಾಮಲಾದೇವಿ, ಸರಸ್ವತಿದೇವಿ ಗೌಡರ್ ಇವರು ಕನ್ನಡದ ಮೊದಲ ತಲೆಮಾರಿನ ಲೇಖಕಿಯರು. ಸೃಜನೇತರ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಮಹಿಳಾ ಬರವಣಿಗೆಯ ಕ್ಷೇತ್ರವನ್ನು ವಿಸ್ತರಿಸಿದರು. ಬದುಕಲ್ಲಿ ಎದುರಾದ ಆತಂಕವನ್ನು ದಿಟ್ಟತನದಿಂದ ಎದುರಿಸಿ ಸಾಹಿತ್ಯ, ಶಿಕ್ಷಣ, ಪ್ರಕಾಶನ, ಸಮಾಜಸೇವೆ ಮುಂತಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ನವೋದಯ ಮತ್ತು ನವ್ಯ ಸಾಹಿತ್ಯ ಪರಂಪರೆಯನ್ನು ಬಂಡಾಯ ಸಾಹಿತ್ಯದೊಂದಿಗೆ ಮುಖಾಮುಖಿಯಾಗಿ ಇರಿಸಿದಾಗ ಬಹುತೇಕ ಪ್ರಮಾಣದಲ್ಲಿ ಸ್ತ್ರೀಸಮುದಾಯ ತನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದು ಬಂಡಾಯ ಸಾಹಿತ್ಯದ ಸಂದರ್ಭದಲ್ಲೇ ಎಂದು ಹೇಳಬೇಕು. ಬಂಡಾಯ ಚಳುವಳಿ ಮಹಿಳಾ ಅಸ್ತಿತ್ವ, ಹಕ್ಕು, ಬದುಕು ಮತ್ತು ಅವಕಾಶಗಳ ಕುರಿತು ಚಿಂತನೆ ನಡೆಸಲು ಅವಕಾಶ ಕಲ್ಪಿಸಿತು. ಬಹುತೇಕ ಮಧ್ಯಮ ಮತ್ತು ದಲಿತ ವರ್ಗದ ಮಹಿಳೆಯರು ಈ ಚಳುವಳಿಯ ಮೂಲಕ ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಯಿತು. ಈ ಸಂದರ್ಭದಲ್ಲಿ ಮಹಿಳಾ ಬರಹಗಾರ್ತಿಯರಿಗೆ ತಮ್ಮ ಬದುಕಿನ ಪ್ರಶ್ನೆ ಎದುರಾಯಿತು. ತಮ್ಮ ಚಿಂತನೆಗಳಿಗೆ ಬರಹ ರೂಪ ಕೊಡುವ ಮೂಲಕ ಮಹಿಳಾ ಸ್ಥಿತಿಗತಿಯನ್ನು ಜಗತ್ತಿಗೆ ತೋರ್ಪಡಿಸುವ ಕೆಲಸ ಮಾಡಿದರು. ಕೌಟುಂಬಿಕ ಅನ್ಯಾಯಗಳಿಂದ ತೊಡಗಿ ಸಾಮಾಜಿಕ ಅನ್ಯಾಯವನ್ನು ಹತ್ತಿಕ್ಕುವ ಉದ್ದೇಶ ಈ ಹೋರಾಟಕ್ಕೆ ಇತ್ತು. ಮೊದಲ ಬಾರಿಗೆ ತಮಗಾದ ಅನ್ಯಾಯದ ವಿರುದ್ಧ ಮಹಿಳಾ ಸಮುದಾಯ ಸಿಡಿದೆದ್ದದ್ದು ಬಂಡಾಯ ಸಾಹಿತ್ಯದ ಮೂಲಕವೇ. ಸ್ತ್ರೀವಾದಿ ಸಾಹಿತ್ಯದಲ್ಲಿ ಹೆಣ್ಣಿನ ಚಿಂತನೆ ಮುಖ್ಯವಾಗಿ ಎರಡು ವಿಚಾರಗಳನ್ನು ಮುಂದಿಡುತ್ತದೆ.

೧. ಹೆಣ್ಣಿನ ಕುರಿತು ಸಮಾಜ ಹೊಂದಿರುವ ಪೂರ್ವಗ್ರಹವನ್ನು ಒಡೆಯುವುದು.

೨. ಹತ್ತಿಕ್ಕಲ್ಪಟ್ಟ ಮಹಿಳಾ ಬದುಕನ್ನು ಮುನ್ನೆಲೆಗೆ ತರುವುದು.

ಪ್ರಸ್ತುತ ಸಾಹಿತ್ಯ ಸಂದರ್ಭದಲ್ಲೂ ಮಹಿಳಾಕೂಗು ಕೇಳಿಬರುತ್ತಿದೆ. ಸಾಹಿತ್ಯ ಮುಖೇನ ತಮ್ಮ ಬದುಕು ಭಾವವನ್ನು ಕಟ್ಟಿಕೊಡುವ ಕೆಲಸ ಮಹಿಳಾ ಬರಹಗಾರ್ತಿಯರಿಂದ ನಡೆಯುತ್ತಿದೆ. ಪ್ರಸ್ತುತ ಸೃಜನೇತರ ಬರವಣಿಗೆಯ ಮೂಲಕ ಮಹಿಳಾ ಬರಹಗಾರ್ತಿಯರು ತಮ್ಮ ಸಂವೇದನೆಯನ್ನು ಅಭಿವ್ಯಕ್ತಿಸುತ್ತಿದ್ದಾರೆ. ಹಕ್ಕು, ಸಾಮರ್ಥ್ಯ, ಶಕ್ತಿಯ ನೆಲೆಗಳನ್ನು

ಬರವಣಿಗೆಯ ಮೂಲಕ ಕಂಡುಕೊಂಡ ಮಹಿಳಾಸಮುದಾಯ ಸಾಹಿತ್ಯ ಕ್ಷೇತ್ರಕ್ಕೆ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡುತ್ತಿದೆ.

ಸ್ತ್ರೀವಾದಿ ಸಾಹಿತ್ಯದಲ್ಲಿ ಬಂಡಾಯ ಮನೋಧರ್ಮ ಅಭಿವ್ಯಕ್ತಗೊಂಡಿದೆ. ಹೆಣ್ಣಿನ ಬದುಕನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ವಿವೇಚಿಸಿದ ಈ ಸಾಹಿತ್ಯ ಚಳುವಳಿ ಶತಮಾನಗಳ ಹೆಣ್ಣಿನ ರೋದನವನ್ನು ಅರ್ಥೈಸಿಕೊಂಡಿದೆ. ಸ್ತ್ರೀಸಮುದಾಯದ ಕುರಿತು ಆಧುನಿಕ ಯುಗದ ಹೊಸ ಹೊಸ ಸಮಸ್ಯೆಗಳು ಮಹಿಳಾ ಬರಹಗಾರ್ತಿಯರನ್ನು ಬೇಗ ತಲುಪುತ್ತಿದೆ. ಚಾರಿತ್ರಿಕ ವಿಶ್ಲೇಷಣೆಯಿಂದ ತಮಗಾದ ಅನ್ಯಾಯವನ್ನು ವಿವೇಚಿಸುತ್ತಾ ಅದಕ್ಕೆ ಪರಿಹಾರ ಕಂಡು ಹುಡುಕುವ ನೆಲೆಯಲ್ಲಿ ಸ್ತ್ರೀವಾದಿ ಸಾಹಿತ್ಯ ಬೆಳೆದಿದೆ.

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ನಡೆದ ರಾಜಕೀಯ ಮತ್ತು ಸಾಮಾಜಿಕ ಬೆಳವಣಿಗೆಗಳು ಹೆಣ್ಣಿನ ಬದುಕಲ್ಲಿ ಹೊಸತನವನ್ನು ತಂದವು. ಬಹುಸಂಖ್ಯಾತ ಮಹಿಳೆಯರು ತಮ್ಮನ್ನು ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಪರಿಣಾಮ ಅನಿಷ್ಟ ಸಾಮಾಜಿಕ ಪದ್ಧತಿಗಳ ಪುನರ್‌ಪರಿಶೀಲನೆ ಸಾಧ್ಯವಾಯಿತು. ರಾಷ್ಟ್ರೀಯ ಆಂದೋಲನ, ಶಿಕ್ಷಣ ಮತ್ತು ಆಧುನಿಕ ಚಿಂತನೆಗಳೆಲ್ಲವೂ ಮಹಿಳೆಯರ ಬದುಕಿನ ಮೇಲೆ ಪ್ರಭಾವ ಬೀರಿದ ಅಂಶಗಳೇ ಆಗಿವೆ. ಇದರ ಪರಿಣಾಮದಿಂದಾಗಿ ಮಹಿಳೆ ತನ್ನನ್ನು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವಂತಾಯಿತು.

### ೪.೩ ಸಾಮಾಜಿಕ

ಲಿಂಗ ಅಸಮಾನತೆ ಸಮಾಜದಲ್ಲಿ ಹುಟ್ಟಿಕೊಂಡ ಆತಂಕ ತರುವ ವ್ಯವಸ್ಥೆಯಾಗಿದೆ. ಪರಿಣಾಮ ಮಾನವ ಸಂಬಂಧಗಳೇ ನಶಿಸಿವೆ. ಪುರುಷನನ್ನು ಪ್ರಧಾನವಾಗಿ ಸ್ವೀಕರಿಸಿದ ಸಾಮಾಜಿಕವ್ಯವಸ್ಥೆ ಮಹಿಳೆಯನ್ನು ಅಧೀನತೆಯ ನೆಲೆಯಲ್ಲಿಯೇ ನಿರೂಪಿಸಿದೆ. ಪುರುಷವರ್ಗ ತನಗೆ ಸಲ್ಲದ್ದನ್ನು ಮಹಿಳಾಸಮುದಾಯದಿಂದ ಅಪೇಕ್ಷಿಸುವುದಿಲ್ಲ. ಸತಿಯಾದವಳು ಪತಿಯನ್ನು ಕೇಂದ್ರೀಕರಿಸಿ ನಡೆಯಬೇಕು ಎಂಬುದು ಪುರುಷನಿಷ್ಠ ಸಮಾಜದ ಧೋರಣೆ. ಈ ಕಾರಣದಿಂದ ಗರಿಷ್ಠ ಪ್ರಮಾಣದ ಪರಿಶ್ರಮ, ಕಣ್ಣೀರು, ಮೌನ, ಸಹನೆಯನ್ನು ಮಹಿಳೆಯರಿಂದ ಅಪೇಕ್ಷಿಸಲಾಗುತ್ತದೆ. ಶ್ರೇಷ್ಠ-ಕನಿಷ್ಠ ಪರಿಕಲ್ಪನೆಯ ನೆಲೆಯಲ್ಲಿ ಹೆಣ್ಣಿನ ಬದುಕನ್ನು ಕನಿಷ್ಠ ಮಟ್ಟದಲ್ಲಿ ನಡೆಸಿಕೊಳ್ಳಲಾಗಿದೆ. ಪ್ರಸ್ತುತ ಸುಧಾರಿತ ಪುರುಷಪ್ರಧಾನ ಸಮಾಜವೂ ಅವಕಾಶ ಸಿಕ್ಕಲ್ಲೆಲ್ಲ ಸ್ತ್ರೀಯರ ಬದುಕನ್ನು ತುಳಿಯುತ್ತಾ ಬಂದಿದೆ. ಮನೆಗೆಲಸ, ಹೊರಗೆಲಸ, ವೃದ್ಧರ ಚಾಕರಿ, ಮಕ್ಕಳ ಲಾಲನೆ ಪೋಷಣೆಯ ಜವಾಬ್ದಾರಿಯನ್ನು ಆಕೆಯ ಮೇಲೆ ಹೊರಿಸಿದೆ. ಈ ವ್ಯವಸ್ಥೆಗೆ ಬದ್ಧರಾಗದ ಮಹಿಳೆಯರನ್ನು ಕ್ಷುಲ್ಲಕ

ಭಾವದಿಂದ ಕಾಣಲಾಗುತ್ತದೆ. ಕುಟುಂಬ ವ್ಯವಸ್ಥೆಯ ಒಳಗೆ ಪುರುಷಕೃತ ಅಪರಾಧಗಳಿಗೆ ಸಾಕಷ್ಟು ಕ್ಷಮೆ ಮತ್ತು ಅವಕಾಶಗಳು ದಕ್ಕುತ್ತವೆ. ಮಹಿಳೆಯರ ವಿಚಾರದಲ್ಲಿ ಈ ಔದಾರ್ಯ ಇಲ್ಲ. ಕುಟುಂಬ ವ್ಯಾಪ್ತಿಯಲ್ಲಿ ತೀರ್ಮಾನ ಕೈಗೊಳ್ಳುವ ಹಕ್ಕು ಪುರುಷನಿಗೇ ಸೇರಿರುತ್ತದೆ. ಈ ಅಧಿಕಾರ ಮನೆಯ ಯಜಮಾನಿ ಎನಿಸಿದವಳಿಗೆ ಇರುವುದಿಲ್ಲ. ಸಂದರ್ಭಾನುಸಾರಿಯಾಗಿ ಸ್ವಹಿತವನ್ನು ಪರಿಗಣಿಸಿ ನಿಯಮಾವಳಿಗಳನ್ನು ರೂಪಿಸುವ ಮತ್ತು ಬದಲಾಯಿಸುವ ಹಕ್ಕನ್ನು ಪುರುಷಪ್ರಧಾನ ಸಮಾಜ ಪುರುಷರಿಗೆ ನೀಡಿದೆ.

ಸಾಮಾಜಿಕ ಪಿಡುಗುಗಳಾದ ಹೆಣ್ಣು ಶಿಶುಹತ್ಯೆ, ವರದಕ್ಷಿಣೆಯಂತಹ ಜ್ವಲಂತ ಸಮಸ್ಯೆಗಳು ಬಹುಬೇಗ ಜನಮನವನ್ನು ಸೆಳೆಯುತ್ತವೆ. ಆದರೆ ಕೌಟುಂಬಿಕ ವ್ಯಾಪ್ತಿಯಲ್ಲಿ ನಡೆಯುವ ಹಿಂಸೆ ಶೋಷಣೆ ಎನಿಸುವುದಿಲ್ಲ. ಭಾವಕೋಶದ ವ್ಯಾಪ್ತಿಗೆ ಒಳಪಡುವ ಕೌಟುಂಬಿಕರಿಂದ, ರಕ್ತ ಸಂಬಂಧಿಕರಿಂದ ಮಹಿಳಾಶೋಷಣೆ ನಡೆಯುತ್ತಿರುತ್ತದೆ. ಕುಟುಂಬವ್ಯವಸ್ಥೆಯಲ್ಲಿ ಮಹಿಳೆಯರಿಗೆ ಅಡ್ಡಿ ಆತಂಕ ಉಂಟುಮಾಡುವ ಕಾರ್ಯಕ್ಷೇತ್ರಗಳು ಹೆಚ್ಚು. ಇದನ್ನು ಹಿಂಸೆ ಎಂದು ಯಾರೂ ಪರಿಗಣಿಸುವುದಿಲ್ಲ, ಕಾರಣ ಬಂಧುತ್ವದ ಪರಿಕಲ್ಪನೆ ಮನಸ್ಸನ್ನು ಕುರುಡಾಗಿಸುತ್ತದೆ. ಇಲ್ಲಿ ಸಂಬಂಧಗಳ ಅಳಿವು ಉಳಿವಿನ ಪ್ರಶ್ನೆ ಮುಖ್ಯವಾಗುತ್ತದೆ. ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆ ಗಂಡು ಮತ್ತು ಹೆಣ್ಣಿನ ನಡುವೆ ಅಸಮಾನತೆಯನ್ನು ಕಲ್ಪಿಸಿ ಅಂತರವನ್ನು ಸೃಷ್ಟಿಸಿದೆ. ಪರಿಣಾಮ ಮೇಲು–ಕೀಳು ಭಾವಗಳು ಉಳಿಯುವಂತಾಗಿದೆ. ಹೀಗೆಯೇ ಮುಂದುವರಿದ ಪರಿಣಾಮ ಒಂದುವರ್ಗ ಶೋಷಕ ಸಮುದಾಯವಾಗಿಯೂ ಇನ್ನೊಂದುವರ್ಗ ಶೋಷಿತ ಸಮುದಾಯವಾಗಿಯೂ ಕಾಣಿಸುವಂತಾಗಿದೆ. ಕುಟುಂಬವ್ಯವಸ್ಥೆಯ ಒಳಗೆ ಹೆಣ್ಣು ಹೇಗೆ ಬದುಕಬೇಕು ಎಂದು ತರಬೇತಿಗೊಳಿಸಲಾಗುತ್ತದೆ. ಹೆಂಡತಿಯಾಗಿ, ತಾಯಿಯಾಗಿ ಆಕೆಗೆ ಸಹನೆಯ ಪಾಠ ಹೇಳಿಕೊಡಲಾಗುತ್ತದೆ. ಹೀಗೆ ತರಬೇತಿ ನೀಡುವಲ್ಲಿ ಅವಳ ವೈಯಕ್ತಿಕ ಆಸೆ, ಆಕಾಂಕ್ಷೆ, ಅಭಿಪ್ರಾಯ, ಅವಕಾಶಗಳಿಗೆ ಆದ್ಯತೆ ನೀಡಲಾಗುವುದಿಲ್ಲ. ಈ ನಿಟ್ಟಿನಲ್ಲಿ ಅವಳ ಬದುಕಿನ ರೂಪುರೇಷೆಯ ಕಟ್ಟುವಿಕೆ ಆಕೆಯ ಕುಟುಂಬಿಕರಿಂದಲೇ ನಡೆಯುತ್ತದೆ. ಪ್ರಸ್ತುತ ಶಿಕ್ಷಣ ಮತ್ತು ಉದ್ಯೋಗ ಅವಕಾಶ ಪಡೆದ ಮಹಿಳೆ ಆತಂಕಕಾರಿ ವ್ಯವಸ್ಥೆಯಿಂದ ಇನ್ನೂ ಬಿಡುಗಡೆ ಹೊಂದಿಲ್ಲ. ಮನೆಯೊಳಗಿನ ಜವಾಬ್ದಾರಿ ಹಂಚಿಕೆಯಾಗಿಲ್ಲ. ಬಹುಪಾಲು ಕೌಟುಂಬಿಕ ಜವಾಬ್ದಾರಿಯನ್ನು ಹೊರುವವರು ಮಹಿಳೆಯರೇ ಆಗಿರುತ್ತಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವೊಮ್ಮೆ ಅಸಹನೀಯ ಸಂದರ್ಭವನ್ನು ಮಹಿಳೆ ಎದುರಿಸಬೇಕಾದ ಪ್ರಮೇಯ ಎದುರಾಗುತ್ತದೆ. ಇಂಥ ಸಂದರ್ಭದಲ್ಲಿ ತನ್ನ ಪ್ರತಿಭಟನೆಯನ್ನು ಸಾರಾಸಗಟಾಗಿ ವ್ಯಕ್ತಪಡಿಸಲು ಆಕೆಗೆ ಸಾಧ್ಯವಾಗುವುದಿಲ್ಲ. ಹೀಗಾದಾಗ ಮಹಿಳೆಯರಲ್ಲಿ ವರ್ತನಾ ಸಮಸ್ಯೆಗಳಿಂದ ತೊಡಗಿ ಬಹುತೇಕ ಮಾನಸಿಕ ಸಮಸ್ಯೆಗಳು ಸಂಭವಿಸುವ ಪ್ರಮೇಯವೂ ಹೆಚ್ಚು.

ಮುಂಚೆ ದ್ರಾವಿಡ ಭಾಷಾ ಲಿಂಗವಿವಕ್ಷೆಯಲ್ಲಿ ಎರಡು ಬಗೆಯ ಲಿಂಗಗಳನ್ನು ಗುರುತಿಸಲಾಗಿತ್ತು. ಬುದ್ಧಿಯ ನೆಲೆಯಲ್ಲಿ ಮಾನ್ಯ ಮತ್ತು ಅಮಾನ್ಯ ಎಂದು ವಿಭಾಗಿಸಲಾಗಿತ್ತು. ಬುದ್ಧಿಜೀವಿಗಳು ಎಂಬ ಅರ್ಥದಲ್ಲಿ ಪುರುಷರನ್ನು ಮಾನ್ಯ ಎನ್ನಲಾಗಿತ್ತು. ಬುದ್ಧಿಹೀನತೆಯ ನೆಲೆಯಲ್ಲಿ ಮರಮಟ್ಟು, ಮಕ್ಕಳೊಂದಿಗೆ ಮಹಿಳೆಯರನ್ನೂ ಸೇರಿಸಿ ಅಮಾನ್ಯ ಎಂದು ಪರಿಗಣಿಸಲಾಗಿತ್ತು. ಪುರುಷರನ್ನು ಪುಲ್ಲಿಂಗದ ನೆಲೆಯಲ್ಲಿ, ಮಹಿಳೆಯರನ್ನು ನಪುಂಸಕ. ಲಿಂಗದ ನೆಲೆಯಲ್ಲಿ ಗುರುತಿಸಲಾಗಿತ್ತು. ತದನಂತರ ಮಾರ್ಪಾಟಿಗೆ ಒಳಗಾದ ಪರಿಣಾಮ ಮಹಿಳೆಯರನ್ನು ಸ್ತ್ರೀಲಿಂಗದ ನೆಲೆಯಲ್ಲಿ ಗುರುತಿಸುವಂತಾಯಿತು.

ಪುರುಷರು ಸಮಾಜವನ್ನು ನೋಡುವ ಕ್ರಮಕ್ಕೂ ಸ್ತ್ರೀಯರು ಸಮಾಜವನ್ನು ನೋಡುವ ಕ್ರಮಕ್ಕೂ ವ್ಯತ್ಯಾಸವಿದೆ. ಸಮಾಜ ಕುರಿತ ಪುರುಷ ಚಿಂತನೆಗಳು ಏಕಮುಖಿ ನೆಲೆಯಲ್ಲಿ ಪ್ರವಹಿಸಿವೆ. ಅದರ ಇನ್ನೊಂದು ಮುಖವನ್ನು ಸ್ತ್ರೀವಾದಿ ಚಿಂತನೆ ಕಟ್ಟಿಕೊಡುತ್ತದೆ. ಎಂಭತ್ತರ ದಶಕದವರೆಗಿನ ಎಲ್ಲ ಚಿಂತನೆಗಳು ಪುರುಷಕೇಂದ್ರಿತವಾದವು. ಮಾತೃಪ್ರಧಾನ ಕುಟುಂಬವ್ಯವಸ್ಥೆ ಮಹಿಳಾಸಮುದಾಯಕ್ಕೆ ಆದ್ಯತೆ ನೀಡಿತ್ತು. ತದನಂತರ ಮಾರ್ಪಾಟಿಗೆ ಒಳಗಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ರೂಪು ತಳೆಯಿತು. ಪ್ರಸ್ತುತ ಕುಟುಂಬ ವ್ಯವಸ್ಥೆ ಲಿಂಗಾಧಾರಿತ ಅಸಮಾನತೆಯಿಂದ ಕೂಡಿದೆ. ಮಹಿಳಾಸಮುದಾಯದ ಮೇಲೆ ವಿಧಿಸಿರುವ ಕಟ್ಟುಪಾಡು, ವಿಧಿ ನಿಷೇಧಗಳು ಪ್ರಸ್ತುತ ಸಡಿಲಗೊಂಡಿಲ್ಲ. ಪುರುಷ ಕೇಂದ್ರಿತ ಸಾಮಾಜಿಕ ವ್ಯವಸ್ಥೆಯ ನಿಯಮಗಳಿಗೆ ಬದ್ಧರಾದ ಮಹಿಳೆಯರನ್ನು ಅನುಕಂಪದ ನೆಲೆಯಲ್ಲಿ ಸಮಾಜ ಸ್ವೀಕರಿಸಿದೆ.

ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಬ್ರಿಟಿಷ್ ಇಂಡಿಯಾದ ಎಲ್ಲಾ ಭಾಗಗಳಲ್ಲೂ ಭಾರತೀಯ ಸುಧಾರಣಾವಾದಿಗಳು ಕಾಣಿಸಿಕೊಂಡರು. ಈ ಸಂದರ್ಭದಲ್ಲಿ ಭಾರತದಲ್ಲಿ ಅಸ್ತಿತ್ವದಲ್ಲಿ ಇದ್ದ ಹೆಣ್ಣುಶಿಶು ಹತ್ಯೆ, ಸತಿ ಪದ್ಧತಿ, ಬಹುಪತ್ನಿತ್ವ, ಬಾಲ್ಯವಿವಾಹ, ಸ್ತ್ರೀಶಿಕ್ಷಣಕ್ಕೆ ಇದ್ದ ನಿರ್ಬಂಧ, ದೇವದಾಸಿ ಪದ್ಧತಿಗಳಿಂದ ಮಹಿಳಾಸಮುದಾಯದ ಸ್ಥಿತಿಗತಿ ದುಸ್ತರವಾಗಿತ್ತು. ಈ ಸಂದರ್ಭದಲ್ಲಿ ಮಹಿಳಾ ಸ್ಥಿತಿಗತಿಯ ಸುಧಾರಣೆಗಾಗಿ ಅಖಿಲ ಭಾರತ ಮಟ್ಟದ ಸುಧಾರಣಾವಾದಿ ಸಂಘ ಸಂಸ್ಥೆಗಳು ಹುಟ್ಟಿಕೊಂಡವು.

ಭಾರತದ ಮಹಿಳೆಯರ ಸ್ಥಿತಿಗತಿಯ ಸುಧಾರಣೆಗಾಗಿ ಶ್ರಮಿಸಿದವರಲ್ಲಿ ಪುರುಷ ಸುಧಾರಣಾವಾದಿಗಳು ಸೇರಿದ್ದಾರೆ. ಬಂಗಾಲದ ಈಶ್ವರಚಂದ್ರ ವಿದ್ಯಾಸಾಗರರು ಸ್ತ್ರೀಶಿಕ್ಷಣಕ್ಕೆ ಆದ್ಯತೆ ನೀಡಿದರು. ವಿಧವಾ ವಿವಾಹಕ್ಕೆ ಆದ್ಯತೆ ನೀಡುತ್ತಾ ಅದನ್ನು ಕಾಯಿದೆಬದ್ಧಗೊಳಿಸಲು ಶ್ರಮಿಸಿದರು. ಉತ್ತರಭಾರತದಲ್ಲಿ ಆರ್ಯ ಸಮಾಜದ ಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರು ಸ್ತ್ರೀಶಿಕ್ಷಣಕ್ಕೆ ಮಹತ್ವ ನೀಡಿದರು. ವರದಕ್ಷಿಣೆ, ಬಹುಪತ್ನಿತ್ವದಂತಹ

ಅನಿಷ್ಠ ಪದ್ಧತಿಗಳ ನಿರ್ಮೂಲನಕ್ಕಾಗಿ ಶ್ರಮಿಸಿದರು. ಪೂನಾದಲ್ಲಿ ಧೋಂಡು ಕೇಶವ ಕರ್ವೆಯವರು ಬಾಲವಿಧವೆಯವರ ಶಿಕ್ಷಣಕ್ಕೆ ಆದ್ಯತೆ ಇತ್ತರು. ಹೀಗೆ ಶಿಕ್ಷಣ ಪಡೆದು ಬಾಲಕಿಯರ ಶಾಲೆಗೆ ಅಧ್ಯಾಪಕಿಯಾಗುವಂತೆ ಮಾರ್ಗದರ್ಶನ ನೀಡಿದರು. ದಕ್ಷಿಣ ಇಂಡಿಯಾದಲ್ಲಿ ಆರ್. ವೆಂಕಟರತ್ನಂ ನಾಯ್ಡುರವರು ದೇವದಾಸಿ ಪದ್ಧತಿಯ ನಿರ್ಮೂಲನಕ್ಕಾಗಿ ಶ್ರಮಿಸಿದರು. ಹೀಗೆ ಭಾರತದ ಉದ್ದಗಲಕ್ಕೂ ಮಹಿಳಾ ಸ್ಥಿತಿಗತಿಯ ಸುಧಾರಣೆಗಾಗಿ ಹೋರಾಟಗಳು ಕಂಡುಬಂದವು.

ಮಹಿಳಾ ಸ್ಥಿತಿಗತಿಯ ಕುರಿತು ಸಾಹಿತ್ಯ, ಭಾಷಣ, ಸಾರ್ವಜನಿಕ ಸಭೆ, ಮಹಿಳಾ ಸಮಾವೇಶಗಳಲ್ಲಿ ಚರ್ಚೆ ನಡೆಯುತ್ತಿವೆ. ಸಂಪ್ರದಾಯ ಮತ್ತು ಮೌಢ್ಯತೆಯ ಪರಿಣಾಮ ಮಹಿಳೆಯರ ಬದುಕಿನ ಮೇಲೆ ಗರಿಷ್ಠ ಪ್ರಮಾಣದಲ್ಲಿ ಆಗುತ್ತಿದೆ. ಇವು ಪುರುಷಪರ ಲಾಭವನ್ನು ಕೇಂದ್ರೀಕರಿಸಿ ರೂಪಿಸಿದ ಮಾನದಂಡಗಳು. ಸ್ತ್ರೀ-ಪುರುಷ ಅಸಮಾನತೆ ಜೈವಿಕವಾದುದಲ್ಲ, ಸಾಮಾಜಿಕವಾದುದು. ಮುಂಚೆ ಗರಿಷ್ಠ ಪ್ರಮಾಣದ ಶ್ರಮ, ಚಾಕರಿಯನ್ನು ಗಂಡನ ಮನೆಯವರು ಅಪೇಕ್ಷಿಸುತ್ತಿದ್ದರು. ಪ್ರಸ್ತುತ ಉದ್ಯೋಗಸ್ಥ ಮಹಿಳೆಯ ಸಂಬಳವನ್ನು ಲಾಭದ ನೆಲೆಯಲ್ಲಿ ಅಪೇಕ್ಷಿಸುತ್ತಿದ್ದಾರೆ. ಮಹಿಳೆಯರ ವಿಚಾರದಲ್ಲಿ ಗುಣ, ವಿದ್ಯೆ, ಶಕ್ತಿ, ಅಂತರ್‌ಸತ್ವ ಗೌಣವಾಗಿ ಆರ್ಥಿಕ ಮೊತ್ತವೇ ಪ್ರಧಾನವಾಗಿದೆ. ಶೀಲ ಮತ್ತು ಪಾತಿವ್ರತ್ಯಕ್ಕೆ ಮಾನ್ಯತೆ ನೀಡುತ್ತಾ ಮಹಿಳೆಯರ ಬುದ್ಧಿ, ಕೌಶಲ್ಯ ಮತ್ತು ಸಾಮರ್ಥ್ಯವನ್ನು ಕಸಿಯಲಾಗಿದೆ.

ಸಮಾಜ ಹೆಣ್ಣನ್ನು ಕಾಣುವ ಬಗೆಯ ಕುರಿತು ನೇಮಿಚಂದ್ರರು ತಮ್ಮದೇ ಆದ ನಿಲುವುವನ್ನು ತಳೆದಿದ್ದಾರೆ. "ಒಂದು ಸಮಾಜದಲ್ಲಿ ಹುಟ್ಟಿಕೊಳ್ಳುವ ಪ್ರಧಾನ ಸಂಸ್ಕೃತಿಯ ನಂಬಿಕೆಗಳು 'ಸಹಜ'ವೆಂಬಂತೆ 'ಸಾರ್ವತ್ರಿಕ'ವೆಂಬಂತೆ ಪ್ರಸರಿಸಿ ಹೆಣ್ಣು, ಸಂಸ್ಕೃತಿ ಕಡೆದಿಟ್ಟ ರೂಪ ಎಂಬುದನ್ನು ಮರೆಸಿ, 'ಹೆಣ್ತನ'ಕ್ಕೆ ಪ್ರಕೃತಿಸಹಜತೆಯನ್ನು ಅಂಟಿಸಿದವು. 'ಮಕ್ಕಳನ್ನು ಹೆರುವ ಹೆಣ್ಣು, ಮಕ್ಕಳ ಪೋಷಣೆಯ ಜವಾಬ್ದಾರಿಯನ್ನೂ ಹೊರಬೇಕು' ಎಂಬ ಪುರುಷ ಸಮಾಜದ ನಿರೀಕ್ಷೆ, 'ಹೆಣ್ಣು ಮಕ್ಕಳನ್ನು ಹೆರುವುದರಿಂದ ಸಹಜವಾಗಿಯೇ ಮಕ್ಕಳ ಪೋಷಣೆಯಲ್ಲಿ ಅತ್ಯಂತ ಸುಖಿಯಾಗುತ್ತಾಳೆ' ಎಂದು ಸಾರಿದವು. ಈ ನಿರೀಕ್ಷೆಗೆ ವಿಪರೀತವಾದ ಹೆಂಗಸರನ್ನು ಅಂದರೆ ಬಂಜೆಯರನ್ನು, ಅವಿವಾಹಿತೆಯರನ್ನು, ಮಕ್ಕಳು ಬೇಡದವರನ್ನು ಇಂದಿಗೂ ನಮ್ಮ ಸಮಾಜ ನೋಡುವ ದೃಷ್ಟಿಯಲ್ಲಿ ಈ ಶತಮಾನಗಳ ಪ್ರಧಾನಸಂಸ್ಕೃತಿಯ ದಟ್ಟಛಾಯೆಯನ್ನು ಕಾಣಬಹುದು"೧. (ನೇಮಿಚಂದ್ರ ೨೦೦೧ : ೧೩) ನೇಮಿಚಂದ್ರರ ವಿಚಾರವನ್ನು ಸ್ವೀಕರಿಸುತ್ತಾ ವಿಸ್ತರಿಸುವುದಾದರೆ ಹೆರದ ಹೆಣ್ಣನ್ನು ಸಮಾಜ ನೋಡುವ ದೃಷ್ಟಿಯೇ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ಸಾಮಾಜಿಕರ ದೃಷ್ಟಿಕೋನ ಸ್ತ್ರೀಸಮುದಾಯದ ಅಂತರಂಗಭಾವವನ್ನು ಕೇಂದ್ರೀಕರಿಸಿರುವುದಿಲ್ಲ. ಗರ್ಭಧರಿಸುವ, ಹೆರುವ,

ಪೋಷಿಸುವ, ಕೌಟುಂಬಿಕ ಜವಾಬ್ದಾರಿ ಹೊರುವ ಉದ್ದೇಶಕ್ಕೆ ಆಕೆಯ ಬದುಕನ್ನು ಸೀಮಿತಗೊಳಿಸಲಾಗುತ್ತದೆ. ಈ ಮೂಲಕ ಅವಳ ವೈಯಕ್ತಿಕ ನೆಲೆಯ ಶಕ್ತಿ ಸಾಮರ್ಥ್ಯಗಳನ್ನು ಅಡಗಿಸಲಾಗಿದೆ.

## ೪.೪ ಸಾಂಸ್ಕೃತಿಕ

ಹುಟ್ಟುವಾಗ ಮಾನವ ಸಹಜ ಎಂಬಂತೆ ಬೆಳೆಯುತ್ತಾ ಸಂಪ್ರದಾಯದ ಜಾಡಲ್ಲಿ ಸಿಕ್ಕು ಒದ್ದಾಡುವ ದಾರುಣ ಸ್ಥಿತಿ ಮಹಿಳಾಸಮುದಾಯದ್ದು. ಈ ಬಗೆಯ ನಲುಗುವಿಕೆಯ ಹಿಂದೆ ಪುರುಷರ ಶಕ್ತಿರಾಜಕಾರಣ ಕೆಲಸ ಮಾಡಿದೆ. ಪರಿಣಾಮ ಮಹಿಳೆಯರ ಸಾಂಸ್ಕೃತಿಕ ಬದುಕಿನ ಮೇಲಾಗಿದೆ. ಹೆಣ್ಣು ಹೀಗೆಯೇ ಇರಬೇಕು ಎಂಬ ಸಿದ್ಧ ಮಾದರಿಯಯನ್ನು ಪ್ರೋತ್ಸಾಹಿಸುವವರು ಹಲವರು. ವ್ಯವಸ್ಥೆಯನ್ನು ಒಡೆಯುವಲ್ಲಿ ಕೈ ಜೋಡಿಸುವವರು ಕೆಲವೇ ಕೆಲವು ಮಂದಿ. ಅವಿವಾಹಿತೆಗಿಂತ ವಿವಾಹಿತೆ ಶ್ರೇಷ್ಠ. ವಿಧವೆಗಿಂತ ಮುತ್ತೈದೆ ಶ್ರೇಷ್ಠ. ಇತ್ಯಾದಿ ಕುರುಡು ನಂಬಿಕೆಗಳು ಇಂದಿಗೂ ಉಳಿದಿವೆ. ಹೀಗೆ ವಿವಾಹಕ್ಕೆ ಸಂಬಂಧಿಸಿದ ಕ್ಷೇತ್ರವ್ಯಾಪ್ತಿಯ ಒಳಗೆ ಮಹಿಳಾ ಅಸ್ತಿತ್ವವನ್ನು ಗುರುತಿಸಲಾಗುತ್ತಿದೆ. ತಂದೆಯ, ಪತಿಯ, ಸುತನ ನೆಲೆಯಿಂದ ಗುರುತಿಸಿಕೊಳ್ಳುವ ಮಹಿಳೆಗೆ ಸ್ವತಂತ್ರ ಅಸ್ತಿತ್ವದ ಪ್ರಶ್ನೆ ಮುಖ್ಯವಾಗುವುದಿಲ್ಲವೇ? ಎಂಬ ಪ್ರಶ್ನೆ ಮೂಡುತ್ತದೆ.

ವಿವಾಹ ಹೆಣ್ಣಿನ ಬದುಕನ್ನು ಅಳೆಯುವ ಮಾನದಂಡವಾಗಬಾರದು. ಪ್ರಸ್ತುತ ವಿವಾಹವ್ಯವಸ್ಥೆ ಮಹಿಳಾಸ್ವಾತಂತ್ರ್ಯವನ್ನು ಕಸಿಯುತ್ತಿದೆ. ವಿವಾಹಕ್ಕೆ ಸಂಬಂಧಿಸಿದಂತೆ ಬೇಕು-ಬೇಡಗಳನ್ನು ನಿರ್ಧರಿಸುವ ಹಕ್ಕು ಆಕೆಗೆ ಇರಬೇಕು. ಪ್ರಸ್ತುತ ವಿವಾಹಪೂರ್ವದ ಬದುಕನ್ನು ನಿರ್ಧರಿಸುವವರು ಆಕೆಯ ಹೆತ್ತವರೇ ಆಗಿರುತ್ತಾರೆ. ವಿವಾಹೋತ್ತರ ಬದುಕಲ್ಲಿ ಈ ಹಕ್ಕು ಆಕೆಯ ಪತಿಯ ಕಡೆಯವರದಾಗಿ ಬಿಡುತ್ತದೆ. ಹೀಗಿರುವಾಗ ಅವಳ ವೈಯಕ್ತಿಕ ತೀರ್ಮಾನಗಳಿಗೆ ಅವಕಾಶ ಇಲ್ಲವಾಗಿಬಿಡುತ್ತದೆ. ದೇವರು, ಧರ್ಮ, ಪೂಜೆ, ಆಚರಣೆಯ ಹೆಸರಿನಲ್ಲಿ ಮಹಿಳೆಯರಿಗೆ ಆತಂಕ ಉಂಟುಮಾಡುವ ಕಾರ್ಯಕ್ಷೇತ್ರಗಳೇ ಹೆಚ್ಚು. ಈ ಇಬ್ಬಂದಿತನದ ದ್ವಂದ್ವದಿಂದ ಆಕೆ ದೂರ ಉಳಿಯಲಾರಳು ಎಂಬುದು ಸಾರ್ವತ್ರಿಕ ಅಭಿಪ್ರಾಯ. ಈ ಸಂಸ್ಥೆಯಿಂದ ಹೊರತುಪಡಿಸಿದ ಬದುಕನ್ನು ಊಹಿಸಲಾಗದ ಮಟ್ಟಕ್ಕೆ ಆಕೆಯನ್ನು ಮಾನಸಿಕವಾಗಿ ದುರ್ಬಲಗೊಳಿಸಲಾಗುತ್ತದೆ. ಹೆಣ್ಣಿನ ಬದುಕಲ್ಲಿ ವಿವಾಹ ಎನ್ನುವುದು ವಿಸ್ತರಣೆಯಾಗಿಲ್ಲ. ಬದಲಿಗೆ ಆಕೆಯು ಬದುಕನ್ನು ಅಳೆಯುವ ಮಾನದಂಡವಾಗಿದೆ. ಪುರುಷನ ವಿಚಾರ ಹಾಗಲ್ಲ. ಬದುಕಿನ ಹಲವು ಮಗ್ಗುಲುಗಳಲ್ಲಿ ವಿವಾಹವೂ ಒಂದು. ಒಬ್ಬ ಅವಿವಾಹಿತನಿಗೆ ಸಿಗುವ ಸ್ಥಾನಮಾನ, ಗೌರವ ಒಬ್ಬ ಅವಿವಾಹಿತೆಗೆ ದಕ್ಕುತ್ತಿಲ್ಲ. ಧಾರ್ಮಿಕ ಆಚರಣೆಗಳೊಂದಿಗೆ ಮಹಿಳೆಯರ ಬದುಕನ್ನು ಬೆಸೆಯಲಾಗಿದೆ.

ಹಬ್ಬ ಹರಿದಿನಗಳ ಸಂಭ್ರಮ ಮಹಿಳೆಯರಿಗೆ ದಕ್ಕಿದೆಯೇ? ಎಂಬುದು ಪ್ರಧಾನ ಪ್ರಶ್ನೆ. ಹಬ್ಬದ ಸಂದರ್ಭದಲ್ಲಿ ಉಳಿದ ದಿನಗಳಿಗಿಂತ ಹೆಚ್ಚಿನ ಜವಾಬ್ದಾರಿ ಆಕೆಯ ಮೇಲಿರುತ್ತದೆ. ಭಕ್ಷ್ಯಭೋಜ್ಯ ತಯಾರಿಕೆಯ ಸೀಮಿತ ಉದ್ದೇಶದಲ್ಲೇ ಆಕೆ ಸಂತೋಷ ಕಾಣಬೇಕಾದ ಪರಿಸ್ಥಿತಿ ಒದಗಿದೆ. ಹೀಗಾದಲ್ಲಿ ಮಹಿಳೆಯರ ವೈಯುಕ್ತಿಕ ಹಿತಾಸಕ್ತಿಗಳನ್ನು ಪರಿಗಣಿಸಿದಂತಾಯಿತೇ? ಎಂಬುದನ್ನು ಮನಗಾಣಬೇಕು.

ಸಾಹಿತ್ಯ ಮತ್ತು ಪುರಾಣಗಳಲ್ಲಿ ಮಹಿಳೆಯರನ್ನು ಮಾತೆಯಾಗಿ, ಮಾಯೆಯಾಗಿ ನಿರ್ವಚಿಸಲಾಗಿದೆ. ಆದರೆ ವಾಸ್ತವವಾಗಿ ಅಂತರಂಗದಲ್ಲಿ ಮಾತೆ ಎಂಬ ಭಾವ ಉಳಿದಿದೆಯೆ? ಎಂಬುದು ಮುಖ್ಯ ಪ್ರಶ್ನೆ. ಹೊರನೋಟಕ್ಕೆ ಮಾತೆಯಾಗಿ ಪರಿಕಲ್ಪಿಸಿ ವಾಸ್ತವದಲ್ಲಿ ಅನ್ಯತ್ರ ಭಾವಿಸುವ ನಿದರ್ಶನಗಳಿವೆ. ಸ್ತ್ರೀಯನ್ನು ಮಾಯೆಯಾಗಿ ನಿರ್ವಚಿಸುವಾಗಲೂ ಮನುಷ್ಯ ಸ್ವಭಾವದಿಂದ ಬಹುದೂರ ಉಳಿಸಲಾಗುತ್ತದೆ. ಈ ಬಗೆಯ ನಿರೂಪಣೆಯ ಹಿಂದೆ ಪುರುಷ ಪ್ರಾಬಲ್ಯ ಕೆಲಸ ಮಾಡಿರುತ್ತದೆ. ತಮ್ಮ ಇತಿಮಿತಿಗಳಿಗೆ ಬದ್ಧರಾದ ಮಹಿಳೆಯರನ್ನು ಸಾಧ್ವಿ, ಮಹಾಮಾತೆ, ಪತಿವ್ರತೆ ಎಂಬುದಾಗಿ ನಿರೂಪಿಸಲಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ವ್ಯವಸ್ಥೆಯ ದೋಷವನ್ನು ಪರಿಗ್ರಹಿಸಿದ ಸ್ತ್ರೀಸಮುದಾಯವನ್ನು ರಕ್ಕಸಿ, ಮಾಯೆಯಾಗಿ ನಿರ್ವಚಿಸಲಾಗಿದೆ.

ವೇದಕಾಲದ ಯಜ್ಞಯಾಗಾದಿಗಳಲ್ಲಿ ಭಾಗವಹಿಸುವ ಅವಕಾಶ ಮಹಿಳೆಯರಿಗೆ ಇತ್ತು. ಮಧ್ಯಕಾಲೀನ ಭಾರತದ ಸಂದರ್ಭದಲ್ಲಿ ಮಹಿಳೆಯರನ್ನು ಈ ಅವಕಾಶಗಳಿಂದ ಬಹುದೂರ ಉಳಿಸಲಾಯಿತು. ಸ್ತ್ರೀಯರನ್ನು ದೇವಿ ಅಥವಾ ರಕ್ಕಸಿಯಾಗಿ ನಿರೂಪಿಸುತ್ತಾ ಮಾನವಸಹಜ ಗುಣಗಳನ್ನು ತಳ್ಳಿಹಾಕಲಾಗಿದೆ. ದೈವತ್ವದ ಪರಿಕಲ್ಪನೆಯ ನೆಲೆಯಲ್ಲಿ ಶಕ್ತಿದೇವತೆಯಾಗಿ ಕಾಣತ್ತಾ ಆಕೆಯಲ್ಲಿ ಅಂತರ್ಗರ್ಭಿತವಾಗಿರುವ ಮಾನವೀಯ ನೆಲೆಗಳನ್ನು ಅಡಗಿಸಲಾಗಿದೆ. ಹೆಣ್ಣು ಹೀಗೆಯೆ ಇರಬೇಕು ಎಂಬ ಸಿದ್ಧ ಮಾದರಿಯ ಚೌಕಟ್ಟಿನ ಒಳಗೆ ಮಹಿಳೆಯನ್ನು ಬಂಧಿಯಾಗಿಸಲಾಗಿದೆ. ಸಾಮಾಜಿಕ ಅಸಮಾನತೆಯನ್ನು ಪ್ರಶ್ನಿಸುವ, ಪ್ರತಿಭಟಿಸುವ ಮಹಿಳಾ ಪಾತ್ರಗಳು ಸಾಹಿತ್ಯದಲ್ಲಿ ಕಾಣಿಸಿದ್ದು ವಿರಳ.

ಕೌಟುಂಬಿಕ ಜಗತ್ತು ಮಹಿಳೆಯರಿಗೆ ಕೆಲವು ಅಸಹನೀಯ ಸವಾಲನ್ನು ಒಡ್ಡಿದೆ. ಈ ಸಂದರ್ಭದಲ್ಲಿ ಆಕೆ ಸಹಜವಾಗಿಯೇ ಪ್ರತಿಕ್ರಿಯಿಸುತ್ತಾಳೆ. ಪುರಾಣ, ಸಾಹಿತ್ಯದಲ್ಲಿ ಮಹಿಳೆಯನ್ನು ಶಕ್ತಿದೇವತೆಯಾಗಿ ನಿರೂಪಿಸಲಾಗಿದೆ. ಭಾರತೀಯ ಪರಂಪರೆಯಲ್ಲಿ ಕಲ್ಲಿನ ಮೂರ್ತಿಯಲ್ಲೂ ದೇವಿಯ ರೂಪವನ್ನು ಕಾಣುವ ಪ್ರಯತ್ನ ಇದೆ. ಮಾತ್ರವಲ್ಲ ಆರಾಧಿಸಲಾಗುತ್ತದೆ ಕೂಡಾ. ವಾಸ್ತವವಾಗಿ ಮಹಿಳೆಯರ ಕುರಿತು ಆರಾಧನಾ ಭಾವ ಇದೆಯೇ? ಇದಕ್ಕೆ ಉತ್ತರ ಕಂಡುಕೊಳ್ಳ ಹೊರಟಲ್ಲಿ ಪ್ರಸ್ತುತ ಮಹಿಳಾಬದುಕಿನ ಸ್ಥಿತಿಗತಿಯ ಅರಿವಾಗುತ್ತದೆ.

ಪುರುಷಸಮುದಾಯದ ಅನುಭವಗಳಿಗೆ ಇತಿಹಾಸದುದ್ದಕ್ಕೂ ಪ್ರಾಶಸ್ತ್ಯ ಕಲ್ಪಿಸಲಾಗಿದೆ. ಸ್ತ್ರೀಸಮುದಾಯದ ಸಾಧನೆ ಮತ್ತು ಅನುಭವಗಳಿಗೆ ಕನಿಷ್ಠ ಮಟ್ಟದ ಆದ್ಯತೆ ಇದೆ. ಪಿತೃಪ್ರಧಾನ ಕುಟುಂಬವ್ಯವಸ್ಥೆಯ ಎಲ್ಲಾ ನಿಯಮಗಳು ಪುರುಷವರ್ಗದ ಪರವಾಗಿಯೇ ಇದೆ. ಆದ್ದರಿಂದ ಪುರುಷಸಮುದಾಯದ ವೈಯಕ್ತಿಕ ಆಸೆ, ಆಕಾಂಕ್ಷೆ, ಅನಿಸಿಕೆಗಳಿಗೆ ಅಧಿಕ ಮಹತ್ವ ದಕ್ಕಿದೆ.

**೪.೫ ಆರ್ಥಿಕ**

ಮಹಿಳಾಸಮುದಾಯ ವೃತ್ತಿರಂಗದಲ್ಲಿ ತನ್ನನ್ನು ತೊಡಗಿಸಿಕೊಂಡದ್ದು ಬ್ರಿಟಿಷ್ ಅಧಿಪತ್ಯದ ಪರಿಣಾಮದಿಂದಲೇ ಎಂದು ಹೇಳಬೇಕು. ವಸಾಹತುಶಾಹಿ ಆಡಳಿತದ ಪರಿಣಾಮ ಸಾಂಪ್ರದಾಯಿಕ ಆರ್ಥಿಕ ವ್ಯವಸ್ಥೆಯ ಮೇಲಾಯಿತು. ಇದರಿಂದ ಮಹಿಳಾಸಮುದಾಯ ತನ್ನನ್ನು ಉದ್ಯೋಗ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳುವಂತಾಯಿತು. ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಮಹಿಳಾಸಮುದಾಯ ತನ್ನನ್ನು ತೊಡಗಿಸಿಕೊಳ್ಳುವಂತಾಯಿತು. ಕಾರ್ಖಾನೆ, ತೋಟಗಾರಿಕೆ ಮತ್ತು ಗಣಿಗಾರಿಕೆಯಲ್ಲಿ ಮಹಿಳೆ ಗರಿಷ್ಠ ಪ್ರಮಾಣದಲ್ಲಿ ತನ್ನನ್ನು ತೊಡಗಿಸಿಕೊಳ್ಳುವಂತಾಯಿತು. ಸಮಾಜಸೇವೆ ಮತ್ತು ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರಯ ಭಾಗವಹಿಸಲು ಕಾರಣ ಅವರ ಕುಟುಂಬದ ಸದಸ್ಯರ ಪ್ರೋತ್ಸಾಹ ಎನ್ನಬೇಕು. ಆದರೆ ಸ್ವಂತ ತೀರ್ಮಾನಗಳನ್ನು ಕೈಗೊಳ್ಳುವ ಅವಕಾಶವಾಗಲಿ, ಆರ್ಥಿಕ ಸ್ವಾತಂತ್ರ್ಯವಾಗಲಿ ಮಹಿಳೆಯರಿಗೆ ಇರಲಿಲ್ಲ.

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಮಹಿಳಾ ಶಿಕ್ಷಣಕ್ಕೆ ಪ್ರಾಶಸ್ತ್ಯ ದೊರೆಯಿತು. ಆದರೂ ಸಂಪೂರ್ಣ ಮಹಿಳಾ ಸಾಕ್ಷರತೆ ಸಾಧಿಸಲು ಸಾಧ್ಯವಾಗಲಿಲ್ಲ. ಆರ್ಥಿಕ ಅಭದ್ರತೆ, ಸಮಯದ ಅಭಾವ, ಗರಿಷ್ಠ ಮಟ್ಟದ ಶ್ರಮ, ಆರೋಗ್ಯ ಸಮಸ್ಯೆ ಮಹಿಳಾ ಶಿಕ್ಷಣಕ್ಕೆ ಕುತ್ತನ್ನು ತಂದೊದಗಿದೆ. ಕೌಟುಂಬಿಕ ಸಮಸ್ಯೆ ಒಂದೆಡೆಯಾದರೆ ಔದ್ಯೋಗಿಕ ವಲಯದ ಕಿರುಕುಳ ಮತ್ತೊಂದೆಡೆ ಮಹಿಳೆಯರನ್ನು ಕಾಡುತ್ತಿದೆ. ಸ್ವಂತಿಕೆಗೆ ಬೆಲೆ ಪಡೆದುಕೊಳ್ಳಲಾರದ ಅಸಹಾಯಕ ಸ್ಥಿತಿಯಲ್ಲಿ ಮಹಿಳೆಯರ ಬದುಕು ದುಸ್ತರವಾಗುತ್ತಿದೆ. ಪರರ ಆಸೆ, ಅಭೀಪ್ಸೆಗಳಿಗೆ ತನ್ನನ್ನು ಒಡ್ಡಿಕೊಳುತ್ತಾ ಅಸಹನೀಯ ಬದುಕು ನಡೆಸಬೇಕಾದ ಪ್ರಮೇಯ ಒದಗಿದೆ.

ಮಹಿಳೆಯರ ಆರ್ಥಿಕ ಬದುಕಿಗೆ ಸಂಬಂಧಿಸಿದಂತೆ ಡಾ। ಕಿಶೋರಿ ನಾಯಕರ ವಿಚಾರಗಳು ಹೀಗಿವೆ. "ಆರ್ಥಿಕ ದೃಷ್ಟಿಯಿಂದ ಗಮನಿಸುದಾದರೆ, ಸ್ತ್ರೀಯರು ಮಾಡುವ ಮನೆಯ ಒಳಗಿನ ಮತ್ತು ಹೊರಗಿನ ಕೆಲಸಗಳೆರಡೂ ಅಪಮೌಲ್ಯಕ್ಕೊಳಗಾದವುಗಳು. ಉದಾಹರಣೆಗೆ ಹೆಂಗಸರು ಸೆಗಣಿಯನ್ನು ಒಟ್ಟು ಹಾಕಿ ಅದನ್ನ ಇಂಧನವಾಗಿ

ಉಪಯೋಗಿಸಿದಾಗ ಅದಕ್ಕೆ ಆರ್ಥಿಕ ಬೆಲೆ ಬರುವುದಿಲ್ಲ. ಇದೇ ಕೆಲಸವನ್ನು ಒಂದು ಕಾರ್ಖಾನೆಯ ಮೂಲಕ ಕೈಗೊಂಡಾಗ (ಸಾಮಾನ್ಯವಾಗಿ ಪುರುಷ) ಅದಕ್ಕೆ ಆರ್ಥಿಕ ಮೌಲ್ಯ ಬರುತ್ತದೆ. ಅಲ್ಲದೆ ಮಹಿಳೆಯರು ಗಂಡಸರೊಡನೆ ಸಮಾನವಾಗಿ ದುಡಿದರೆ ಅವರಿಗೆ ಸಿಗುವ ಕೂಲಿ ಅಥವಾ ಸಂಭಾವನೆ ಗಂಡಸರಿಗಿಂತ ಬಹಳ ಕಡಿಮೆ"೨. (ಡಾ। ಕಿಶೋರಿ ನಾಯಕ್ ಕೆ. ೧೯೯೭ : ೭) ಡಾ। ಕಿಶೋರಿ ನಾಯಕ್‌ರ ಅಭಿಪ್ರಾಯವನ್ನು ವಿಸ್ತರಿಸುವುದಾದರೆ ಸ್ತ್ರೀದುಡಿಮೆಗೆ ಸಾಮಾಜಿಕ ಸ್ಥಾನಮಾನ ದೊರೆತಿಲ್ಲ ಎಂದೇ ಹೇಳಬೇಕು. ಒಂದು ಕೆಲಸವನ್ನು ಕರ್ತವ್ಯದ ದೃಷ್ಟಿಯಿಂದ ಸ್ತ್ರೀಯರಿಗೆ ಆರೋಪಿಸಿದರೆ ಉದ್ಯೋಗದ ದೃಷ್ಟಿಯಿಂದ ಪುರುಷರು ನಿರ್ವಹಿಸುತ್ತಾರೆ. ಅಡುಗೆತಯಾರಿ, ಪೂಜೆ ಪುನಸ್ಕಾರಾದಿಗಳಿಗೆ ಪುರುಷರು ನಿರ್ದಿಷ್ಟ ಮೊತ್ತವನ್ನು ಪಡೆಯುತ್ತಾರೆ. ಕರ್ತವ್ಯದ ದೃಷ್ಟಿಯಿಂದ ಆರೋಪಿಸಿರುವ ಕೆಲಸವನ್ನು ಕುಟುಂಬ ವ್ಯಾಪ್ತಿಯಲ್ಲಿ ನಿರಾಕರಿಸಿದ ಮಹಿಳೆ ಅಪರಾಧಿ ಸ್ಥಾನದಲ್ಲಿ ನಿಲ್ಲುತ್ತಾಳೆ. ಕೃಷಿ, ಸಣ್ಣಪುಟ್ಟ ಕೈಗಾರಿಕೆ, ಕಾರ್ಖಾನೆಗಳಲ್ಲಿ ಮಹಿಳೆಯರಿಂದ ಗರಿಷ್ಠ ಪ್ರಮಾಣದ ದುಡಿಮೆಯನ್ನು ಅಪೇಕ್ಷಿಸಲಾಗುತ್ತದೆ. ಪುರುಷರಿಗಿಂತ ಕಡಿಮೆ ವೇತನ ನಿಗದಿಪಡಿಸಲಾಗುತ್ತದೆ. ಹೆಣ್ಣು ಮಾಡುವ ಮನೆಕೆಲಸಕ್ಕೆ ಆಕೆ ನಗದು ರೂಪದ ಮೊತ್ತವನ್ನು ಪಡೆಯಲಾರಳು. ಆದ್ದರಿಂದ ನಮ್ಮ ಸಮಾಜದ ಆರ್ಥಿಕ ವ್ಯವಸ್ಥೆ ಆಕೆಯ ಕೆಲಸವನ್ನು ದುಡಿಮೆ ಎಂದು ಪರಿಗಣಿಸಿಲ್ಲ. ಶ್ರಮದ ನೆಲೆಯಲ್ಲಿ ಪರಿಗ್ರಹಿಸಿಲ್ಲ. ಯಾವುದೇ ಮೊತ್ತ ಪಡೆಯದೇ ಮಹಿಳೆಯರು ಮಾಡುವ ಕೆಲಸಗಳು ಹೆಣ್ಣಿನ ಖಾಸಗಿ ಕೆಲಸಗಳಾಗಿಯೇ ಕಾಣಿಸುತ್ತವೆ.

ಒಬ್ಬ ಮಹಿಳೆಯ ಬದುಕನ್ನು ಅಭ್ಯಾಸ ಮಾಡುವಾಗ ಪೂರ್ವಗ್ರಹಗಳಿಂದ ದೂರ ಉಳಿಯಬೇಕು. ಅಳಿವು-ಉಳಿವಿನ ಪ್ರಶ್ನೆ ಎದುರಾದಾಗ ಮಹಿಳೆ ತನ್ನ ಕೌಟುಂಬಿಕ ಜವಾಬ್ದಾರಿಯಿಂದ ಕಳಚಿಕೊಳ್ಳುವುದಿಲ್ಲ. ದೂರ ಉಳಿಯುವುದೂ ಇಲ್ಲ. 'ಯಜಮಾನಿ' ಎಂಬ ನಾಮಫಲಕವನ್ನು ಹೊತ್ತು ಆಕೆ ಪಡುವ ಯಾತನೆ, ಬವಣೆಗೆ ಮಿತಿಯಿಲ್ಲ. ಔದ್ಯೋಗಿಕ ವಲಯದ ಅಸಮಾನತೆ ನೀಗಬೇಕು. ದುಡಿಮೆ ಮತ್ತು ದುಡಿಮೆಯ ಪ್ರತಿಫಲದಲ್ಲಿ ಸಮಾನ ಅವಕಾಶ ದೊರೆಯಬೇಕು. ಸ್ತ್ರೀವಿಮೋಚನೆ ಎಂಬುದು ಪುರುಷರ ವಿಮೋಚನೆಯೂ ಹೌದು. ಔದ್ಯೋಗಿಕ ವಲಯದಲ್ಲಿ ಆಕೆ ಮಾನಸಿಕ ಕಿರುಕಳ ಎದುರಿಸಬೇಕಾದ ಸಂದರ್ಭವೂ ಇದೆ. ಈ ಬಗೆಯ ಕ್ರೌರ್ಯ ಆಕೆಯ ಮನೋವ್ಯಾಪ್ತಿಯ ಮೇಲೆ ಕಠಿಣತಮ ಪರಿಣಾಮ ಬೀರುತ್ತದೆ. ಇದರಿಂದ ಅವಳ ಸಮಗ್ರ ಬದುಕೇ ಜಂಜಡವಾಗಿ ಬಿಡುತ್ತದೆ.

ಔದ್ಯೋಗಿಕ ವಲಯದಲ್ಲಿ ಆಕೆಯ ಬುದ್ಧಿಮತ್ತೆಯ ಮೇಲೆ ಸವಾರಿ ನಡೆಯುತ್ತಿದೆ. ಪಕ್ಷಪಾತ ನೀತಿಯ ಪರಿಣಾಮ ಆಕೆ ಉದ್ಯೋಗದಿಂದ ಕಳಚಿಕೊಳ್ಳುವಂತಾಗಿದೆ. ವಿದ್ಯಾವಂತ ಉದ್ಯೋಗಸ್ಥ ಮಹಿಳೆಯರು ಯಾವುದೇ ವಿಚಾರದ ಕುರಿತು ಸುಲಭವಾಗಿ ತೀರ್ಮಾನ

ತೆಗೆದುಕೊಳ್ಳುವಂತಿಲ್ಲ. ಕೌಟುಂಬಿಕ ಒತ್ತಡ, ಸಮಯದ ಅಭಾವ, ಉದ್ಯೋಗ ಕ್ಷೇತ್ರದ ಅತಂತ್ರತೆ, ಕಿರುಕುಳದ ಪರಿಣಾಮ ಆಕೆಯ ಬದುಕಿನ ಮೇಲೆ ಆಗುತ್ತಿದೆ. ಹೀಗೆ ಮನೋಖಿನ್ನತೆಗೆ ಒಳಗಾದ ಪರಿಣಾಮ ಪದೋನ್ನತಿಯನ್ನು ಬಿಟ್ಟುಬಿಡುವ ಸಂದರ್ಭ ಒದಗಿ ಬರುವುದುಂಟು.

ಜಾಹೀರಾತು ಮಾಧ್ಯಮಗಳಲ್ಲಿ ಮಹಿಳೆಯರನ್ನು ಅಶ್ಲೀಲವಾಗಿ ಬಳಸಿಕೊಳ್ಳಲಾಗುತ್ತಿದೆ. ಸೌಂದರ್ಯವರ್ಧಕ ಸಾಧನಗಳ ಜಾಹೀರಾತುಗಳಿಗೆ ಹೆಣ್ಣನ್ನು ಅರೆನಗ್ನ ಸ್ಥಿತಿಯಲ್ಲಿ ಚಿತ್ರಿಸಲಾಗುತ್ತಿದೆ. ಲಾಭಗಳಿಕೆಯ ಉದ್ದೇಶ ಇಲ್ಲಿದೆ. ಹೀಗೆ ಸ್ವಹಿತವನ್ನು ಪರಿಗಣಿಸಿದ ಪುರುಷವರ್ಗ ಮಹಿಳೆಯರನ್ನು ಹೀನಾಯವಾಗಿ ನಿರೂಪಿಸಿದೆ. ಈ ಪ್ರವೃತ್ತಿ ಪುರುಷಪ್ರಭುತ್ವದ ಶಕ್ತಿರಾಜಕಾರಣಕ್ಕೆ ಸಾಕ್ಷಿಯಾಗಿದೆ.

ಪ್ರಸ್ತುತ ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ, ಔದ್ಯೋಗಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಹಿಳೆ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಈ ಮೂಲಕ ಅಸ್ತಿತ್ವ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದಾಳೆ. ಸ್ವತಂತ್ರ ಶಕ್ತಿ, ಸಾಮರ್ಥ್ಯ, ಬುದ್ಧಿ, ಕೌಶಲ್ಯ, ಜಾಣ್ಮೆಯ ಪ್ರತಿಫಲವಾಗಿ ಸಾಮಾಜಿಕ ಸ್ಥಾನಮಾನ ದಕ್ಕಿಸಿಕೊಂಡಿದ್ದಾಳೆ. ಭಿನ್ನ ಭಿನ್ನ ವಲಯಗಳಲ್ಲಿ ಸಮಾನತೆಯನ್ನು ಸಾಧಿಸುವ ಉದ್ದೇಶ ಮಹಿಳಾಸಮುದಾಯಕ್ಕೆ ಇದೆ. ಈ ಉದ್ದೇಶ ಸೀಮಿತ ವ್ಯಾಪ್ತಿಗೆ ನಿಂತುಬಿಡುವುದಿಲ್ಲ. ಪುರುಷ ಸಹಕಾರ, ಸಹಾಯಕ್ಕೆ ಮಣಿದು ಸಮಾನತೆ ಸಾಧಿಸಿದಂತೆ ಆಯಿತು ಎಂದು ಬೀಗುವಂತಿಲ್ಲ. ಸಮಾನತೆಯನ್ನು ಮಾನಸಿಕ ನೆಲೆಯಲ್ಲಿ ಶೋಧಿಸಬೇಕು. ಈ ಶೋಧನೆ ವಿಶಾಲ ದೃಷ್ಟಿಕೋನದಿಂದ ವ್ಯಾಪಕ ನೆಲೆಯಲ್ಲಿ ಸಂಚರಿಸಬೇಕು.

ಮೌಢ್ಯ ಮತ್ತು ಅರ್ಥಹೀನ ಆಚರಣೆಗಳಿಂದ ದೂರ ಉಳಿಯುವ ಮೂಲಕ ಸಾಂಸ್ಕೃತಿಕವಾಗಿ ಮಹಿಳೆಯರ ಬದುಕನ್ನು ಕಟ್ಟಬೇಕಿದೆ. ಈ ಕಟ್ಟುವಿಕೆಯಲ್ಲಿ ಪುರುಷಕೇಂದ್ರಿತ ಚಿಂತನೆಗಳು ಕೆಲಸ ಮಾಡುವಂತಿಲ್ಲ. ಪೂರ್ವಗ್ರಹಗಳಿಂದ ದೂರ ಉಳಿದು ಸ್ತ್ರೀಸಮುದಾಯದ ಶಕ್ತಿಯ ನೆಲೆಗಳನ್ನು ಶೋಧಿಸಬೇಕು. ಈ ಶೋಧನೆ ಮಹಿಳಾಸಮುದಾಯದ ಬದುಕನ್ನು ವಿಶ್ಲೇಷಿಸಬೇಕು. ಪರಿಣಾಮ ಭಿನ್ನ ವಲಯಗಳಲ್ಲಿ ಮಹಿಳಾ ಸಮಾನತೆ ಸಾಧಿಸುವಂತಾಗಬೇಕು. ಸ್ತ್ರೀಯರ ಸಾಧನೆಯ ಸಾಧ್ಯತೆಗಳನ್ನು ಪ್ರೋತ್ಸಾಹಿಸುವ ನಾಗರಿಕ ಸಮುದಾಯ ನಿರ್ಮಾಣವಾಗಬೇಕು. ಸಮಾನತೆಯ ಆಶಯ ಪ್ರತಿಯೋರ್ವ ನಾಗರಿಕನ ಅಂತರಂಗದಲ್ಲಿ ಗಟ್ಟಿಯಾಗಿ ಬೇರೂರಬೇಕು.

### ೪.೬ ರಾಜಕೀಯ

ಶಿಲಾಯುಗದ ಸಂದರ್ಭದಲ್ಲಿ ಬಂಧುತ್ವ ಗಟ್ಟಿಯಾಗಿತ್ತು. ಈ ಸಂದರ್ಭದಲ್ಲಿ ಹೆಣ್ಣಿಗೆ ಸಾಮಾಜಿಕ ಸ್ಥಾನಮಾನ ದಕ್ಕಿತ್ತು. ಬಂಧುತ್ವ ವ್ಯವಸ್ಥೆಯಿಂದ ಕಳಚಿಕೊಳ್ಳುತ್ತಾ ಜಾತಿಸಮುದಾಯಕ್ಕೆ ಆದ್ಯತೆ ದೊರೆಯುತ್ತಾ ಬಂದಂತೆ ಹೆಣ್ಣಿನ ಸ್ಥಾನಮಾನ ಕುಂಠಿತಗೊಳ್ಳಲು ಪ್ರಾರಂಭವಾಯಿತು. ಜಾತಿವ್ಯವಸ್ಥೆಯ ಪರಿಣಾಮ ಹೆಣ್ಣಿಗೆ ಸಾಮಾಜಿಕ ಕಟ್ಟುಪಾಡುಗಳನ್ನು ವಿಧಿಸಲಾಯಿತು. ಊಳಿಗಮಾನ್ಯ ಪದ್ಧತಿ ಅಸ್ತಿತ್ವದಲ್ಲಿದ್ದ ಸಂದರ್ಭದಲ್ಲಿ ಮಹಿಳೆಯನ್ನು ಸರಕಿನ ಮಟ್ಟದಲ್ಲಿಟ್ಟು ನೋಡಲಾಯಿತು. ಈ ಸಂದರ್ಭದಲ್ಲಿ ಮಹಿಳೆಯರಿಗೆ ಯಾವುದೇ ರಾಜಕೀಯಶಕ್ತಿಯ ಪರಿಕಲ್ಪನೆ ಇರಲಿಲ್ಲ. ರಾಜಕೀಯದ ಏಕಸ್ವಾಮ್ಯ ಪುರುಷರ ಅಧೀನದಲ್ಲಿ ಇತ್ತು. ತದನಂತರದ ಬೆಳವಣಿಗೆಯ ಪರಿಣಾಮವನ್ನು ಪ್ರಭುತ್ವಪರಂಪರೆಯ ಸಂದರ್ಭದಲ್ಲಿ ಗುರುತಿಸಲು ಸಾಧ್ಯ. ರಾಜಪ್ರಭುತ್ವದ ಸಂದರ್ಭದಲ್ಲಿ ಮಹಿಳೆಯರಿಗೆ ರಾಜಕೀಯ ಸ್ಥಾನಮಾನವನ್ನು ಕಲ್ಪಿಸಲಾಗಿತ್ತು. ರಾಜಪ್ರಭುತ್ವದ ಸಂದರ್ಭದಲ್ಲಿ ಅರಸನ ತಾಯಿಯಾಗಿ, ಪತ್ನಿಯಾಗಿ, ಸಹೋದರಿಯಾಗಿ ಮಹಿಳೆಯರು ಗೌರವದ ಸ್ಥಾನಮಾನ ಪಡೆದಿದ್ದರು. ರಾಜರ ಆಳ್ವಿಕೆಯ ಕಾಲದಲ್ಲಿ ರಾಜ್ಯರಕ್ಷಣಾ ಜವಾಬ್ದಾರಿಯನ್ನು ಮಹಿಳೆಯರು ಹೊತ್ತಿರುವುದರ ಕುರಿತು ಐತಿಹಾಸಿಕ ದಾಖಲೆಗಳು ಸಿಗುತ್ತವೆ. ಆದರೆ ಈ ಅವಕಾಶ ಕೇವಲ ಅರಸು ಕುಟುಂಬದ ಮಹಿಳೆಯರಿಗೆ ಮಾತ್ರ ಸೀಮಿತವಾಗಿತ್ತು. ಸಾಮಾನ್ಯ ಮಹಿಳೆಗೆ ರಾಜಕೀಯ ಕ್ಷೇತ್ರದಲ್ಲಿ ಅವಕಾಶ ಇರಲಿಲ್ಲ.

ಝಾನ್ಸಿ ರಾಣಿ ಲಕ್ಷ್ಮೀಬಾಯಿ, ಕಿತ್ತೂರು ರಾಣಿ ಚೆನ್ನಮ್ಮ, ಗೇರುಸೊಪ್ಪೆಯ ರಾಣಿ ಬೈರಾದೇವಿ, ಬೆಳವಡಿ ಮಲ್ಲಮ್ಮ, ಕೆಳದಿ ಚೆನ್ನಮ್ಮ, ಉಳ್ಳಾಲದ ರಾಣಿ ಅಬ್ಬಕ್ಕರು ತುಂಡು ಪಾಳೆಗಾರರಾಗಿ ಆಡಳಿತ ನಡೆಸಿದುದರ ವಿವರ ಕಾಣಸಿಗುತ್ತದೆ. ಆದರೆ ಇವರೆಲ್ಲರೂ ರಾಜಕೀಯ ಪ್ರಜ್ಞೆಯಿಂದಲೇ ಅಧಿಕಾರ ಸೂತ್ರವನ್ನು ವಹಿಸಿಕೊಂಡರು ಎಂದು ಹೇಳುವಂತಿಲ್ಲ. ಇವರೆಲ್ಲ ಬಹುತೇಕವಾಗಿ ಪತಿವಿಯೋಗ ಮತ್ತು ಪುತ್ರ ಸಂತಾನವಿಲ್ಲದ ಕಾರಣ ರಾಜ್ಯಾಧಿಕಾರದ ಸೂತ್ರ ಕೈಗೆ ಹಿಡಿದರು. ರಾಜಕೀಯದಲ್ಲಿ ಮಹಿಳೆಯರ ಸಕ್ರಿಯ ಪಾಲ್ಗೊಳ್ಳುವಿಕೆ ಕಂಡದ್ದೇ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ. ವಸಾಹತುಶಾಹಿ ವ್ಯವಸ್ಥೆಯಲ್ಲಿ ರಾಜಕೀಯ ಅಧಿಕಾರದ ಮೇಲಾಟ ಉಳ್ಳವರ ಅಥವಾ ಬಲಾಢ್ಯರ ಸ್ವತ್ತಾಗಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ಸಂದರ್ಭದಲ್ಲಿ ಭಾರತೀಯ ಮಹಿಳೆ ಮತ್ತು ಪುರುಷರಿಬ್ಬರೂ ರಾಜಕೀಯದಿಂದ ಹೊರಗೆ ಉಳಿದಿದ್ದರು. ರಾಜಕೀಯ ಪರಕೀಯರ ಸ್ವತ್ತಾಗಿದ್ದ ಈ ಕಾಲದಲ್ಲಿ ನಡೆದ ರಾಜಕೀಯ ಹೋರಾಟದಲ್ಲಿ ಭಾರತೀಯ ಮಹಿಳೆ ಮತ್ತು ಪುರುಷರಿಬ್ಬರೂ ಪಾಲ್ಗೊಂಡಿದ್ದರು. ಸಾಮಾನ್ಯ ಮಹಿಳೆಯರೇ ಇಲ್ಲಿ ಭಾಗಾಳುಗಳಾಗಿರುವುದು ಗಮನಾರ್ಹ ಅಂಶ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮಹಿಳಾ ಭಾಗಿಗಳ ಸಂಖ್ಯೆ ವಿರಳ ಎಂದೇ

ಹೇಳಬೇಕು. ಆದರೂ ನೇರವಾಗಿ ಗರಿಷ್ಠ ಪ್ರಮಾಣದಲ್ಲಿ ಭಾಗಾಳುಗಳಾಗದ ಮಹಿಳೆಯರು ಗಾಂಧಿ ಹಾಕಿದ ಮಾರ್ಗದಲ್ಲಿ ಮುನ್ನಡೆಯುವ ಮೂಲಕ ತಮ್ಮ ಬದುಕನ್ನು ಸಾರ್ಥಕಪಡಿಸಿಕೊಂಡರು. ಇದರೊಂದಿಗೆ ಮಹಿಳಾಸಮುದಾಯ ತಮ್ಮ ಹೋರಾಟದ ನೆಲೆಗಳನ್ನು ಭಿನ್ನ ಮಾದರಿಗಳಲ್ಲಿ ಕಂಡುಕೊಳ್ಳುವಂತಾಯಿತು. ಖಾದಿಪ್ರಚಾರ, ಮದ್ಯಪಾನ ವಿರೋಧ, ಸ್ವದೇಶಿ ಚಳುವಳಿ, ಸ್ತ್ರೀಜಾಗೃತಿ ಚಳುವಳಿಗಳಲ್ಲಿ ಗರಿಷ್ಠ ಪ್ರಮಾಣದಲ್ಲಿ ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡರು. ಗಾಂಧಿಯವರ ಸತ್ಯಾಗ್ರಹ ಧೋರಣೆಗೆ ಕರ್ನಾಟಕದ ಬಹುತೇಕ ಮಹಿಳೆಯರು ಬದ್ಧರಾದರು. ಈ ಹೋರಾಟದ ಹಾದಿಯಲ್ಲಿ ಕೈಜೋಡಿಸಿದವರಲ್ಲಿ ಕಾರ್ಮಿಕ ಮತ್ತು ಕೆಳಸಮುದಾಯದ ಮಹಿಳೆಯರ ಪಾಲುದಾರಿಕೆಯೇ ಹೆಚ್ಚು.

ಬ್ರಿಟಿಷರನ್ನು ಭಾರತ ಬಿಟ್ಟು ತೊಲಗಿಸುವಲ್ಲಿ ನಡೆದ ಹೋರಾಟದಲ್ಲಿ ಗೃಹಿಣಿಯರ ಪಾತ್ರ ಪ್ರಧಾನವಾದುದು. ಕುಟುಂಬವ್ಯವಸ್ಥೆಯ ವ್ಯಾಪ್ತಿಗೆ ಒಳಪಟ್ಟ ಮಹಿಳೆಯರು ತಮ್ಮ ಕೌಟುಂಬಿಕ ವ್ಯಾಪ್ತಿಯೊಳಗೆ ರಾಷ್ಟ್ರೀಯತಾಭಾವವನ್ನು ಹುಟ್ಟುಹಾಕಿದರು. ಚಳುವಳಿಗಾರರಿಗೆ ಆಶ್ರಯದಾತರಾದರು. ಗಂಡ, ಮಕ್ಕಳನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಉತ್ತೇಜನ ನೀಡಿದರು. ಚರಕದಿಂದ ನೂಲು ತೆಗೆದು ಖಾದಿವಸ್ತ್ರ ನೇಯ್ದರು. ರಾಷ್ಟ್ರೀಯ ಚಳವಳಿಯ ಸಂದರ್ಭದಲ್ಲಿ ಸ್ತ್ರೀಶಿಕ್ಷಣಕ್ಕೆ ಅಧಿಕ ಮಹತ್ವ ನೀಡಲಾಯಿತು. ಮಹಿಳೆಯರು ಸ್ವಾವಲಂಬಿಗಳಾಗಬೇಕು ಎಂಬ ಆಶಯ ಗಾಂಧಿಯದಾಗಿತ್ತು. ಮಹಿಳಾ ಶಿಕ್ಷಣದ ಮೂಲಕ ರಾಷ್ಟ್ರೀಯ ಪ್ರಜ್ಞೆ ಮೂಡಿಸುವುದು ಆ ಸಂದರ್ಭದ ಪ್ರಧಾನ ಉದ್ದೇಶವಾಗಿತ್ತು. ಶಿಕ್ಷಣ ಸ್ತ್ರೀಸಮುದಾಯವನ್ನು ಜಾಗೃತಗೊಳಿಸುವ ಮೂಲಕ ಶೋಷಣೆಯ ವಿರುದ್ಧ ಹೋರಾಡುವ ಶಕ್ತಿ ಒದಗಿಸಿತು.

ಭಾರತೀಯರಿಗೆ ರಾಜಕೀಯದ ಕುರಿತು ಒಂದು ನಿರ್ದಿಷ್ಟ ಅರಿವು ಮೂಡಿದ್ದೇ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ. ಪಾಶ್ಚಿಮಾತ್ಯ ಶಿಕ್ಷಣದ ಪ್ರಭಾವ ಈ ರಾಜಕೀಯ ಪ್ರಜ್ಞೆಯನ್ನು ಮೂಡಿಸುವಂತೆ ಮಾಡಿತು. ರಾಜಕೀಯದಲ್ಲಿ ಸ್ತ್ರೀ-ಪುರುಷರಿಗೆ ಸಂವಿಧಾನದ ಮೂಲಕ ಸಮಾನತೆ ಕಲ್ಪಿಸಿಕೊಡಲಾಯಿತು. ರಾಜ್ಯ, ರಾಷ್ಟ್ರಗಳ ಪರಿಕಲ್ಪನೆ ಬೆಳೆದಂತೆಲ್ಲ ದೇಶಗಳು ಸ್ವತಂತ್ರವಾಗಿ ಮಹಿಳೆ ಮತ್ತು ಪುರುಷರಿಗೆ ಸಮಾನತೆಯ ಪರಿಕಲ್ಪನೆಯನ್ನು ಒದಗಿಸಿತು. ಆದರೂ ಮಹಿಳೆ ರಾಜಕೀಯದಲ್ಲಿ ಸಮಾನಾವಕಾಶ ಪಡೆಯುವಂತಾಗಲಿಲ್ಲ. ಇದಕ್ಕೆ ಕೌಟುಂಬಿಕ ಮತ್ತು ಸಾಮಾಜಿಕ, ರಾಜಕೀಯ ವ್ಯವಸ್ಥೆಯೇ ಕಾರಣ ಎನ್ನಬಹುದು.

ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ಪುರುಷರು ರಾಜಕೀಯವಾಗಿ ಸಮಾನರು. ಮಹಿಳೆ ತನ್ನ ರಾಜಕೀಯ ಇಚ್ಛಾಶಕ್ತಿಯನ್ನು ಮತದಾನದ ಮೂಲಕ ಪುರುಷನಷ್ಟೇ

ಪ್ರಬಲವಾಗಿ ವ್ಯಕ್ತಪಡಿಸುತ್ತಾಳೆ. ಆದರೆ ಸಕ್ರಿಯ ರಾಜಕಾರಣದಲ್ಲಿ ಆಕೆಯ ಪಾತ್ರ ಗೌಣ ಎಂದೇ ಹೇಳಬೇಕು. ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ಮಹಿಳೆ ನಿರ್ಲಕ್ಷಿತಳಾದ ಪರಿಣಾಮ ರಾಜಕೀಯ ಪುರುಷನ ಏಕಸ್ವಾಮ್ಯವಾಗಿದೆ. ರಾಜಕೀಯ ಪಕ್ಷಗಳಲ್ಲಿ ಅಧಿಕಾರ ಗದ್ದುಗೆಯಲ್ಲಿ ಶಾಸಕ ಸಂಸತ್ ಪ್ರತಿನಿಧಿಗಳಾಗಿ ಮಹಿಳೆಯರು ಕಾಣಿಸಿಕೊಳ್ಳುವುದು ತೀರಾ ವಿರಳ. ಪ್ರಸ್ತುತ ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಪ್ರಬಲ ಮಹಿಳಾ ರಾಜಕಾರಣಿಗಳನ್ನು ಕಾಣಬಹುದು. ಸೋನಿಯಾ ಗಾಂಧಿ, ಮಮತಾ ಬ್ಯಾನರ್ಜಿ, ಜಯಲಲಿತಾ, ಮಾಯಾವತಿ, ಪ್ರತಿಭಾ ಪಾಟೀಲ್ ಮುಂತಾದವರನ್ನು ಹೆಸರಿಸಬಹುದು. ಆದರೆ ಪುರುಷರಿಗೆ ಹೋಲಿಸಿದಾಗ ಮಹಿಳೆಯರ ಸಂಖ್ಯೆ ತೀರಾ ವಿರಳ ಎಂದೇ ಹೇಳಬೇಕು. ಹೀಗಾಗಿ ಭಾರತದ ಸಂದರ್ಭದಲ್ಲಿ ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಹಿಳೆಯರಿಗೆ ಶೇಕಡಾ ಮೂವತ್ತ ಮೂರರಷ್ಟು ಅವಕಾಶ ಒದಗಿಸಿಕೊಡಬೇಕು ಎಂಬ ಕೂಗು ಎಲ್ಲೆಡೆ ಕೇಳಿಬರುತ್ತಿದೆ. ಮಹಿಳೆ ರಾಜಕೀಯವಾಗಿ ಬಲಾಢ್ಯಳಾಬೇಕಾದರೆ ಅವಳ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ನೈತಿಕ ಕ್ಷೇತ್ರಗಳಲ್ಲೂ ಆಕೆ ಸಮಾನ ಅವಕಾಶ ಪಡೆದಿರಬೇಕು. ಇಂಥ ಸಮಾಜದಲ್ಲಿ ಮಾತ್ರ ಮಹಿಳೆಯರು ರಾಜಕೀಯ ಸ್ಥಾನಮಾನ ಪಡೆಯಲು ಸಾಧ್ಯ. ವಿವಿಧ ವಲಯಗಳಲ್ಲಿ ಮಹಿಳೆಗೆ ಸಮಾನ ಅವಕಾಶ ದೊರಕಿದಾಗ ಮಾತ್ರ ಮಹಿಳಾ ಸಬಲೀಕರಣ ಸಾಧ್ಯ.

ಕಳೆದ ಮೂರು ದಶಕಗಳಲ್ಲಿ ಮಹಿಳಾ ಚಳುವಳಿಯು ಕರ್ನಾಟಕದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಹಿತ್ಯಿಕ ರಂಗಗಳಲ್ಲಿ ಮಹಿಳಾ ಸಮಾನತೆಗಾಗಿ ತನ್ನನ್ನು ವಿಪುಲವಾಗಿ ತೊಡಗಿಸಿಕೊಂಡಿದೆ. ಮಹಿಳಾಸಮುದಾಯವನ್ನು ಕುರಿತು ಮಾನವೀಯ ನೆಲೆಯಲ್ಲಿ ಲಿಂಗ ಸಮಾನತೆಯ ಪರಿಕಲ್ಪನೆಯಿಂದ ನಡೆದ ಮಹಿಳಾ ಚಳುವಳಿಗಳು ಸ್ತ್ರೀಬದುಕಿನ ಸುಧಾರಣೆಗೆ ಕಾರಣವಾಗುವಂತಾಯಿತು. ಎಂಭತ್ತರ ದಶಕದ ಮಹಿಳಾ ಚಳುವಳಿ ಉದ್ಯೋಗ, ರಾಜಕೀಯ ಮತ್ತು ಮಹಿಳಾ ಮೀಸಲಾತಿಯ ಕುರಿತು ಬೇಡಿಕೆಯನ್ನು ಮುಂದಿಟ್ಟಿತು. ಈ ಬೇಡಿಕೆಗೆ ಮಾನ್ಯತೆ ದೊರೆತ ಪರಿಣಾಮ ಮಹಿಳಾ ಸ್ಥಿತಿಗತಿ ಸುಧಾರಿಸುವಂತಾಯಿತು.

ಮಹಿಳಾ ಸ್ಥಿತಿಗತಿಯ ಸುಧಾರಣೆಗಾಗಿ ಪ್ರಸ್ತುತ ಸಂದರ್ಭದಲ್ಲಿ ಬಹುತೇಕ ಕಾರ್ಯಚಟುವಟಿಕೆಗಳು ನಡೆಯುತ್ತಿವೆ. ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಮಹಿಳಾಸಮುದಾಯಕ್ಕೆ ಸ್ಥಾನಮಾನ ಒದಗಿಸಲಾಗಿದೆ. ಆದರೂ ಸಂಪೂರ್ಣ ಯಶಸ್ಸು ಸಾಧಿಸಿದೆ ಎಂದು ಹೇಳಲಾಗದು. ಕೌಟುಂಬಿಕ ವ್ಯಾಪ್ತಿಯೊಳಗೆ ಸಿಕ್ಕು ಅಡುಗೆಮನೆ ಪ್ರಪಂಚದಿಂದ ಹೊರಬರಲಾಗದೆ ಒದ್ದಾಡುವ ಮಹಿಳಾಸಮುದಾಯ ಅಲ್ಲಲ್ಲಿ ಕಂಡುಬರುತ್ತಿವೆ. ಮಹಿಳಾಶಿಕ್ಷಣದ ಪ್ರಭಾವದಿಂದ ಇತ್ತೀಚಿನ ದಿನಗಳಲ್ಲಿ ಮಹಿಳಾ

ಸ್ಥಿತಿಗತಿಯ ಸುಧಾರಣೆ ಸಾಧ್ಯವಾಗಿದೆ. ಸ್ತ್ರೀ–ಪುರುಷ ಸಮಾನತೆಯ ಆಶಯ ಪ್ರತಿಯೊಬ್ಬರಲ್ಲೂ ಮೂಡಬೇಕು. ಈ ಭಾವನೆ ಸಾಮಾಜಿಕ ಅನುಷ್ಠಾನಕ್ಕೆ ಕಾರಣವಾಗಬೇಕು. ಈ ಮೂಲಕ ವಿವಿಧ ಕ್ಷೇತ್ರಗಳಲ್ಲಿ ಮಹಿಳಾಸಮುದಾಯಕ್ಕೆ ಅವಕಾಶ ಕಲ್ಪಿಸಲು ಸಾಧ್ಯವಾಗಬೇಕು. ಲಿಂಗದ ನೆಲೆಯಲ್ಲಿ ಶೋಷಣೆಗೆ ಒಳಗಾದ ಸ್ತ್ರೀಸಮುದಾಯ ನಾನಾ ವಿಧದ ಸಮಸ್ಯೆ ಹಾಗೂ ಸವಾಲುಗಳನ್ನು ಎದುರಿಸುತ್ತಾ ಬಂದಿದೆ. ಸತಿಪದ್ಧತಿ, ಬಾಲ್ಯವಿವಾಹದಂತಹ ಸಮಸ್ಯೆಗಳು ಕಡಿಮೆಯಾಗುತ್ತಾ ಬಂದರೂ ಕೌಟುಂಬಿಕ ವ್ಯಾಪ್ತಿಯ ಒಳಗೆ ಮಹಿಳೆ ತಾತ್ಸಾರಕ್ಕೆ ಒಳಗಾಗುತ್ತಿದ್ದಾಳೆ. ಈ ತಾತ್ಸಾರ ಆಕೆಯ ಮಾನಸಿಕಶಕ್ತಿ ಮತ್ತು ಅಂತರಂಗಶಕ್ತಿಯ ಮೇಲೆ ದುಷ್ಪರಿಣಾಮ ಬೀರುತ್ತಿದೆ. ಪರಿಣಾಮ ಆಕೆ ಕೀಳರಿಮೆ, ಹತಾಶೆ, ಖೇದಕ್ಕೆ ಒಳಗಾಗುವಂತಾಗಿದೆ. ಹೀಗೆ ಆಕೆಯ ಮನೋಖಿನ್ನತೆ ಕಾರಣವಾಗುವ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸಬೇಕಿದೆ.

ಸ್ತ್ರೀಸಮುದಾಯದವರನ್ನು ಸಮಾಜವ್ಯವಸ್ಥೆ ಜೀವದ ನೆಲೆಯಲ್ಲಿ ಪರಿಗ್ರಹಿಸುವ ಅಗತ್ಯತೆ ಇದೆ. ಹಾಗಾಗಿ ಸ್ತ್ರೀವಾದಿ ಚಿಂತನೆಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಅಳವಡಿಸಬೇಕಾಗಿದೆ. ಸ್ತ್ರೀವಾದ ಕೇವಲ ಸ್ತ್ರೀಸಮುದಾಯಕ್ಕೆ ಮಾತ್ರ ಸೀಮಿತವಾದುದಲ್ಲ. ಕೌಟುಂಬಿಕ ವ್ಯಾಪ್ತಿಯಿಂದ ತೊಡಗಿ ಜಾಗತಿಕ ಮಟ್ಟದವರೆಗೆ ಪ್ರತಿಯೊಬ್ಬರಿಗೂ ಸಂಬಂಧಪಟ್ಟ ವಿಚಾರವೇ ಆಗಿದೆ. ಗಂಡು ಹೆಣ್ಣಿನ ನಡುವಣ ಅಸಮಾನ ಭಾವ ಬಾಲ್ಯದ ಹಂತದಿಂದಲೇ ಆರಂಭವಾಗುತ್ತದೆ. ಲಿಂಗ ಅಸಮಾನತೆಯನ್ನು ಕುಟುಂಬ ವ್ಯವಸ್ಥೆಯಲ್ಲಿ ಬುಡಸಮೇತ ಕೀಳಬೇಕಿದೆ.

ಕೌಟುಂಬಿಕ ವ್ಯವಸ್ಥೆಯಿಂದ ತೊಡಗಿ ಜಾಗತಿಕ ಮಟ್ಟದವರೆಗಿನ ವಿವಿಧ ವಲಯಗಳಲ್ಲಿ ಮಹಿಳೆ ಶಕ್ತಿಹೀನಳಂತೆ ಬದುಕುವಂತಾಗಿದೆ. ಈ ಬದುಕು ಆಕೆಯನ್ನು ಸ್ವಾತಂತ್ರ್ಯದ ಅವಕಾಶದಿಂದ ಬಹುದೂರ ಉಳಿಸಿದೆ. ಹೀಗೆ ಅಲಕ್ಷ್ಯಕ್ಕೆ ಒಳಗಾದ ಸ್ತ್ರೀಸಮುದಾಯದ ಬದುಕನ್ನು ವಿವಿಧ ವಲಯಗಳಲ್ಲಿ ಕೇಂದ್ರಕ್ಕೆ ತರುವ ಜವಾಬ್ದಾರಿ ಸಾಮಾಜಿಕರದ್ದು. ಈ ಗುರುತರವಾದ ಸಾಮಾಜಿಕ ಹೊಣೆಗಾರಿಕೆಯನ್ನು ಸ್ತ್ರೀ ಪುರುಷರಿಬ್ಬರೂ ಅರಿತಾಗ ಮಾತ್ರ ಮಹಿಳಾ ಸ್ಥಿತಿಗತಿಯ ಸುಧಾರಣೆ ಸಾಧ್ಯ.

## ಆಕರ ಸೂಚಿ

೧. **ನೇಮಿಚಂದ್ರ ೨೦೦೧**
ಮಹಿಳಾ ಅಧ್ಯಯನ
ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೨. **ಡಾ। ಕಿಶೋರಿ ನಾಯಕ್ ಕೆ. ೧೯೯೯**
ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು
ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾಲಯ

ಅಧ್ಯಾಯ ೫

# ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ

**೫.೧ : ಸಾಂಪ್ರದಾಯಿಕ ಮಾದರಿ ಪಾತ್ರಗಳು**

೫.೧.೧ : ಕೌಸಲ್ಯೆ

೫.೧.೨ : ಸುಮಿತ್ರೆ

೫.೧.೩ : ಶಬರಿ

೫.೧.೪ : ಮಾಂಡವಿ

೫.೧.೫ : ಶ್ರುತಿಕೀರ್ತಿ

೫.೧.೬ : ಧಾನ್ಯಮಾಲಿನಿ

೫.೧.೭ : ಲೋಪಾಮುದ್ರಾ

೫.೧.೮ : ಏಕಜಟಿ

೫.೧.೯ : ಪ್ರಘಸೆತಾ

೫.೧.೧೦ : ವಿಕಟೆ

೫.೧.೧೧ : ತಾರಾಕ್ಷಿ

**೫.೨ : ಪ್ರತಿಭಟನಾತ್ಮಕ ಮಾದರಿ ಪಾತ್ರಗಳು**

೫.೨.೧ : ಶೂರ್ಪನಖಿ

೫.೨.೨ : ಕೈಕೆ

೫.೨.೩ : ಮಂಥರೆ

೫.೨.೪ : ರುಮೆ

೫.೨.೫ : ಸೀತೆ

೫.೨.೬ : ವೇದವತಿ

**೫.೩ : ಸ್ವತಂತ್ರ ಮಾದರಿ ಪಾತ್ರಗಳು**

೫.೩.೧ : ಅನುಸೂಯೆ

೫.೩.೨ : ಪ್ರಭಾವೈದ್ಯೆ

೫.೩.೩ : ಊರ್ಮಿಳೆ

೫.೩.೪ : ತಾರೆ

## ಅಧ್ಯಾಯ ೫

# ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀ ಕಥನ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಪುರುಷಕೇಂದ್ರಿತ ಚಿಂತನೆಯನ್ನು ಪ್ರಶ್ನಿಸಿದೆ. ಸ್ತ್ರೀಸಂವೇದನೆಯ ನೆಲೆಯಲ್ಲಿ ಸಾಗಿದೆ. ಸಾಮಾಜಿಕ ಸಮಾನತೆಯ ಅನುಷ್ಠಾನದ ಆಶಯದೊಂದಿಗೆ ವರ್ತಮಾನವನ್ನು ಒರೆಗೆ ಹಚ್ಚಿದೆ. ಸ್ತ್ರೀಕೇಂದ್ರಿತ ಧೋರಣೆಗೆ ಬದ್ಧವಾಗಿ ಪುರುಷನಿಷ್ಠ ಸವಾಲುಗಳಿಗೆ ಸ್ಪಂದಿಸಿದೆ. ಶಿಷ್ಟ ರಾಮಾಯಣ ಪರಂಪರೆ ಏಕಮುಖಿ ನೆಲೆಯಲ್ಲಿ ಪ್ರವಹಿಸಿದೆ. ಪುರುಷ ಕೇಂದ್ರಿತ ನಿಲುವಿಗೆ ಬದ್ಧವಾಗಿ ಸ್ತ್ರೀಬದುಕನ್ನು ಅಲಕ್ಷಿಸಿದೆ. ಸ್ತ್ರೀಯನ್ನು ಅವಕಾಶ ವಂಚಿತಳನ್ನಾಗಿಸಿ ಪುರುಷನಿಗೆ ಪ್ರಭುತ್ವ, ಅಧಿಕಾರ, ಭೋಗವಿಲಾಸದ ಕಿರೀಟ ತೊಡಿಸಿದೆ. ಈ ವ್ಯವಸ್ಥೆಯಲ್ಲಿ ನರಳುವ ಸ್ತ್ರೀಯರನ್ನು ದುರ್ಬಲ ವ್ಯಕ್ತಿತ್ವಗಳಾಗಿ ಚಿತ್ರಿಸಿದೆ. ಹೀಗೆ ನರಳುವ ಸ್ತ್ರೀಯರ ಮನಸ್ಥಿತಿ, ಅಂತರಂಗದ ಭಾವವನ್ನು ಅಲಕ್ಷಿಸಿದೆ. ಈ ಅಲಕ್ಷ್ಯದ ಹಿಂದೆ ಕೆಲಸ ಮಾಡಿದ ಪುರುಷರ ಶಕ್ತಿರಾಜಕಾರಣವನ್ನು ಗ್ರಹಿಸಬೇಕಿದೆ. ಸ್ತ್ರೀಸಮುದಾಯವನ್ನು ಬಂಧನದ ವ್ಯಾಪ್ತಿಗೆ ಒಳಪಡಿಸಿದ ಪುರುಷಸಮುದಾಯ ತಾನು ಜವಾಬ್ದಾರಿಯಿಂದ ಪಾರಾಗುವ ಹುನ್ನಾರ ನಡೆಸಿದೆ.

ಆಧುನಿಕ ಕನ್ನಡ ರಾಮಾಯಣಗಳು ಸ್ತ್ರೀಯರ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸಿವೆ. ಮಹಿಳಾಸಮುದಾಯದ ಅಂತರಂಗವನ್ನು ಅರ್ಥೈಸುವ ಪ್ರಯತ್ನ ಮಾಡಿವೆ. ಶೋಷಣೆಯ ನೆಲೆಗಳನ್ನು ಕಂಡುಕೊಳ್ಳುತ್ತಾ ಶೋಷಕ ವಿರೋಧಿ ದನಿಯನ್ನು ಗಟ್ಟಿಗೊಳಿಸಿವೆ. ಈ ದನಿ ಶೋಷಿತಪರ ಮಾನವೀಯತೆಯ ಪ್ರಕಟದೊಂದಿಗೆ ಸ್ವಸ್ಥ ಸಮಾಜ ನಿರ್ಮಾಣದ ಆಶಯ ಹೊತ್ತಿದೆ. ಪ್ರಭುತ್ವ ಮತ್ತು ಅಧೀನತೆಯನ್ನು ಪ್ರಶ್ನಿಸುತ್ತಾ ಸಮಾನತೆಯ ಪ್ರತಿಪಾದನೆಯಿಂದ ವ್ಯಕ್ತಿಗೌರವದ ಅಗತ್ಯತೆಯನ್ನು ಮನಗಂಡಿದೆ. ಹೀಗೆ ಸಮಾನತೆಯ ಆಶಯದೊಂದಿಗೆ ಸಾಮಾಜಿಕನ್ಯಾಯ ಒದಗಿಸುವ ಸಾಹಿತ್ಯ ಪ್ರಕಾರಗಳು ಸಾರ್ವಕಾಲಿಕ ಮನ್ನಣೆ ಪಡೆಯುತ್ತವೆ.

ಶಿಷ್ಟ ರಾಮಾಯಣ ಪರಂಪರೆ ಪ್ರಭುತ್ವವನ್ನು ಪ್ರೋತ್ಸಾಹಿಸುತ್ತಾ ಸ್ತ್ರೀ ಲೋಕವನ್ನು ಕ್ಷುಲ್ಲಕವಾಗಿ ಕಂಡಿದೆ. ಸೌಜನ್ಯ, ಪಾತಿವ್ರತ್ಯ, ನಿಷ್ಠೆ, ಭಕ್ತಿ, ತಪಸ್ಸು ಮೌನವನ್ನು ಸ್ತ್ರೀಸಮುದಾಯದಿಂದ ಅಪೇಕ್ಷಿಸುತ್ತಾ ಈ ಗುಣಗಳನ್ನು ರಾಮಾಯಣದ ಮಹಿಳಾ ಪಾತ್ರಗಳಿಗೆ ಆರೋಪಿಸಿದೆ. ಯಜಮಾನ ಸಂಸ್ಕೃತಿಯನ್ನು ಗಟ್ಟಿಗೊಳಿಸಿ ಅಧೀನರನ್ನು ಅವಗಣಿಸಿದೆ. ಈ ನಿಟ್ಟಿನಲ್ಲಿ ರಾಜತ್ವ, ದೇವತ್ವ, ಪಾತಿವ್ರತ್ಯವನ್ನು ಪ್ರತಿಪಾದಿಸುತ್ತಾ ಮಹಿಳೆಯ ಸಹಜ

ವ್ಯಕ್ತಿತ್ವವನ್ನೇ ತಳ್ಳಿಹಾಕಿದೆ. ಈ ತಳ್ಳುವಿಕೆ ಪಕ್ಷಪಾತೀಯ ನೆಲೆಯಲ್ಲಿ ಸಾಗಿದೆ ಎಂಬ ಚಿಂತನೆ ಸಾಂಪ್ರದಾಯಿಕ ಚಿಂತಕರನ್ನು ಎಂದಿಗೂ ಕಾಡಿದ್ದಿಲ್ಲ. ರಾಮಾಯಣ ಮಹಾಕಾವ್ಯದ ವಾನರ, ಮಾನವ, ದಾನವ ಸಂಸ್ಕೃತಿಯನ್ನು ಎಳೆಎಳೆಯಾಗಿ ಬಿತ್ತರಿಸಿದವರು ಆಧುನಿಕ ಕವಿಗಳು.

ದೇವಸಂಸ್ಕೃತಿಯಿಂದ ದಾನವಸಂಸ್ಕೃತಿ ನಾಶ ಎಂಬ ಉದ್ದೇಶಕ್ಕೆ ಸೀಮಿತವಾದ ರಾಮಾಯಣ ಕಾವ್ಯ ಆಧುನಿಕ ಕವಿಗಳಿಂದ ಹೊಸ ರೂಪು ಪಡೆಯಿತು. ಭಿನ್ನ ಸಂಸ್ಕೃಯ ಪ್ರತಿನಿಧೀಕರಣವನ್ನು ಸಾಂಸ್ಕೃತಿಕ ಪಠ್ಯವಾಗಿ ಅಧ್ಯಯನ ಮಾಡುವ ವಿಶಾಲ ದೃಷ್ಟಿಕೋನ ಆಧುನಿಕ ಕವಿಗಳದ್ದು. ವ್ಯಕ್ತಿಸ್ವಾತಂತ್ರ್ಯದ ಅನಾವರಣದಿಂದ ಬದುಕಿನ ಭಿನ್ನ ಮಗ್ಗುಲುಗಳನ್ನು ಪರಿಚಯಿಸಲಾದ ಆಧುನಿಕ ಮಹಾಕಾವ್ಯಗಳು ಸಮಾಜಮುಖಿ ನೆಲೆಯಲ್ಲಿ ಪ್ರವಹಿಸಿವೆ. ಇವುಗಳಲ್ಲಿ ಮುಖ್ಯವಾಗಿ ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ', ಕುವೆಂಪುರವರ 'ಶ್ರೀ ರಾಮಾಯಣದರ್ಶನಂ', ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಶ್ರೀರಾಮ ಪಟ್ಟಾಭಿಷೇಕ', ಎಂ. ವೀರಪ್ಪ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ'ನ್ನು ಹೆಸರಿಸಬಹುದು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಪ್ರಸ್ತುತ ವಿದ್ಯಮಾನಕ್ಕೆ ಸ್ಪಂದಿಸುತ್ತ ಶೋಷಿತಪರ ದನಿ ಎತ್ತಿದೆ. ಸ್ತ್ರೀಸಂವೇದನಾಶೀಲ ನೆಲೆಯಲ್ಲಿ ನನ್ನ ಅಧ್ಯಯನ ಸಾಗಿದ್ದು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳನ್ನು ಮುಖ್ಯವಾಗಿ ಮೂರು ಮಾದರಿಯಲ್ಲಿ ಗುರುತಿಸಿಕೊಳ್ಳಲಾಗಿದೆ.

೫.೧ ಸಾಂಪ್ರದಾಯಿಕ ಮಾದರಿ

೫.೨ ಪ್ರತಿಭಟನಾತ್ಮಕ ಮಾದರಿ

೫.೩ ಸ್ವತಂತ್ರ ಮಾದರಿ

### ೫.೧ ಸಾಂಪ್ರದಾಯಿಕ ಮಾದರಿ

ಶಿಷ್ಟ ರಾಮಾಯಣ ಪರಂಪರೆಯಂತೆ ಮಹಾನ್ವೇಷಣಂ ಮಹಾಕಾವ್ಯದ ಕೆಲವು ಮಹಿಳಾ ಪಾತ್ರಗಳು ಸಾಂಪ್ರದಾಯಿಕ ನಿಲುವಿಗೆ ಬದ್ಧವಾಗಿವೆ. ವ್ಯವಸ್ಥೆಯನ್ನು ಪ್ರಶ್ನಿಸದೆ ರಾಜತ್ವ, ಪ್ರಭುತ್ವ, ಪಾತಿವ್ರತ್ಯ ತತ್ತ್ವವನ್ನು ಸಮ್ಮತಿಸಿವೆ. ಇಂಥ ಸ್ತ್ರೀ ಪಾತ್ರಗಳಲ್ಲಿ ಸ್ವಂತಿಕೆ ಅಭಿವ್ಯಕ್ತಗೊಂಡಿಲ್ಲ. ಪ್ರತಿಭಟನೆಯ ನೆಲೆಗಳು ಕಾಣಿಸುವುದಿಲ್ಲ. ಪುರುಷಸಂಸ್ಕೃತಿ ಒಡ್ಡಿದ ಅಪಾಯಗಳ ಅರಿವು ಇಲ್ಲಿನ ಪಾತ್ರಗಳಿಗೆ ಇಲ್ಲ. ವೈಯಕ್ತಿಕ ಪ್ರಗತಿಯನ್ನು ಲೆಕ್ಕಿಸದೆ ಸ್ವೀಕೃತ ಮನಸ್ಸಿನಿಂದ ವ್ಯವಸ್ಥೆಯನ್ನು ಒಪ್ಪಿವೆ. ಅಭಿವ್ಯಕ್ತಿಸ್ವಾತಂತ್ರ್ಯವನ್ನು ಹತ್ತಿಕ್ಕಿ ಪ್ರಭುತ್ವ ಸಂಸ್ಕೃತಿಗೆ ಬದ್ಧವಾದ ಸ್ವೀಕೃತ ಮಾದರಿಯ ಮಹಿಳಾ ಪಾತ್ರಗಳ ಬದುಕಿನ ನೆಲೆಯನ್ನು ಅಧ್ಯಯನದ ಮುಖೇನ ಶೋಧಿಸಲಾಗಿದೆ.

ಮಹಾನ್ವೇಷಣಂನ ಕೆಲವು ಮಹಿಳಾ ಪಾತ್ರಗಳಲ್ಲಿ ಶಿಷ್ಟ ಪರಂಪರೆಯ ಪಡಿಯಚ್ಚಿದೆ. ಈ ಅಭಿವ್ಯಕ್ತಿಯ ಹಿಂದೆ ಕವಿಯ ಮನಸ್ಸು, ಪಾತ್ರ ನಿರೂಪಣೆಯ ತೊಡಕು, ಸಾಂಪ್ರದಾಯಿಕ ಮಾದರಿಯನ್ನು ಬಿಡಲಾಗದ ಸ್ಥಿತಿಯನ್ನು ವಿವೇಚಿಸಲಾಗಿದೆ. ಅಗತ್ಯ ಇದ್ದಲ್ಲಿ ಮಾರ್ಪಟಿಸಿ ವ್ಯವಸ್ಥೆಯ ಎರಡು ಮಗ್ಗುಲುಗಳನ್ನು ಕವಿ ಉಳಿಸಿಕೊಂಡಿದ್ದಾರೆ. ಮಹಾನ್ವೇಷಣಂ ಮಹಾಕಾವ್ಯದ ಸ್ವೀಕೃತ ಮಾದರಿಯ ಪಾತ್ರಗಳು; ಕೌಸಲ್ಯೆ, ಸುಮಿತ್ರೆ, ಶಬರಿ, ಮಾಂಡವಿ, ಶ್ರುತಿಕೀರ್ತಿ, ಧಾನ್ಯಮಾಲಿನಿ, ಲೋಪಾಮುದ್ರಾ.

**೫.೧.೧ ಕೌಸಲ್ಯೆ**

ಮಹಾನ್ವೇಷಣಂ ಮಹಾಕಾವ್ಯದ ಕೌಸಲ್ಯೆಯ ಪಾತ್ರ ಸಿದ್ಧ ಮಾದರಿಗೆ ಬದ್ಧವಾಗಿದೆ. ಪುರುಷ ಕೇಂದ್ರಿತ ಮೌಲ್ಯಗಳನ್ನು ಪ್ರೋತ್ಸಾಹಿಸುತ್ತದೆ. ಸ್ವತಂತ್ರ ಅಭಿಪ್ರಾಯ, ನಿರ್ಣಯ, ನಿರೀಕ್ಷೆಗಳಿಂದ ಕೌಸಲ್ಯೆ ಬಹುದೂರ ಉಳಿದಿದ್ದಾಳೆ. ದಶರಥನ ಹಿರಿಯ ರಾಣಿಯಾಗಿ ಗುರುತಿಸಿಕೊಂಡ ಕೌಸಲ್ಯೆ ಸ್ವತಂತ್ರ ನಿಲುವನ್ನು ತಳೆದಿಲ್ಲ. ಕೈಕೆಗೆ ದೊರೆತ ಅವಕಾಶ ಇಲ್ಲಿ ಕೌಸಲ್ಯೆಗೆ ದೊರೆತಿಲ್ಲ. ಅಭಿವ್ಯಕ್ತಿಯಿಂದ ಹೊರಗೆ ಉಳಿದ ಕೌಸಲ್ಯೆಯ ಪಾತ್ರಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಎರಡು ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳಬಹುದು.

೧. ತಾನು ಅಭಿವ್ಯಕ್ತಿ ಸ್ವಾತಂತ್ರ್ಯದಿಂದ ಹೊರಗೆ ಉಳಿದಿರುವೆ ಎಂಬ ಪ್ರಜ್ಞೆ ಕೌಸಲ್ಯೆಗೆ ಇದೆಯೇ?
೨. ಕೌಸಲ್ಯೆಯನ್ನು ಲೋಕದೃಷ್ಟಿಗೆ ರಾಣಿಯಾಗಿಸಿ ವೈಯಕ್ತಿಕ ನೆಲೆಯಿಂದ ಪ್ರಭುತ್ವ, ಅಧಿಕಾರ, ಅಭಿಪ್ರಾಯ ಸ್ವಾತಂತ್ರ್ಯದಿಂದ ದೂರ ಉಳಿಸುವ ಅಗತ್ಯತೆ ಕವಿಗೆ ಇತ್ತೇ?

ಶಿಷ್ಟ ರಾಮಾಯಣ ಪರಂಪರೆಯಲ್ಲಿ ಕೌಸಲ್ಯೆಯನ್ನು ಪತಿವ್ರತಾಧರ್ಮದ ಚೌಕಟ್ಟಿನ ಒಳಗೆ ಬಂಧಿಸಲಾಗಿದೆ. ಹಾಗಾಗಿ ಈ ಪಾತ್ರಕ್ಕೆ ಅನುಗುಣವಾಗಿ ಪೂರ್ವಕವಿಗಳ ಚಿಂತನೆಯನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಉಳಿಸಿಕೊಂಡಿದ್ದಾರೆ. ದಶರಥನ ರಾಣಿಯರಲ್ಲಿ ಕೈಕೆ ಗಟ್ಟಿಗಳು ಎಂಬ ಭಾವಕ್ಕೆ ಶಿಷ್ಟ ಮಹಾಕಾವ್ಯ ರಚನಕಾರರು ಬದ್ಧರಾಗಿದ್ದಾರೆ. ಕೈಕೆಯಂತೆಯೇ ಕೌಸಲ್ಯೆಯನ್ನು ಪ್ರತಿಭಟನೆಯ ಮಾದರಿಗೆ ತಂದರೆ ಕೈಕೆ ಸಹಜ ಸ್ತ್ರೀಯಾಗಿ ಕಾಣುತ್ತಿದ್ದಳು. ಹಾಗಾಗಿ ಕವಿ ಕೌಸಲ್ಯೆಯನ್ನು ಸಾಂಪ್ರದಾಯಿಕ ಮಾದರಿಯ ವ್ಯಾಪ್ತಿಯ ಒಳಗೆ ಉಳಿಸಿದ್ದಾರೆ. ರಾಮ ವನವಾಸಕ್ಕೆ ತೆರಳುವಲ್ಲಿ ಎದುರಾದ ಸಂದರ್ಭದ ಕುರಿತು ಕೌಸಲ್ಯೆಗೆ ಪಶ್ಚಾತ್ತಾಪ ಇದೆ. ಅಸಹನೆ ಇಲ್ಲ. ತ್ಯಾಗ, ಸಹನೆ, ಕರುಣೆಯ ಪ್ರತಿರೂಪವಾಗಿ ಆಕೆ ಕಾಣಿಸಿದ್ದಾಳೆ. ರಾಮನ ಕುರಿತು ವೇದನೆಪಡುವ ಕೌಸಲ್ಯೆಗೆ ಕೈಕೆಯ ಮೇಲೆ ಆಕ್ರೋಶ ಇಲ್ಲ. ಸವತಿಮಾತ್ಸರ್ಯದ ಭಾವ ಇಲ್ಲ. ದಶರಥನ ಕಾಲದ ಬಳಿಕ ಅರಮನೆಯ ರಾಣಿಯರಲ್ಲಿ ಅಂತರ್ಕಲಹ

ಉಂಟಾಗದಂತೆ ಕವಿ ಎಚ್ಚರವಹಿಸಿದ್ದಾರೆ. ರಾಮನ ವನವಾಸದ ಬದುಕಿನ ಕುರಿತು ಪಶ್ಚಾತ್ತಾಪ ಮೂವರೂ ರಾಣಿಯರನ್ನು ಸಮಾನವಾಗಿ ಬಾಧಿಸಿದೆ. ಇಲ್ಲಿ ಕೌಸಲ್ಯೆ ವಾಸ್ತವಪ್ರಜ್ಞೆ ಉಳ್ಳವಳಾಗಿದ್ದು ಬದುಕಲ್ಲಿ ಎದುರಾದ ಸನ್ನಿವೇಶವನ್ನು ದಿಟ್ಟತೆಯಿಂದ ಎದುರಿಸುವವಳಾಗಿದ್ದಾಳೆ.

ಕೌಸಲ್ಯೆ ಕ್ಷಮಾಮಯಿ, ಸಾಧ್ವಿ, ಪತಿವ್ರತೆ ಎಂದು ನಿರ್ವಚಿಸಿದ ಕವಿ ಆಕೆಯಲ್ಲಿ ಮಾನವಸಹಜ ಕಾಳಜಿ, ಸಂವೇದನೆಯನ್ನು ಅಳವಡಿಸಬೇಕಿತ್ತು. ಏಕೆಂದರೆ ರಾಮನ ವನವಾಸಕ್ಕೆ ಕಾರಣಳು ಎನಿಸಿದ ಕೈಕೆಯ ಕುರಿತು ಕೌಸಲ್ಯೆಗೆ ಸೇಡು, ಅಸಹನೆ ಇಲ್ಲವಾದರೂ ಈ ಕುರಿತು ರಾಮನ ಅಥವಾ ದಶರಥನ ಬಳಿ ಒಮ್ಮೆಯೂ ಆಕೆ ಚರ್ಚಿಸಿದ್ದಿಲ್ಲ. ದಶರಥನ ಮಾನಸಿಕ ವೇದನೆ, ಇಬ್ಬಂದಿತನದ ಬಾಧೆಯ ಅರಿವು ಕೌಸಲ್ಯೆಗೆ ಇದೆ. ಆದರೂ ವೈಯಕ್ತಿಕ ನೆಲೆಯಿಂದ ಮಾನವಸಹಜ ಕಾಳಜಿ, ಪ್ರಶ್ನೆ, ಚಿಂತನೆ ಎಲ್ಲಿಯೂ ಅನಾವರಣಗೊಂಡಿಲ್ಲ. ರಾಮನನ್ನು ಹರಸಿ ವನವಾಸಕ್ಕೆ ಕಳುಹಿಸಿದ ಕೌಸಲ್ಯೆ ಮತ್ತೆಂದೂ ರಾಮನ ಕುರಿತು ಚಿಂತನೆ ನಡೆಸಿಲ್ಲ. ಪಿತೃವಾಕ್ಯ ಪರಿಪಾಲಕ ರಾಮ ಯಾರಿಗೂ ಎದುರಾಡದ ವ್ಯಕ್ತಿತ್ವವಾಗಿ ನಿರೂಪಿತನಾಗಿದ್ದಾನೆ. ಅಂತೆಯೇ ಕೌಸಲ್ಯೆಯನ್ನು ನಿರೂಪಿಸಲಾಗಿದೆ. ಹೀಗೆ ಕವಿ ಕೌಸಲ್ಯೆಯ ಪಾತ್ರಕ್ಕೆ ಅನುಗುಣವಾಗಿ ಶಿಷ್ಟ ಪರಂಪರೆಯ ಯಥಾವತ್ತತೆಯನ್ನು ಉಳಿಸಿಕೊಂಡಿದ್ದಾರೆ. ರಾಮನ ವನವಾಸದ ಬದುಕಿನ ಕುರಿತ ಚಿಂತೆ ಕೌಸಲ್ಯೆಗೆ ಇದೆ. ಆದರೆ ರಾಮನನ್ನು ವನವಾಸಕ್ಕೆ ತಳ್ಳಿದ ವ್ಯವಸ್ಥೆಯ ಕುರಿತು ಚಿಂತನೆ ಇಲ್ಲ. ವನವಾಸಕ್ಕೆ ಹೊರಟ ರಾಮನನ್ನು ಕೌಸಲ್ಯೆ ತುಂಬುಮನದಿಂದ ಹರಸುತ್ತಾಳೆ. ದಶರಥನ ಭಾಷೆ ನೆರವೇರಬೇಕು ಎಂಬ ಸಂಕಲ್ಪಶಕ್ತಿ ಕೌಸಲ್ಯೆಯಲ್ಲಿ ಇತ್ತು. ಹಾಗಾಗಿ ಆಕೆ ಮರುಮಾತಾಡಿಲ್ಲ. ಪ್ರಭುತ್ವಶಕ್ತಿಯನ್ನು ಪ್ರೋತ್ಸಾಹಿಸುತ್ತಾ ಸ್ವಹಿತವನ್ನು ಅಡಗಿಸಿದ್ದಾಳೆ. ರಾಜಪರಂಪರೆಯ ತೀರ್ಪಿಗೆ ಬದ್ಧಳಾಗಿ ವ್ಯವಸ್ಥೆಯನ್ನು ಸ್ವೀಕರಿಸಿ ನಡೆದ ಕೌಸಲ್ಯೆಯ ಪಾತ್ರ ಕಾವ್ಯದ ತುಂಬೆಲ್ಲ ಪ್ರವಹಿಸಿಲ್ಲ.

### ೫.೧.೨ ಸುಮಿತ್ರೆ

ವ್ಯವಸ್ಥೆಯ ದೋಷವನ್ನು, ಅನನುಕೂಲತೆಯನ್ನು ಲೆಕ್ಕಿಸದೆ ಸಾಂಪ್ರದಾಯಿಕ ನಿಲುವಿಗೆ ಬದ್ಧಳಾದವಳು ಸುಮಿತ್ರೆ. ಕೆಲಕ್ಷಣ ಮಿಂಚಿ ಮರೆಯಾಗುವ ಅಂಚಿನ ಪಾತ್ರವಾಗಿ ವ್ಯವಸ್ಥೆಯನ್ನು ಒಪ್ಪಿಕೊಂಡೇ ಮುಂದೆ ಸಾಗುತ್ತದೆ. ಸುಮಿತ್ರೆಯ ಪಾತ್ರ ನಿರೂಪಣೆಯಲ್ಲಿ ಕವಿ ವಾಲ್ಮೀಕಿಗೆ ಶರಣಾಗಿದ್ದಾರೆ. ದಶರಥನ ಮಧ್ಯಮ ಪತ್ನಿಯಾಗಿ ಲಕ್ಷ್ಮಣ ಶತ್ರುಘ್ನರ ತಾಯಾಗಿ ಸುಮಿತ್ರೆ ಕೌಸಲ್ಯೆಯಂತೆಯೇ ಅಧಿಕಾರ, ಅಭಿಪ್ರಾಯ, ಅವಕಾಶಗಳಿಂದ ದೂರ ಉಳಿದವಳು. ಈ

ದೂರದ ಮಿತಿಯನ್ನು ಕವಿ ಕಾವ್ಯದ ಉದ್ದಕ್ಕೂ ಕಾಯ್ದುಕೊಂಡಿದ್ದಾರೆ. ಸುಮಿತ್ರೆ ಹೀಗೆಯೇ ಇರಬೇಕು ಎಂಬ ಶಿಷ್ಟ ನಿರೂಪಣೆಗೆ ಮಹಾನ್ವೇಷಣಂ ಮಹಾಕಾವ್ಯದ ಕವಿಬದ್ಧರು.

ರಾಮಲಕ್ಷ್ಮಣರು ವನವಾಸಕ್ಕೆ ಹೊರಟ ಸಂದರ್ಭದಲ್ಲಿ ಸುಮಿತ್ರೆ ಕೌಸಲ್ಯೆಗಿಂತ ದೃಢಚಿತ್ತಳು. ವೇದನೆಯಲ್ಲಿರುವ ಕೌಸಲ್ಯೆಗೆ ತಾನೇ ಸಾಂತ್ವನ ಹೇಳುತ್ತಾಳೆ. ಕೈಕೆ, ದಶರಥನ ಕುರಿತು ಅಸಹನೆ ತಾಳದ ಸುಮಿತ್ರೆ ಸ್ಥಿತಪ್ರಜ್ಞಳು. ಸಾಂಪ್ರದಾಯಿಕತೆಯನ್ನು ಮುಕ್ತ ಮನಸ್ಸಿನಿಂದ ಒಪ್ಪುವ ವ್ಯಕ್ತಿತ್ವ ಅವಳದು. ಪ್ರಭುತ್ವ ಒಡ್ಡುವ ಆತಂಕದ ಕುರಿತು ಆಕೆಗೆ ಚಿಂತೆ ಇಲ್ಲ. ಲಕ್ಷ್ಮಣನ ವನವಾಸದ ಕುರಿತು ಶೋಕವೂ ಇಲ್ಲ. ಊರ್ಮಿಳೆಯ ಬದುಕಿನ ಬಗ್ಗೆ ಚಿಂತನೆ ನಡೆಸುವ ವಿಚಾರವಾದಿಯೂ ಅಲ್ಲ. ಪ್ರಭುತ್ವದ ತೀರ್ಪು, ಪ್ರತಿಫಲಗಳನ್ನು ಪ್ರಜೆಗಳು ಸ್ವೀಕರಿಸುವಂತೆ ಆಕೆ ಸ್ವೀಕರಿಸಿದ್ದಾಳೆ. ರಾಮನು ಕೈಗೊಂಡ ನಿರ್ಧಾರ ಮತ್ತು ಕೈಕೆಯ ತೀರ್ಪಿಗೆ ಆಕೆ ಬದ್ಧಳು. ದಶರಥ ಎಂದಿಗೂ ಸುಮಿತ್ರೆಯೊಂದಿಗೆ ಮಾತುಕತೆ ನಡೆಸಿದ್ದಿಲ್ಲ. ಈ ಪ್ರಜ್ಞೆ ಎಂದಿಗೂ ಸುಮಿತ್ರೆಯನ್ನು ಕಾಡಿದಿಲ್ಲ. ಅಧಿಕಾರಶಾಹಿಯ ತೀರ್ಪಿಗೆ ಬದ್ಧಳಾಗಿ ನಡೆಯುವುದೇ ಪರಮ ಧ್ಯೇಯ ಎಂದು ಪರಿಭಾವಿಸಿದವಳು. ಹಾಗಾಗಿ ರಾಮಲಕ್ಷ್ಮಣರ ವನವಾಸದ ಕುರಿತು ಸುಮಿತ್ರೆಯಾಗಲಿ, ಕೌಸಲ್ಯೆಯಾಗಲಿ ಯಾರೊಂದಿಗೂ ಚರ್ಚಿಸಿಲ್ಲ. ಸುಮಿತ್ರೆ ಅರಮನೆಯಲ್ಲಿ ಇದ್ದುಕೊಂಡೇ ತನ್ನನ್ನು ಪ್ರಭುತ್ವ, ಅಧಿಕಾರದಿಂದ ಹೊರಗೆ ಉಳಿಸಿಕೊಂಡಿದ್ದಾಳೆ. ಅಂತಃಪುರದಲ್ಲಿ ಇದ್ದೇ ಅಧೀನ ಸಂಸ್ಕೃತಿಯ ಪರವಾಗಿ ಬದುಕಿದ್ದಾಳೆ. ಹೀಗೆ ಸುಮಿತ್ರೆಯನ್ನು ನಿರೂಪಿಸುವ ಅಗತ್ಯತೆ ಕವಿಗೆ ಏನಿತ್ತು? ಎಂಬುದು ಮುಖ್ಯ ಪ್ರಶ್ನೆ. ಇದನ್ನೇ ಪತಿವ್ರತಾಧರ್ಮ, ಸಮಾಜನಿಯಮ ಎಂಬಂತೆ ಕವಿ ನಿರೂಪಿಸಿದ್ದಾರೆ. ಹಾಗಾಗಿ ಕೌಸಲ್ಯೆ ಮತ್ತು ಸುಮಿತ್ರೆಯರು ರಾಜಪರಂಪರೆ ಒಡ್ಡಿದ ಆತಂಕ ಮತ್ತು ಷರತ್ತನ್ನು ಗ್ರಹಿಸಲಾರದ, ಪ್ರಶ್ನಿಸಲಾರದ ಮಟ್ಟದಲ್ಲಿರುವ ದುರ್ಬಲ ವ್ಯಕ್ತಿತ್ವಗಳಾಗಿ ಕಾಣಿಸಿದ್ದಾರೆ. ದಶರಥನ ಆಣತಿಯನ್ನು ರಾಮ ಪಾಲಿಸುವಂತೆ ಪ್ರೋತ್ಸಾಹಿಸುವುದು ಮತ್ತು ರಾಮಾಜ್ಞೆಯನ್ನು ಲಕ್ಷ್ಮಣ ಪಾಲಿಸುವಂತೆ ಪ್ರೋತ್ಸಾಹಿಸುವುದು ಹಾಗೂ ರಾಮನಿಗೆ ಅನುಗುಣವಾಗಿ ಸೀತೆ ನಡೆದುಕೊಳ್ಳುವುದನ್ನು ಸುಮಿತ್ರೆ ಬೆಂಬಲಿಸಿದ್ದಾಳೆ. ಈ ಸಿದ್ಧಾಂತಸೂತ್ರದ ಬೆಂಬಲಿಗರಾಗಿ ಕೌಸಲ್ಯೆ, ಸುಮಿತ್ರೆಯನ್ನು ಚಿತ್ರಿಸಲಾಗಿದೆ. ಸ್ವತಂತ್ರ ಚಿಂತನೆ, ಸ್ವತಂತ್ರ ಅಭಿವ್ಯಕ್ತಿ, ಸ್ವತಂತ್ರ ನಿರ್ಧಾರ ಸುಮಿತ್ರೆಯ ಪಾತ್ರದಿಂದ ಅಭಿವ್ಯಕ್ತಗೊಂಡಿಲ್ಲ. ಪ್ರಭುತ್ವಸಂಸ್ಕೃತಿಗೆ ಬದ್ಧರಾಗುವ ಮಾತೆಯರನ್ನಾಗಿ ಕೌಸಲ್ಯೆ, ಸುಮಿತ್ರೆಯನ್ನು ನಿರೂಪಿಸಲಾಗಿದೆ.

ನೇಮ, ನಿಷ್ಠೆ, ಆಧ್ಯಾತ್ಮ ಚಿಂತನೆಯಲ್ಲಿ ಮುಳುಗಿದ ಸುಮಿತ್ರೆ ಕೌಸಲ್ಯೆಯನ್ನು ಆಶ್ರಯಿಸಿಯೇ ನಡೆದವಳು. ಒಮ್ಮೊಮ್ಮೆ ಆಕೆಗೆ ಅಯೋಧ್ಯೆ ಸೆರೆಮನೆಯಂತೆ ಭಾಸವಾದದ್ದೂ ಇದೆ. ಆಕೆ ವೇದಾಂತ ಬಲ್ಲವಳು, ಜ್ಞಾನಸಂಪನ್ನೆ, ಪರನಿಂದಾ ವಿಮುಖಳು. ಸುಖ-ದುಃಖವನ್ನು

ಸಮಚಿತ್ತದಿಂದ ಸ್ವೀಕರಿಸುವ ವ್ಯಕ್ತಿತ್ವ ಸುಮಿತ್ರೆಯದ್ದು. ತನಗಾದ ದಾಸ್ಯಭಾವವನ್ನು ಹಗೆಯಾಗಿ ಪರಿವರ್ತಿಸದೆ ವಿಶಾಲ ದೃಷ್ಟಿಯನ್ನು ತಳೆದವಳು. ಹಟ, ಛಲ, ದ್ವೇಷ, ಮಾತ್ಸರ್ಯಗಳನ್ನು ಮೀರಿನಿಂತ ವ್ಯಕ್ತಿತ್ವ, ಪ್ರಭುತ್ವ ಸಂಸ್ಕೃತಿಯನ್ನು ಸಮ್ಮತಿಸುತ್ತ ತನಗೆ ಸಲ್ಲದ ವಿಚಾರಗಳಿಂದ ದೂರ ಉಳಿದವಳು. ಶಿಷ್ಟ ರಾಮಾಯಣ ಪರಂಪರೆ ಕೈಕೆಯ ಕುರಿತು ತಾಳಿದಷ್ಟು ಆಸಕ್ತಿ ಸುಮಿತ್ರೆಯ ಕುರಿತು ತಾಳಿಲ್ಲ. ಸುಮಿತ್ರೆಯ ಪಾತ್ರನಿರ್ಮಿತಿಗೆ ಸಂಬಂಧಿಸಿದಂತೆ ಶಿಷ್ಟ ರಾಮಾಯಣ ಪರಂಪರೆಯ ಪ್ರಭಾವ ಮಹಾನ್ವೇಷಣಂನ ಕವಿಯ ಮೇಲಾಗಿರುವುದು ಸುಸ್ಪಷ್ಟ.

**೫.೧.೩ ಶಬರಿ**

ಮಹಾನ್ವೇಷಣಂ ಮಹಾಕಾವ್ಯದ ಶಬರಿಯ ಭಕ್ತಿಯಲ್ಲಿ ಅನನ್ಯತೆ ಇದೆ. ಭಕ್ತಿಯ ಪರಾಕಾಷ್ಠೆಯ ಜಿಜ್ಞಾಸೆಯೂ ಇದೆ. ಧ್ಯಾನ, ಭಕ್ತಿ, ಮಾನಸಿಕ ಪಾತಿವ್ರತ್ಯ, ಜಪ–ತಪ ಇತ್ಯಾದಿ ಆಧ್ಯಾತ್ಮಿಕ ಸಾಧನೆಗಳು ಶಬರಿಯ ನೆಲೆಯಿಂದ ಅಭಿವ್ಯಕ್ತವಾಗಿವೆ. ಶಿಷ್ಟ ರಾಮಾಯಣ ಪರಂಪರೆಯಂತೆ ಮಹಾನ್ವೇಷಣಂ ಮಹಾಕಾವ್ಯದ ಶಬರಿಯ ಪಾತ್ರ ಭಕ್ತಿಪ್ರಧಾನವಾಗಿ ಮೂಡಿದೆ. ಶಬರಿಯ ಶರಣುಭಾವ ರಾಮನಿಗೆ ಮುಜುಗರ ತರುವಂತದ್ದು. ಭಕ್ತಿಯನ್ನು ತನ್ನ ಜೀವದ ಉಸಿರಾಗಿರಿಸಿ ರಾಮನ ಬರುವಿಕೆಗೆ ಕಾದು ಕುಳಿತವಳು ಶಬರಿ. ಭಕ್ತಿಯ ಪರಾಕಾಷ್ಠೆಯಲ್ಲಿ ಲೋಕಜನರ ಪರಿಹಾಸಕ್ಕೆ ಕಿವಿಗೊಡದೆ ವರ್ಷಗಟ್ಟಲೆ ರಾಮನಿಗಾಗಿ ಕಾದವಳು. ಆಕೆಯ ಭಕ್ತಿಯಲ್ಲಿ ಕಿಂಚಿತ್ತೂ ದೋಷವಿಲ್ಲ. ಪ್ರತಿಫಲಾಪೇಕ್ಷೆಯೂ ಇಲ್ಲ. ಸನ್ಯಾಸಧರ್ಮಕ್ಕೆ ಚ್ಯುತಿ ಬಾರದಂತೆ ತನುಮನವನ್ನು ಸಂಪೂರ್ಣ ಭಕ್ತಿಯಲ್ಲಿ ಲೀನಗೊಳಿಸಿದವಳು. ಲೌಕಿಕ ಕಾಮನೆಯಿಂದ ಶಾಶ್ವತವಾಗಿ ದೂರ ಉಳಿಯುತ್ತಾ ಭಕ್ತಿಪ್ರೇಮದಲಿ ಮುಳುಗಿದ ವ್ಯಕ್ತಿತ್ವ ಶಿಷ್ಟ ರಾಮಾಯಣ ಪರಂಪರೆಯಲ್ಲಿ ನಿರೂಪಿತವಾದ ಶಬರಿಯ ಭಕ್ತಿಪ್ರಧಾನತೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಮೂಡಿದೆ. ವ್ಯವಸ್ಥೆಯನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಿ ತನ್ನ ಭಕ್ತಿಭಾವವನ್ನು ಕಂಡುಕೊಳ್ಳುವ ಆಕೆಯ ಪಾತ್ರದಲ್ಲಿ ಅನನ್ಯತೆ ಇದೆ. ರಾವಣ ಸೀತೆಯನ್ನು ಅಪಹರಿಸಿದ ಸಂದರ್ಭದ ಕುರಿತು ಮತ್ತು ಸೀತೆ ಇಲ್ಲದ ರಾಮನ ಏಕಾಂತ ಬದುಕಿನ ಕುರಿತು ಶಬರಿಗೆ ಖೇದ ಇದೆ. ವನದಲ್ಲಿ ಇದ್ದುಕೊಂಡೇ ರಾಮನ ಬದುಕಿನ ಆಗುಹೋಗುಗಳ ಕುರಿತು ಕಾಳಜಿ ಉಳ್ಳವಳು. ಶಬರಿ ತಾನಿದ್ದ ಸ್ಥಳದಲ್ಲೇ ರಾಮನಿಗೆ ಶುಭ ಹಾರೈಸುತ್ತಾಳೆ ಮಾತ್ರವಲ್ಲ ಮಾರ್ಗದರ್ಶನ ಮಾಡುತ್ತಾಳೆ. ಅಯೋಧ್ಯಾಸಂಸ್ಕೃತಿ, ಲಂಕಾಸಂಸ್ಕೃತಿಯನ್ನು ಅರಿಯುತ್ತಾ ರಾಮನ ಶ್ರೇಯಸ್ಸನ್ನು ಬಯಸಿದವಳು. ಸಮಾಜವ್ಯವಸ್ಥೆಯನ್ನು ಒಪ್ಪುತ್ತಾ ಭಕ್ತಿಪ್ರಧಾನತೆಯ ನೆಲೆಯಲ್ಲಿ ನಿರೂಪಿತವಾದ ಶಬರಿಯ ಪಾತ್ರ ಸಾಂಪ್ರದಾಯಿಕ ಮಾದರಿಯದಾಗಿದೆ.

ತನ್ನ ವೃದ್ಧಾಪ್ಯದಲ್ಲೂ ರಾಮನಿಗಾಗಿ ಕಾಯುವ ಶಬರಿ ಈ ಮಹಾಕಾವ್ಯದ ಭಕ್ತಿಪ್ರಧಾನತೆಗೆ ಕಳಶವಿಟ್ಟಂತೆ. ಭಕ್ತಿ ಮತ್ತು ಆಧ್ಯಾತ್ಮಶಕ್ತಿಯ ಮಿಳಿತದೊಂದಿಗೆ ಆಕೆ ಚೈತನ್ಯ ಸ್ವರೂಪಿಣಿಯಾಗಿ ಕಾಣಿಸಿದ್ದಾಳೆ. ಲೋಕದ ತುಂಬೆಲ್ಲಾ ತುಂಬಿರುವ ಅನ್ಯಾಯ, ಅಸೂಯೆ, ಅರಾಜಕತೆಯ ಅರಿವು ಆಕೆಗೆ ಇದೆ. ರಾಮಸೀತೆಯರನ್ನು ಕಾಣುವ ಮೊದಲೇ ಅವರ ಕಷ್ಟ ಸುಖಗಳನ್ನು ಅರಿತವಳು ಆಕೆ. ಈ ನೆಲೆಯಲ್ಲಿ ಅವರಿಗೆ ಶುಭಹಾರೈಸುತ್ತಾ ಅವರ ಬದುಕು ಹಸಿರಾಗಿರಲಿ ಎಂದು ಹಾರೈಸಿದವಳು. ಅಹಲ್ಯೆಯನ್ನು ಸಂಕಟದಿಂದ ಪಾರು ಮಾಡಿದವನು ರಾಮ ಎಂಬುದನ್ನು ತಿಳಿದವಳು ಆಕೆ. ರಾವಣನು ಸೀತೆಯನ್ನು ಅಪಹರಿಸುತ್ತಾನೆ ಎಂಬ ಸೂಕ್ಷ್ಮವನ್ನು ಶಬರಿ ಮೊದಲೇ ರಾಮನಿಗೆ ತಿಳಿಸುತ್ತಾಳೆ. ನಿನ್ನಿಂದಲೇ ದಾನವರು ನಾಶ ಹೊಂದುವರು ಎಂಬ ಭವಿಷ್ಯವಾಣಿ ಶಬರಿಯಿಂದ ಕೇಳಿಬರುತ್ತದೆ. ಸುಗ್ರೀವನ ಸ್ನೇಹ ಬಯಸಬೇಕೆಂಬ ಪೂರ್ವಸೂಚನೆಯನ್ನು ಆಕೆ ರಾಮನಿಗೆ ನೀಡುತ್ತಾಳೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಶಬರಿ ದಿವ್ಯತೇಜಸ್ವಿಯಾಗಿ ಕಾಣಿಸಿದ್ದಾಳೆ. ರಾಮಸೀತೆಯರ ಭವಿತವ್ಯದ ಬದುಕಿಗೆ ಹಾರೈಕೆಯನ್ನು ವ್ಯಕ್ತಪಡಿಸಿದ ದಿವ್ಯಜ್ಞಾನಿ ಶಬರಿ.

**೫.೧.೪ ಮಾಂಡವಿ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ವ್ಯವಸ್ಥೆಯನ್ನು ಒಪ್ಪಿ ಬದುಕುವ ಮಹಿಳಾ ಪಾತ್ರಗಳಲ್ಲಿ ಮಾಂಡವಿಯ ಪಾತ್ರವೂ ಒಂದು. ಭರತನೊಂದಿಗೆ ವಿವಾಹವಾದ ಮಾಂಡವಿ ವ್ಯವಸ್ಥೆಯನ್ನು ಪ್ರಶ್ನಿಸದೆ, ಪ್ರತಿಭಟಿಸದೆ ಸಿದ್ಧ ಮಾದರಿಗೆ ಬದ್ಧವಾಗಿ ಮುನ್ನಡೆಯುತ್ತಾಳೆ. ಅಯೋಧ್ಯೆಯ ಅರಾಜಕತೆಯನ್ನು ಪರಿಗ್ರಹಿಸುವ ಮಟ್ಟಕ್ಕೆ ಈ ಪಾತ್ರ ಬೆಳೆದಿಲ್ಲ.

**೫.೧.೫ ಶ್ರುತಿಕೀರ್ತಿ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸಾಂಪ್ರದಾಯಿಕ ಮಾದರಿಯ ಪಾತ್ರಗಳಲ್ಲಿ ಶ್ರುತಿಕೀರ್ತಿಯ ಪಾತ್ರವೂ ಒಂದು. ಶತ್ರುಘ್ನನನ್ನು ವರಿಸಿದ ಶ್ರುತಿಕೀರ್ತಿಯ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕಾಣಿಸಿಕೊಳ್ಳುವ ಸಂದರ್ಭಗಳು ತೀರಾ ವಿರಳ. ವ್ಯವಸ್ಥೆಯ ಕುರಿತು ಯಾವುದೇ ಅಸಹನೆ ತಾಳದೆ ಬದುಕನ್ನು ಸಾಂಪ್ರದಾಯಿಕ ಮಾದರಿಯಲ್ಲಿ ಸ್ವೀಕರಿಸುವ ಪಾತ್ರವಾಗಿ ಕಾಣಿಸಿದೆ.

**೫.೧.೬ ಧಾನ್ಯ ಮಾಲಿನಿ**

ಶಿಷ್ಟ ರಾಮಾಯಣ ಪರಂಪರೆಯ ನಿಲುವಿಗೆ ಬದ್ಧವಾದ ಧಾನ್ಯಮಾಲಿನಿಯ ಪಾತ್ರ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಇದೆ. ರಾವಣನಿಗೆ ದೇಹವನ್ನು ತೆತ್ತು ಅತಿಕಾಯನನ್ನು

ಪಡೆದ ವ್ಯಕ್ತಿತ್ವವಾಗಿ ಧಾನ್ಯಮಾಲಿನಿಯನ್ನು ನಿರೂಪಿಸಲಾಗಿದೆ. ಈಕೆಯ ಬದುಕಿನ ಕುರಿತು ಓದುಗರಿಗೆ ಅನುಕಂಪ ಹುಟ್ಟುತ್ತದೆ. ವ್ಯವಸ್ಥೆಗೆ ಮರುಮಾತಾಡದೆ ಸಾಂಪ್ರದಾಯಿಕ ಚಿಂತನೆಗೆ ಸಮ್ಮತಿ ಸೂಚಿಸುತ್ತಾ ಮುನ್ನಡೆಯುವ ಧಾನ್ಯಮಾಲಿನಿ ಮಹಾನ್ವೇಷಣಂ ಮಹಾಕಾವ್ಯದ ಸಾಂಪ್ರದಾಯಿಕ ಮಾದರಿಗೆ ಒಂದು ಉತ್ತಮ ನಿದರ್ಶನ.

### ೫.೧.೭ ಲೋಪಾಮುದ್ರಾ

ಅಗಸ್ತ್ಯ ಮಹರ್ಷಿಯ ಪತ್ನಿ ಲೋಪಾಮುದ್ರೆಯ ಪಾತ್ರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಒಡಮೂಡಿದೆ. ಅತ್ಯುಚ್ಚ ಸ್ಥಾನದಲ್ಲಿ ನಿಂತು ರಾಮಸೀತೆಯರಿಗೆ ಉಪದೇಶ ನೀಡುವ ಪಾತ್ರವಾಗಿದೆ. 'ಆದಿತ್ಯ ಹೃದಯ' ಎಂಬ ದಿವ್ಯಮಂತ್ರ ಉಪದೇಶಿಸುತ್ತಾ ಅವರ ಬದುಕನ್ನು ಹಾರೈಸಿದ ಅಗಸ್ತ್ಯ ಲೋಪಾಮುದ್ರೆಯರ ಪಾತ್ರ ಸಾಂಪ್ರದಾಯಿಕ ಮಾದರಿಗೆ ನಿದರ್ಶನವಾಗಿದೆ.

### ೫.೧.೮ ಏಕಜಟಿ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಏಕಜಟಿಯ ಪಾತ್ರ ಸಾಂಪ್ರದಾಯಿಕ ಮಾದರಿ ಪಾತ್ರವಾಗಿ ಕಾಣಿಸಿದೆ. ರಾವಣನಿಗೆ ಪೂರಕವಾಗಿ ನಡೆಯುವ, ಅವನ ಆಜ್ಞೆಯನ್ನು ಚಾಚೂತಪ್ಪದೇ ಪಾಲಿಸುವ ಏಕಜಟಿ ಮಹಾನ್ವೇಷಣಂ ಮಹಾಕಾವ್ಯದ ಸಾಂಪ್ರದಾಯಿಕ ಮಾದರಿ ಪಾತ್ರಕ್ಕೆ ಒಂದು ಪ್ರತ್ಯಕ್ಷ ನಿದರ್ಶನ. ಏಕಜಟಿ ರಾವಣನ ಪರವಾಗಿ ನಿಂತವಳು. ಅವಳ ಚಿಂತನೆಗಳು ಎಲ್ಲವೂ ರಾವಣನ ಪರವಾಗಿಯೇ ಇರುವಂಥದ್ದು. ಹಾಗಾಗಿ ಸೀತೆಯ ಒಳತೋಟಿಯನ್ನು, ಮನಸ್ಥಿತಿಯನ್ನು ಅರಿಯುವ ಮಟ್ಟಕ್ಕೆ ಏಕಜಟಿಯ ಬುದ್ಧಿ ಬೆಳೆದಿಲ್ಲ ಎನ್ನಬೇಕು. ಸೀತೆಯ ಮನ ಒಲಿಸಲು ಪ್ರಯತ್ನಿಸುತ್ತಾ ಒಡೆಯನ ಆಜ್ಞೆಯನ್ನು ಪಾಲಿಸುವ ಆಜ್ಞಾಪಾಲಕಿಯಾಗಿ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಆಕೆ ಕಾಣಿಸಿದ್ದಾಳೆ.

ರಾವಣನ ಕುರಿತು ಏಕಜಟಿಗೆ ಅಪಾರ ಪ್ರೀತಿ, ಗೌರವಭಾವ ಇದೆ. ಹಾಗಾಗಿ ರಾವಣನ ಗುಣಗಾನ ಮಾಡುವ ಮೂಲಕ ಸೀತೆಯ ಮನ ಒಲಿಸಲು ನಾನಾ ವಿಧದ ಪ್ರಯತ್ನ ಮಾಡುತ್ತಾಳೆ. ರಾವಣನ ಶಕ್ತಿ, ಸಾಮರ್ಥ್ಯ, ಸಾಮ್ರಾಜ್ಯ, ಸಂಪತ್ತನ್ನು ಸೀತೆಯ ಎದುರಲ್ಲಿ ಹೊಗಳಿದ ಆಕೆ ಅವನ ಮಾನಸಿಕ ಕ್ರೌರ್ಯವನ್ನು ಅರಿಯುವಲ್ಲಿ ವಿಫಲಳಾಗಿದ್ದಾಳೆ. ಅವಳ ಅಭಿಪ್ರಾಯ, ತೀರ್ಮಾನ, ಉದ್ದೇಶಗಳೆಲ್ಲವೂ ಏಕಪಕ್ಷೀಯವಾದದ್ದು. ಈ ಹಿನ್ನೆಲೆಯಲ್ಲಿ ಏಕಜಟಿಯ ತೀರ್ಮಾನಗಳು, ಯೋಚನೆಗಳು ಸಾಂಪ್ರದಾಯಿಕ ನೆಲೆಯಲ್ಲಿಯೇ ಸಂಚರಿಸುತ್ತವೆ.

ಒಬ್ಬ ಪುರುಷನಿಗೆ ಶಕ್ತಿ, ಸಾಮರ್ಥ್ಯ, ಸಂಪತ್ತು, ಕೀರ್ತಿ ಇವುಗಳೇ ಭೂಷಣ ಎಂಬ ನಿಲುವು ಏಕಜಟಿಯದ್ದು. ಇದರ ಬೆನ್ನುಹತ್ತಿ ಹೋದ ರಾವಣನ ಅಧರ್ಮ, ಅನ್ಯಾಯ, ಅನೀತಿಗಳು ಏಕಜಟಿಗೆ ಶೂನ್ಯವಾದವು. ಸಂಪತ್ತಿಗೆ ಒಡೆಯನಾದ ರಾವಣನನ್ನು ಒಂದೇ ದೃಷ್ಟಿಕೋನದಿಂದ ಕಂಡ ಆಕೆಗೆ ಅವನ ಇನ್ನೊಂದು ಮುಖವನ್ನು ನೋಡಲು ಸಾಧ್ಯವಾಗಲಿಲ್ಲ. ಈ ನಿಟ್ಟಿನಲ್ಲಿ ರಾವಣನ ಕ್ರೌರ್ಯ, ದೌರ್ಬಲ್ಯ ಮತ್ತು ಕೊರತೆಯನ್ನು ಪರಿಗ್ರಹಿಸುವಲ್ಲಿ ಏಕಜಟಿಯ ಪಾತ್ರ ಸೋತಿದೆ ಎಂದೇ ಹೇಳಬೇಕು.

**೩.೧.೯ ಪ್ರಘಸೆತಾ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಪ್ರಘಸೆತಾ ಸಾಂಪ್ರದಾಯಿಕ ಮಾದರಿಗೆ ಒಂದು ನಿದರ್ಶನ. ಪ್ರಘಸೆತಾಳ ಮಾತಲ್ಲಿ ಕ್ರೌರ್ಯ ಇದೆ. ಕೋಪದ ಕಿಡಿನುಡಿಗಳು ಒಂದಾದ ಮೇಲೆ ಒಂದರಂತೆ ಪ್ರಯೋಗವಾಗುತ್ತಲೇ ಇರುತ್ತವೆ. ಅಶೋಕವನದ ವ್ಯಾಪ್ತಿಗೆ ಬರುವ ಮಹಿಳಾಸಮುದಾಯದಲ್ಲಿ ಪ್ರಘಸೆತಾಳ ಪಾತ್ರವೂ ಒಂದು. ರಾವಣನ ವಿಚಾರಕ್ಕೆ ಸಂಬಂಧಿಸಿದಂತೆ ಏಕಜಟಿ ಮತ್ತು ಪ್ರಘಸೆತಾಳ ಅಭಿಪ್ರಾಯದಲ್ಲಿ ಒಮ್ಮತವಿದೆ. ಏಕಜಟಿ ಯಾವ ನೆಲೆಯಿಂದ ರಾವಣನನ್ನು ಗ್ರಹಿಸಿದ್ದಾಳೋ ಪ್ರಘಸೆತಾಳೂ ಅದೇ ಮಾದರಿಯಲ್ಲಿ ರಾವಣನ್ನು ಸ್ವೀಕರಿಸಿದವಳು. ಏಕಜಟಿ ರಾವಣನ ಕುರಿತು ನಾನಾ ವಿಧದ ಹೊಗಳಿಕೆಯ ಮಾತುಗಳನ್ನು ಆಡಿದಾಗ ಸೀತೆ ಅಲಕ್ಷ್ಯ ತೋರುತ್ತಾಳೆ. ಈ ಸಂದರ್ಭದಲ್ಲಿ ಗರ್ಜಿಸುತ್ತಾ ತನ್ನ ಕೋಪಾಟೋಪವನ್ನು ಪ್ರತಿಕ್ರಿಯೆಯ ರೂಪದಲ್ಲಿ ಪ್ರಕಟಿಸಿದವಳು ಪ್ರಘಸೆತಾ.

ರಾವಣನ ಶೌರ್ಯ, ಸೌಂದರ್ಯವನ್ನು ತಿರಸ್ಕರಿಸುವ ನೀನು ಮರುಳೆ ಎಂಬಂತೆ ಪ್ರಘಸೆತಾ ಸೀತೆಯನ್ನು ದೂಷಿಸುತ್ತಾಳೆ. ಆದರೆ ಸೀತೆಯನ್ನು ದೂಷಿಸುವ ಸೀಮಿತ ಉದ್ದೇಶ ಇಲ್ಲಿ ಪ್ರಘಸೆತಾಗೆ ಇಲ್ಲ. ಸೀತೆಯ ಮನ ಒಲಿಸಿ ರಾವಣನ ಕಡೆ ವಾಲುವಂತೆ ಮಾಡುವ ಉದ್ದೇಶವೇ ಆಕೆಗೆ ಮುಖ್ಯ. ರಾವಣನ ಹಿತವನ್ನು ತನ್ನ ಹಿತವೆಂದು ಪರಿಗಣಿಸಿದವಳು ಪ್ರಘಸೆತಾ. ಹಾಗಾಗಿ ರಾವಣನ ಕುರಿತು ಸೀತೆಯ ತಿರಸ್ಕಾರ ಆಕೆಗೆ ಅಸಹನೀಯವಾಗುತ್ತದೆ.

ಸೀತೆಯ ಕುರಿತು ಪ್ರಘಸೆತಾಳ ಆಕ್ರೋಶ ವಿಪರೀತವಾಗಿ ಕಂಡರೂ ಇದರ ಹಿಂದಿನ ಉದ್ದೇಶ ಬಹುಮುಖ್ಯವಾಗುತ್ತದೆ. ವಾಸ್ತವವಾಗಿ ಪ್ರಘಸೆತಾಳಿಗೆ ರಾವಣನ ಮೇಲೆ ಇರುವ ಅಪಾರ ಪ್ರೀತಿಯೇ ಈ ರೋಷಕ್ಕೆ ಕಾರಣ. ಎಲ್ಲರೂ ರಾವಣನನ್ನು ಒಪ್ಪಬೇಕು. ಅವನ ಶೌರ್ಯವನ್ನು ಮೆಚ್ಚಬೇಕು ಎಂಬ ಉದ್ದೇಶ ಆಕೆಯದ್ದು. ರಾವಣನ ಸಾಮ್ರಾಜ್ಯವನ್ನು ಕಂಡ ಆಕೆ ಲಂಕಾಸಾಮ್ರಾಜ್ಯವನ್ನು ಮೀರಿದ ಸಾಮ್ರಾಜ್ಯ ಇಲ್ಲ ಎಂದೇ ಬಗೆದವಳು. ರಾವಣನ ಕುರಿತ ಈ ಕುರುಡು ವ್ಯಾಮೋಹವೇ ಆಕೆಯನ್ನು ಬಂಧಿಸಿದೆ. ಈ ಹಿನ್ನೆಲೆಯಲ್ಲಿ

ರಾವಣನ ಆಜ್ಞಾಪಾಲಕಿಯಾಗಿಯೇ ತನ್ನ ಬದುಕನ್ನು ಆಕೆ ರೂಪಿಸಿಕೊಳ್ಳುತ್ತಾಳೆ. ರಾವಣನ ಆಸೆಯನ್ನು ಈಡೇರಿಸುವಲ್ಲಿ ತನ್ನ ಬದುಕನ್ನು ಮೀಸಲಿರಿಸುವ ಪ್ರಘಸೆತಾ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸಾಂಪ್ರದಾಯಿಕ ಮಾದರಿಯ ಪಾತ್ರವಾಗಿ ಕಾಣಿಸಿದೆ.

### ೩.೧.೧೦ ವಿಕಟೆ

ರಾವಣನ ಮಾನಸಿಕ ದೌರ್ಬಲ್ಯ ಮತ್ತು ಕ್ರೌರ್ಯವನ್ನು ಸಾಧನೆಯಾಗಿ ಸ್ವೀಕರಿಸಿದವಳು ವಿಕಟೆ. ಈಕೆಯ ಚಿಂತನೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸಾಂಪ್ರದಾಯಿಕ ಮಾದರಿಯದ್ದು. ರಾವಣನನ್ನು ತಿರಸ್ಕರಿಸಿದ ಸೀತೆ ವಿಕಟೆಯ ದೃಷ್ಟಿಯಲ್ಲಿ ಮೂರ್ಖಳು. ಸಮಸ್ತ ಲೋಕವೇ ರಾವಣನಿಂದ ನಡೆಯುತ್ತಿದೆ ಎಂದು ಬಗೆದ ವಿಕಟೆ ಸೀತೆಯ ಮನ ಒಲಿಸಲು ಪ್ರಯತ್ನಿಸುತ್ತಾಳೆ. ಲಂಕಾಸಾಮ್ರಾಜ್ಯವನ್ನೇ ವೈಭವದ ಶಿಖರ ಎಂದು ಬಗೆದ ವಿಕಟೆಗೆ ಇದನ್ನು ಮೀರಿದ ಹೊರ ಪ್ರಪಂಚದ ಅರಿವು ಇಲ್ಲ. ಸೀತೆಯನ್ನು ಒಲಿಸುವ ಈಕೆಯ ಮಾತುಗಳಲ್ಲಿ ಈ ವಿಚಾರ ವ್ಯಕ್ತವಾಗುತ್ತದೆ. ಪಂಚಭೂತಗಳು ಇಂದು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿದೆ ಎಂದರೆ ಇದಕ್ಕೆ ಕಾರಣ ರಾವಣನ ಭೀತಿ ಎಂದು ವಿಕಟೆ ತಿಳಿದಿದ್ದಾಳೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಏಕಜಟಿ, ಪ್ರಘಸೆತಾ ಮತ್ತು ವಿಕಟೆಯರು ರಾವಣನನ್ನು ಶೌರ್ಯ, ಸಂಪತ್ತು ಮತ್ತು ಸೌಂದರ್ಯದ ನೆಲೆಯಲ್ಲಿ ಸ್ವೀಕರಿಸಿದ್ದಾರೆ.

ರಾವಣನ ಅಟ್ಟಹಾಸಕ್ಕೆ, ಕೋಪಾಟೋಪಕ್ಕೆ, ಸ್ವಾರ್ಥಕ್ಕೆ, ವ್ಯಾಮೋಹಕ್ಕೆ ಬಲಿಯಾದ ಮಹಿಳಾಸಮುದಾಯದ ಬದುಕು ನಲುಗಿ ಹೋಗುವುದು ಎಂಬ ಪ್ರಜ್ಞೆ ವಿಕಟೆಗೆ ಇಲ್ಲ. ವೈಯಕ್ತಿಕ ನೆಲೆಯಿಂದ ಮಹಿಳೆಯರ ಬದುಕನ್ನು ಕಾಣುವ, ಅವರ ಸಂವೇದನೆಯನ್ನು ಅರ್ಥೈಸಿಕೊಳ್ಳುವ ಕಣ್ಣೂ ಇಲ್ಲ. ಹಾಗಾಗಿ ರಾವಣನ ಕ್ರೌರ್ಯವನ್ನು, ಹಿಂಸೆಯನ್ನು ದುಷ್ಟತನವನ್ನು, ಅಮಾನವೀಯತೆಯನ್ನು ಪರಿಗ್ರಹಿಸದ ವ್ಯಕ್ತಿತ್ವವಾಗಿ ಆಕೆ ಕಾಣಿಸಿದ್ದಾಳೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ವಿಕಟೆಗೆ ರಾವಣನ ಬದುಕು ಮುಖ್ಯವಾಯಿತೇ ವಿನಾ ಸೀತೆಯ ಬದುಕಲ್ಲ.

### ೩.೧.೧೧ ತಾರಾಕ್ಷಿ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರಾಕ್ಷಿಯ ಪಾತ್ರ ಸಾಂಪ್ರದಾಯಿಕ ಮಾದರಿಯಲ್ಲಿ ಸಾಗಿದೆ. ರಾವಣನ ಮಗನಾದ ಇಂದ್ರಜಿತು ಯುದ್ಧರಂಗಭೂಮಿಯಲ್ಲಿ ಮಡಿದಾಗ ಸಹಗಮನದ ಮೂಲಕ ಪ್ರಾಣತ್ಯಾಗ ಮಾಡಲು ನಿಶ್ಚಯಿಸಿದವಳು ತಾರಾಕ್ಷಿ. ತಾರಾಕ್ಷಿಯ ಪಾತ್ರನಿರೂಪಣೆಗೆ ಸಂಬಂಧಿಸಿದಂತೆ ಕವಿ ಸಾಂಪ್ರದಾಯಿಕ ಲೇಪವನ್ನು

ಅಳವಡಿಸಿರುವುದು ಇಲ್ಲಿ ಕಂಡುಬರುತ್ತದೆ. ಮಹಾನ್ವೇಷಣಂ ಮಹಾಕಾವ್ಯದ ತಾರಾಕ್ಷಿಯ ಸಾವಿನ ಸಂದರ್ಭವನ್ನು ತಪ್ಪಿಸುವವನು ರಾವಣನೇ ಆಗಿದ್ದಾನೆ. ಯಾವುದೇ ಸ್ವತಂತ್ರ ಚಿಂತನೆಗಳು ಇಲ್ಲದ, ಸ್ವಂತಿಕೆಯ ತೀರ್ಮಾನಗಳನ್ನು ಕೈಗೊಳ್ಳದ ದುರ್ಬಲ ವ್ಯಕ್ತಿತ್ವವಾಗಿ ತಾರಾಕ್ಷಿ ಕಾಣಿಸಿದ್ದಾಳೆ. ಪತಿಯನ್ನು ಕಳೆದುಕೊಂಡ ಮಹಿಳೆ ಸಮಾಜದಲ್ಲಿ ಸ್ವತಂತ್ರವಾಗಿ ಬದುಕಬಲ್ಲಳು ಎಂಬ ಚಿಂತನೆಯಾಗಲಿ, ದಿಟ್ಟತನವಾಗಲಿ ಆಕೆಯಲ್ಲಿ ಇಲ್ಲ. ತಾರಾಕ್ಷಿ ಸಹಗಮನದ ನಿರ್ಧಾರ ಕೈಗೊಳ್ಳುವುದರ ಹಿಂದೆ ಎರಡು ಮುಖ್ಯ ವಿಚಾರಗಳು ಸ್ಪಷ್ಟವಾಗುತ್ತವೆ.

೧. ಗಂಡನನ್ನು ಅಗಲಿದ ಮಹಿಳೆಯ ಬದುಕು ವ್ಯರ್ಥ ಎಂಬ ತೀರ್ಮಾನ ತಾರಾಕ್ಷಿಯದ್ದು.

೨. ಗಂಡನ ಅಗಲುವಿಕೆಯನ್ನು ಸಹಿಸಲು ಸಾಧ್ಯವಿಲ್ಲದ ದುರ್ಬಲ ವ್ಯಕ್ತಿತ್ವವಾಗಿ ತಾರಾಕ್ಷಿ ಕಾಣಿಸಿದ್ದಾಳೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರಾಕ್ಷಿ ಮಾವನಾದ ರಾವಣನ ಮಾತಿಗೆ ಬೆಲೆತೆತ್ತು ಸಮಾಧಾನಪಟ್ಟುಕೊಳ್ಳುತ್ತಾಳೆ. ಇಂದ್ರಜಿತುವಿನ ಮಗ ವಜ್ರಾರಿ ಅನಾಥನಾಗಬಾರದು ಎಂಬ ಉದ್ದೇಶ ರಾವಣನದ್ದು. ತನ್ನ ಕುಲದ ಕುಡಿಯ ಕುರಿತು ರಾವಣನಿಗೆ ವಿಶೇಷವಾದ ಒಲವು ಇದೆ. ಹಾಗಾಗಿ ತಾರಾಕ್ಷಿಗೆ ಉಪದೇಶ ಹೇಳಿದ ರಾವಣ ಅವಳ ಸಾವನ್ನು ತಪ್ಪಿಸುತ್ತಾನೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸಾಂಪ್ರದಾಯಿಕ ಮಾದರಿ ಪಾತ್ರಗಳಿಗೂ ಶಿಷ್ಟ ರಾಮಾಯಣ ಪರಂಪರೆಯ ರಾಮಾಯಣಗಳ ಪಾತ್ರಗಳಿಗೂ ಸಾಮ್ಯ ಇದೆ. ಮಹಾನ್ವೇಷಣಂ ಮಹಾಕಾವ್ಯದ ಕವಿ ಶಿಷ್ಟ ಸಂಪ್ರದಾಯದ ನಿಲುವನ್ನು ಒಡೆದು ತನ್ನದೇ ಆದ ನೆಲೆಯಲ್ಲಿ ರಾಮಾಯಣದ ಮಹಿಳಾ ಪಾತ್ರಗಳನ್ನು ಕಟ್ಟುವ ಉದ್ದೇಶ ಹೊಂದಿದ್ದಾರೆ. ಈ ತುಡಿತದಲ್ಲಿ ಶಿಷ್ಟ ರಾಮಾಯಣ ಪರಂಪರೆಗಿಂತ ಭಿನ್ನವಾಗಿ ಸಾಂಪ್ರದಾಯಿಕ ಚಿಂತನೆಯನ್ನು ಮೀರಿ ಪಾತ್ರ ನಿರೂಪಿಸಲು ಯತ್ನಿಸಿದ್ದಾರೆ. ಆದರೆ ಈ ಹಂತದ ಪ್ರಯತ್ನದಲ್ಲಿ ಸಂಪೂರ್ಣವಾಗಿ ಕವಿಗೆ ಸಾಂಪ್ರದಾಯಿಕ ಚಿಂತನೆಯನ್ನು ಮೀರಲು ಸಾಧ್ಯವಾಗಲಿಲ್ಲ ಎನ್ನಬೇಕು. ಈ ನಿರೂಪಣೆಗೆ ಸಂಬಂಧಿಸಿದಂತೆ ಮುಖ್ಯವಾಗಿ ಎರಡು ವಿಚಾರಗಳನ್ನು ಕೈಗೆತ್ತಿಕೊಳ್ಳಬಹುದು.

೧. ಕೆಲವು ಪಾತ್ರಗಳನ್ನು ಸಾಂಪ್ರದಾಯಿಕ ನೆಲೆಯಲ್ಲಿಯೇ ನಿರೂಪಿಸಬೇಕು ಎಂಬ ಪರಿಕಲ್ಪನೆ ಕವಿಯದಾಗಿರಬಹುದು. ಹಾಗಾಗಿ ಕೆಲವು ಮಹಿಳಾ ಪಾತ್ರಗಳ ನಿರೂಪಣೆಗೆ ಸಂಬಂಧಿಸಿದಂತೆ ಕವಿ ಸಾಂಪ್ರದಾಯಿಕ ಚಿಂತನೆಯನ್ನು ಮೀರಿಲ್ಲ.

೨. ಕವಿಗೆ ಸಾಂಪ್ರದಾಯಿಕ ಚಿಂತನೆಯನ್ನು ಮೀರಲು ಸಾಧ್ಯವಿಲ್ಲದ ಸ್ಥಿತಿ ಇರಬಹುದು. ಒಟ್ಟಿನಲ್ಲಿ ಹೇಳುವುದಾದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ

ಬಹುತೇಕ ಮಹಿಳಾ ಪಾತ್ರಗಳು ಸಾಂಪ್ರದಾಯಿಕ ಮಾದರಿಯಲ್ಲಿ ಸಂಚರಿಸುತ್ತವೆ. ಈ ಮಹಾಕಾವ್ಯದ ಕವಿಯ ಮೇಲೆ ಶಿಷ್ಟ ರಾಮಾಯಣ ಪರಂಪರೆಯ ಸಾಂಪ್ರದಾಯಿಕ ಚಿಂತನೆಗಳ ಪ್ರಭಾವಿದೆ.

### ೫.೨ ಪ್ರತಿಭಟನಾತ್ಮಕ ಮಾದರಿ

ಸಮಾಜವ್ಯವಸ್ಥೆಯನ್ನು ಪ್ರತಿಭಟಿಸುತ್ತಾ ಕ್ರಾಂತಿಕಾರಿ ಧೋರಣೆ ತಳೆದ ಮಹಿಳಾ ಪಾತ್ರಗಳು ಮಹಾನ್ವೇಷಣಂ ಮಹಾಕಾವ್ಯದಲ್ಲಿ ಇವೆ. ಪ್ರತಿಭಟನಾತ್ಮಕ ಮಾದರಿ ಪಾತ್ರಗಳು ಅಸ್ತಿತ್ವದ ಉಳಿವಿಕೆಗಾಗಿ ಹೋರಾಟ ನಡೆಸುತ್ತವೆ. ಶಿಷ್ಟ ಕಾವ್ಯಪರಂಪರೆ ಪಕ್ಷಪಾತ ಧೋರಣೆಯಿಂದ ಪುರುಷಪ್ರಧಾನ, ಮಹಿಳೆ ಅಧೀನ ಎಂಬಂತೆ ನಿರೂಪಿಸಿದೆ. ಪುರುಷ, ಶ್ರೀಮಂತ, ಪ್ರಭುತ್ವ ಸಂಸ್ಕೃತಿಯನ್ನು ಪ್ರೋತ್ಸಾಹಿಸುತ್ತಾ ಮಹಿಳೆ, ದೀನದಲಿತ, ಪ್ರಜಾಪರಂಪರೆಯನ್ನು ನಿರ್ಲಕ್ಷಿಸಿದೆ. ನಿರ್ಲಕ್ಷಿತರನ್ನು ದುರ್ಬಲರು ಎಂದು ಆರೋಪಿಸಿ ಅವರ ಸಹಜ ಸಾಮರ್ಥ್ಯವನ್ನು ಅಡಗಿಸಿದ ಶಿಷ್ಟ ಪರಂಪರೆಯ ನಿಲುವನ್ನು ಒಡೆದು ಸಮಕಾಲೀನ ಸಂದರ್ಭಕ್ಕೆ ಅನುಗುಣವಾದ ತಾತ್ವಿಕತೆಯನ್ನು ಅಳವಡಿಸಿದ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'. ಹೀಗೆ ಪಾತ್ರಗಳಿಗೆ ನ್ಯಾಯ ಒದಗಿಸುತ್ತಾ ಶೋಷಣೆಗೆ ಒಳಗಾದ ಸಮುದಾಯವನ್ನು ಪ್ರಧಾನವಾಹಿನಿಗೆ ತರಲಾಗಿದೆ. ಈ ಮೂಲಕ ಶೋಷಿತ ಸಮುದಾಯದ ಮೂಕತೆಗೆ ಮಾತಿನ ಅವಕಾಶ ಕಲ್ಪಿಸಿದೆ. ಈ ಬೆಳವಣಿಗೆಗೆ ಸಾರ್ವಕಾಲಿಕ ಮನ್ನಣೆ ಇದೆ.

ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕ್ರಾಂತಿಕಾರಿ ಧೋರಣೆ ಇದೆ. ಹಾಗಾಗಿ ಇಲ್ಲಿನ ಮಹಿಳಾ ಪಾತ್ರಗಳು ನಿರ್ಭೀತಿಯಿಂದ ವ್ಯವಸ್ಥೆಯ ವಿರುದ್ಧ ಹೋರಾಡುತ್ತವೆ. ಈ ಹೋರಾಟದ ಹಾದಿಯಲ್ಲಿ ಎದುರಾಗುವ ಕಲ್ಲುಮುಳ್ಳುಗಳನ್ನು ಮೀರುವ ಶಕ್ತಿ ಸ್ತ್ರೀಸಮುದಾಯಕ್ಕೆ ಇದೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಮೌನವಹಿಸಿರುವ ಮಹಿಳಾ ಪಾತ್ರಗಳು ಮಹಾನ್ವೇಷಣಂನಲ್ಲಿ ಮಾತಾಡಿವೆ. ಅನ್ಯಾಯದ ವಿರುದ್ಧ ಪ್ರತಿಭಟಿಸಿವೆ. ಈ ಮೂಲಕ ಸಾಮಾಜಿಕ ಸ್ವಾತಂತ್ರ್ಯದ ಅನಿವಾರ್ಯತೆಯನ್ನು ಅಪೇಕ್ಷಿಸಿವೆ. ಮಹಾನ್ವೇಷಣಂ ಮಹಾಕಾವ್ಯದ ಪ್ರತಿಭಟನಾತ್ಮಕ ಮಾದರಿ ಪಾತ್ರಗಳು: ಶೂರ್ಪನಖಿ, ಕೈಕೆ, ಮಂಥರೆ, ರುಮೆ. ಸೀತೆ, ವೇದವತಿ.

#### ೫.೨.೧ ಶೂರ್ಪನಖಿ

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿ ರಕ್ಕಸಿಯಲ್ಲ. ಮಾನವಸಹಜ ಭಾವನೆ ಕಾಮನೆಗೆ ಕೈಗನ್ನಡಿಯಂತೆ ಆಕೆಯ ವ್ಯಕ್ತಿತ್ವ ನಿರೂಪಿತವಾಗಿದೆ. ಬಹುತೇಕ ಸಾಂಪ್ರದಾಯಿಕ ರಾಮಾಯಣಗಳು ರಾಮಲಕ್ಷ್ಮಣರಿಗೆ ದೈವಿಕ ನೆಲೆಯ ನಿರೂಪಣೆ ನೀಡಲಾಗಿದೆ. ಈ

ಭರದಲ್ಲಿ ಶೂರ್ಪನಖಿಯ ತೇಜೋವಧೆ ನಡೆದಿದೆ. ಅವಳ ವೈಯಕ್ತಿಕ ಆಕಾಂಕ್ಷೆ, ಉದ್ದೇಶ, ಗುರಿ, ಸಾಧನೆಯ ಕುರಿತು ಮೌನವಹಿಸಿದೆ. ಪ್ರಭುತ್ವ, ಯಜಮಾನ ಸಂಸ್ಕೃತಿಯ ವೈಭವೀಕರಣದ ಭರದಲ್ಲಿ ಆಕೆಯ ಬದುಕನ್ನು ನಿರ್ಲಕ್ಷಿಸಲಾಗಿದೆ. ಈ ನಿರ್ಲಕ್ಷಭಾವವನ್ನು ಸಹಜ ಎಂಬಂತೆ ಸ್ವೀಕರಿಸಿ ರಕ್ಕಸಿಯಾಗಿ ನಿರೂಪಿಸಲಾಗಿದೆ. ಹೀಗೆ ಅವಳ ಸಹಜ ವ್ಯಕ್ತಿತ್ವವನ್ನು ದಮನಗೊಳಿಸಲಾಗಿದೆ.

ವಾಲ್ಮೀಕಿ ರಾಮಾಯಣದಲ್ಲೂ ಶೂರ್ಪನಖಿಯನ್ನು ಅಮಾನವೀಯ ನೆಲೆಯಲ್ಲಿ ನಿರೂಪಿಸಲಾಗಿದೆ. ರಾವಣನ ತಂಗಿ, ರಕ್ಕಸಿ, ಭಯಂಕರ ಸ್ವರೂಪಿಣಿ, ಪಾಶವೀ ಪ್ರವೃತ್ತಿಗಳನ್ನು ಮೈಗೂಡಿಸಿಕೊಂಡವಳು ಎಂಬಂತೆ ನಿರೂಪಿಸಲಾಗಿದೆ. ಹೀಗೆ ಶೂರ್ಪನಖಿಯ ವ್ಯಕ್ತಿತ್ವ ಸಹೃದಯ  ಓದುಗರ ಮನಸ್ಸಲ್ಲಿ ಭೀಕರಭಾವದ ಅಲೆ ಎಬ್ಬಿಸಿದೆ. ಅವಳನ್ನು ಜೀವದ ನೆಲೆಯಲ್ಲಿ, ಮಾನವೀಯತೆಯ ನೆಲೆಯಲ್ಲಿ ಪರಿಗ್ರಹಿಸಿಲ್ಲ. ಮಾನವ ಕುಲದೊಡನೆ ಸೇರಿಸಿಯೂ ಇಲ್ಲ. ದುಷ್ಟ ವ್ಯಕ್ತಿತ್ವನ್ನಾಗಿ ನಿರೂಪಿಸಲಾಗಿದೆ. ಶಿಷ್ಟ ಕವಿಗಳ ಮನೋಭೂಮಿಕೆ ಶೂರ್ಪನಖಿಯನ್ನು ಹೀಗೆ ನಿರೂಪಿಸಲು ಕಾರಣ ಏನು? ಇದಕ್ಕೆ ಉತ್ತರರೂಪಿಯಾಗಿ ಕೆಲವು ಕಾರಣಗಳನ್ನು ಕಂಡುಕೊಳ್ಳಲು ಸಾಧ್ಯ.

೧. ಶೂರ್ಪನಖಿಗೆ  ದುರ್ಗುಣಗಳನ್ನು ಆರೋಪಿಸುತ್ತಾ ಸಮಾಜದ ದುಷ್ಟವ್ಯಕ್ತಿಗಳ ದುಷ್ಟತನದ ಹಿಂದೆ ದುಷ್ಟರೂಪ ಇರುತ್ತದೆ ಎಂಬುದನ್ನು ಸಾಬೀತುಪಡಿಸುವುದು ಮಾತ್ರವಲ್ಲ ದುಷ್ಟತನದ ಹಿಂದೆ ದುಷ್ಟ ವ್ಯಕ್ತಿತ್ವವನ್ನು ನಿರೂಪಿಸುವುದು.
೨. ದುಷ್ಟತನದ ನಾಶಕ್ಕಾಗಿ ರಾಮಲಕ್ಷ್ಮಣರು ಜನ್ಮ ಪಡೆದರು ಎಂಬುದನ್ನು ತಿಳಿಸುವ ಉದ್ದೇಶ ಇರಬಹುದು. ಈ ಮೂಲಕ ರಾಮಲಕ್ಷ್ಮಣರ ವ್ಯಕ್ತಿತ್ವವನ್ನು ವೈಭವೀಕರಿಸಲಾಗಿದೆ.
೩. ರಕ್ಕಸರಲ್ಲಿ ತಮೋಗುಣ ಸ್ವಾಭಾವಿಕ. ಅದು ಸಾತ್ತ್ವಿಕ ಸ್ವರೂಪಿಗಳಿಂದ ನಿರ್ನಾಮಗೊಳ್ಳುವುದು ಎಂಬ ಆಶಯ.
೪. ಧರ್ಮದಿಂದ ಅಧರ್ಮ ನಾಶವನ್ನು ತಿಳಿಸುವ ಉದ್ದೇಶ.

ಹೀಗೆ ಸಮಾಜ ಉದ್ಧಾರದ ಪರಿಕಲ್ಪನೆ ಇರಲಿ, ಮಾನವತ್ವದ ಪ್ರತಿಪಾದನೆ ಇರಲಿ, ದೈವಿಕ ನೆಲೆಯ ಅನಾವರಣ ಇರಲಿ. ಉದ್ದೇಶ ಯಾವುದಾದರೂ ಎದುರಿಗರನ್ನು ಜೀವದ ಅಂಶವಾಗಿ ಮಾನವತ್ವದ ನೆಲೆಯಲ್ಲಿ ಪರಿಗಣಿಸದೆ ಹೋದರೆ ಸಾರ್ಥಕತೆ ಏನು?

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯ ಪಾತ್ರ ವಸ್ತುಸ್ಥಿತಿಗೆ ಅನುಗುಣವಾಗಿ ಸ್ಪಂದಿಸಿದೆ. ಮಹಿಳೆಯ ಅಂತರಂಗದ ಆಸೆ, ಅಭಿಲಾಷೆಯನ್ನು ನಿರೂಪಿಸಲಾಗಿದೆ.

ಶೂರ್ಪನಖಿ ರಾಮನನ್ನು ಬಯಸಿದ ವಿಚಾರದ ಕುರಿತು ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಆಕ್ರೋಶವಿಲ್ಲ. ಶೂರ್ಪನಖಿಯ ಬಯಕೆ ಮಾನವಸಹಜ ಎಂಬಂತೆ ನಿರೂಪಿಸಲಾಗಿದೆ. ಈ ವಿಚಾರದಲ್ಲಿ ಕವಿ ಉದಾತ್ತತೆಯನ್ನು ತಾಳಿದ್ದಾರೆ. ಮೋಹಕ ಮಾತುಗಳಿಂದ ರಾಮಲಕ್ಷ್ಮಣರನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ಆಕೆಯ ವ್ಯಕ್ತಿತ್ವ ಸಹಜವಾಗಿಯೇ ಮೂಡಿದೆ. ಈ ವಿಚಾರದಲ್ಲಿ ತಪ್ಪು, ಸರಿಯ ಪ್ರಸ್ತಾಪವಿಲ್ಲ. ಆದರೆ ಇದಕ್ಕೆ ಪ್ರತಿಯಾಗಿ ರಾಮಲಕ್ಷ್ಮಣರ ಪ್ರತಿಕ್ರಿಯೆಯ ಕುರಿತು ಕವಿಗೆ ಖೇದವಿದೆ. ಶೂರ್ಪನಖಿಯ ಮೂಗನ್ನು ಕತ್ತರಿಸಿದ್ದು ಮಾತ್ರವಲ್ಲ ಸೀತೆಯೊಂದಿಗೆ ಸೇರಿ ಅಪಹಾಸ್ಯಗೈದದ್ದು ಅಸಹನೀಯವಾಗಿ ಚಿತ್ರಿತವಾಗಿದೆ. ಕವಿ ಮಾನವೀಯ ನೆಲೆಯಲ್ಲಿ ಈ ಕುರಿತು ಚಿಂತನೆ ನಡೆಸಿದ್ದಾರೆ. ಶೂರ್ಪನಖಿಯ ಬಯಕೆಗೆ ಪ್ರತಿಯಾಗಿ ರಾಮಲಕ್ಷ್ಮಣಸೀತೆಯರು ಶೂರ್ಪನಖಿಯನ್ನು ಹೀನಾಯವಾಗಿ ನಡೆಸಿಕೊಂಡಿದ್ದಾರೆ. ಕವಿಗೆ ಶೂರ್ಪನಖಿಯ ಕುರಿತು ಕಾಳಜಿ ಇದ್ದರೂ, ಅವಳ ಒಳತೋಟಿಯನ್ನು ಗ್ರಹಿಸಿದರೂ ತೇಜೋವಧೆಯ ಪ್ರಸಂಗವನ್ನು ಉಳಿಸಿಕೊಳ್ಳಲು ಕಾರಣ ಏನು?

೧. ಶೂರ್ಪನಖಿಯ ತೇಜೋವಧೆಯ ಪ್ರಸಂಗದಲ್ಲಿ ಕವಿ ಶಿಷ್ಟ ರಾಮಾಯಣ ಪರಂಪರೆಯನ್ನು ಮೀರಲಾಗದ ಸ್ಥಿತಿಗೆ ತಲುಪಿರುವುದು ಸ್ಪಷ್ಟ.

೨. ರಾಮನ ಏಕಪತ್ನಿವ್ರತ ನಿಷ್ಠೆಯನ್ನು ಬಲಗೊಳಿಸುವ ಉದ್ದೇಶ ಕವಿಗೆ ಮುಖ್ಯವಾಯಿತು. ಆದ್ದರಿಂದ ಪರಪುರುಷರನನ್ನು ಸ್ತ್ರೀಯಾದವಳು ಬಯಸುವುದು ಅಪರಾಧ ಎಂಬಂತೆ ನಿರೂಪಿಸಲಾಗಿದೆ.

೩. ವಂಶಪಾರಂಪರ್ಯವಾಗಿ ಬಂದ ಅಹಂಭಾವ ರಾಮಲಕ್ಷ್ಮಣಸೀತೆಯರಲ್ಲೂ ಇತ್ತು. ಹಾಗಾಗಿ ಶೂರ್ಪನಖಿಯ ಬದುಕು, ಬಯಕೆಗಳೊಂದಿಗೆ ರಾಮಲಕ್ಷ್ಮಣರು ಆಟವಾಡಿದರು.

ಶೂರ್ಪನಖಿ ಬಾಲ್ಯವಿವಾಹ ವ್ಯವಸ್ಥೆಗೆ ಒಳಪಟ್ಟವಳು. ವಿದ್ಯುಜ್ಜಿಹ್ವ ಕಾಲವಾದ ಬಳಿಕ ಮಾನವಸಹಜ ಕಾಮನೆಗೆ ಸಿಲುಕಿದವಳು. ಪತಿಯನ್ನು ಅಗಲಿದ ಸತಿಯ ಮಾನಸಿಕ ವೇದನೆ, ಹತಾಶೆ, ಪ್ರೀತಿಯ ಅಪೇಕ್ಷೆ, ಹಂಬಲ, ತುಡಿತ ಸಹಜವಾಗಿಯೆ ಆಕೆಯನ್ನು ಕಾಡಿದೆ. ಒಬ್ಬ ಸುಂದರ, ಸ್ಫುರದ್ರೂಪಿ, ಸಾಧುವ್ಯಕ್ತಿತ್ವದ ಪುರುಷ ತನ್ನ ಸಂಗಾತಿ ಆಗಬೇಕು ಎಂಬ ತುಡಿತ ಆಕೆಯಲ್ಲೂ ಇತ್ತು. ಈ ಬಯಕೆಯ ಹಿನ್ನೆಲೆಯಲ್ಲಿ ಯಾವುದೇ ತಪ್ಪು, ಅಪರಾಧ, ಪೂರ್ವಗ್ರಹವನ್ನು ಗ್ರಹಿಸುವಂತಿಲ್ಲ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಶೂರ್ಪನಖಿ ಮಾನವೀಯತೆಯ ಪ್ರತಿಪಾದಕಳು. ಧರ್ಮ–ಅಧರ್ಮ, ಸತ್ಯ–ಅಸತ್ಯ, ನ್ಯಾಯ–ಅನ್ಯಾಯಗಳ ಪರಿಚಯ ಉಳ್ಳವಳು. ರಾಮಲಕ್ಷ್ಮಣರು ಬದುಕಿನ ಅನ್ವೇಷಕರು ಎಂಬ ಸಹಜ ಸತ್ಯ ಅರಿತವಳು. ಹಾಗಾಗಿ ಹಿಂಸಾಜನಕ ಪ್ರವೃತ್ತಿ ನಿಮ್ಮ ಸಾಧನೆಗೆ ತಡೆ ಒಡ್ಡುವುದು ಎಂದು ರಾಮಲಕ್ಷ್ಮಣರನ್ನು ಎಚ್ಚರಿಸುತ್ತಾಳೆ. ಅಹಿಂಸೆ, ಮಾನವೀಯತೆ, ಸತ್ಯ, ಪ್ರೇಮತತ್ತ್ವಕ್ಕೆ

ಬದ್ಧರಾದಲ್ಲಿ ಬದುಕು ಸಾರ್ಥಕ ಎಂಬ ಆಶಯ ಅವಳದ್ದು. ತನ್ನನ್ನು ತಿರಸ್ಕರಿಸಿದ ರಾಮಲಕ್ಷ್ಮಣರಿಗೆ ಸವಾಲು ಎಸಗುವ ಸನ್ನಿವೇಶ ಶೂರ್ಪನಖಿ ದಿಟ್ಟೆ ಎಂಬುದನ್ನು ಸಾಕ್ಷೀಕರಿಸುತ್ತದೆ. ಈ ಸವಾಲು ಎಸಗುವಲ್ಲಿ ಆಕೆಗೆ ಹಿಂಜರಿಕೆಯಾಗಲಿ, ಭೀತಿಯಾಗಲಿ ಇಲ್ಲ. ಸ್ತ್ರೀಹತ್ಯೆ ಹಿಂಸೆ, ಪಾಪಕರವಾದದ್ದು ಎಂಬುದನ್ನು ಕವಿ ಶೂರ್ಪನಖಿಯಿಂದಲೇ ಹೇಳಿಸಿದ್ದಾರೆ. ಸ್ತ್ರೀಹಿಂಸೆಯನ್ನು ಪರಿಣಾಮಕಾರಿಯಾಗಿ ಹೇಳುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇದೆ.

ಸ್ತ್ರೀಸಮುದಾಯಕ್ಕೆ ಸಾರ್ವಕಾಲಿಕ ಮನ್ನಣೆ ದಕ್ಕಬೇಕು ಎಂಬ ಉದ್ದೇಶ ಈ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಶಿಷ್ಟ ಪರಂಪರೆ ಶೂರ್ಪನಖಿಯನ್ನು ಹೀನಾಯವಾಗಿ ನಡೆಸಿಕೊಂಡುದರ ಕುರಿತು ಕವಿಗೆ ಖೇದವಿದೆ. ಹಾಗಾಗಿ ಮಾನವೀಯ ನೆಲೆಯಲ್ಲಿ ಅವಳ ಮಾತುಗಳನ್ನು ಅಭಿವ್ಯಕ್ತಿಸಿದ್ದಾರೆ. ರಾಮಲಕ್ಷ್ಮಣರಿಗೆ ಜಾಗೃತಪ್ರಜ್ಞೆ ಮೂಡಿಸುವ ಕೆಲಸ ಇಲ್ಲಿ ಶೂರ್ಪನಖಿಯಿಂದಲೇ ನಡೆದಿದೆ. ತನ್ನನ್ನು ತಿರಸ್ಕರಿಸಿದವರ ಕುರಿತು ಆಕೆಗೆ ಆಕ್ರೋಶ ಇದೆ. ಹಿಂಸೆಯ ಮೂಲಕ ಪ್ರತೀಕಾರ ತೆಗೆದುಕೊಳ್ಳುವ ಉದ್ದೇಶ ಇಲ್ಲ. ಸಮಾಧಾನದ ಮಾತುಗಳಿಂದ ಅವರನ್ನು ಎಚ್ಚರಿಸಿದ್ದಾಳೆ. ಅಬಲೆಯರನ್ನು ಮೆಟ್ಟಿರುವ ನಿಮ್ಮನ್ನು ರಕ್ಷಿಸುವವರಾರು? ಎಂಬಲ್ಲಿ ಶೂರ್ಪನಖಿ ತನ್ನನ್ನು ತಾನೇ 'ಅಬಲೆ' ಎಂದಿರುವುದು ಸ್ಪಷ್ಟವಾಗುತ್ತದೆ. ಈ ಸಂಬೋಧನೆಯಿಂದ ಪುರುಷನಿರ್ಮಿತ ಆರೋಪಗಳಿಗೆ ಮಹಿಳೆ ಬದ್ಧಳಾಗಿದ್ದಾಳೆ ಎಂಬುದು ಸ್ಪಷ್ಟ. ಶೂರ್ಪನಖಿಯನ್ನು ಎಷ್ಟೇ ಉದಾತ್ತತೆಯ ನೆಲೆಯಲ್ಲಿ ನಿರೂಪಿಸ ಹೊರಟರೂ ಕವಿ ಸಾಂಪ್ರದಾಯಿಕ ನಿಲುವನ್ನು ಮೀರಲು ಅಸಹಾಯಕರಾಗಿರುವುದು ಇಲ್ಲಿ ವ್ಯಕ್ತ. ಶೂರ್ಪನಖಿಯಲ್ಲಿ ಹಟ, ಛಲ, ಸ್ತ್ರೀಕುಲದ ತಿರಸ್ಕಾರದ ವಿರುದ್ಧ ಆಕ್ರೋಶವಿದೆ. ಆದರೂ ತನ್ನನ್ನು 'ಅಬಲೆ' ಎಂದು ಸಂಬೋಧಿಸಿದುದರಲ್ಲಿ ಆಕೆಯ ಅಸಹಾಯಕತೆ ವ್ಯಕ್ತವಾಗುತ್ತದೆ. ಈ ಮೂಲಕ ಸ್ತ್ರೀಸಮುದಾಯವನ್ನು ಪ್ರಭುತ್ವಪರಂಪರೆ ಅಸಹನೀಯವಾಗಿ ನಡೆಸಿಕೊಂಡಿದೆ ಎಂಬುದು ಸ್ಪಷ್ಟ. ತನಗಾದ ಅನ್ಯಾಯಕ್ಕೆ ಖೇದ ವ್ಯಕ್ತಪಡಿಸುತ್ತಾ ಸಮಸ್ತ ಸ್ತ್ರೀಸಮುದಾಯಕ್ಕೆ ಆದ ಅವಮಾನ, ಅನ್ಯಾಯ ಎಂದು ಪರಿಗಣಿಸುತ್ತಾಳೆ. ಇದರೊಂದಿಗೆ ಸಮಸ್ತ ಲಂಕಾಸಂಸ್ಕೃತಿಗೆ ಆದ ಅನ್ಯಾಯ ಎಂಬುದನ್ನು ಖರದೂಷಣನಿಗೆ ಅರುಹುತ್ತಾ ಆತನನ್ನು ಜಾಗೃತಗೊಳಿಸುತ್ತಾಳೆ. ರಾಮಲಕ್ಷ್ಮಣರನ್ನು ಅಣ್ಣನ ಬಳಿ ದೂಷಿಸುವ ಸೀಮಿತ ಉದ್ದೇಶ ಆಕೆಗೆ ಇಲ್ಲ. ಬದಲಾಗಿ ಸಾಮುದಾಯಿಕ ನೆಲೆಯ ವ್ಯಕ್ತಿತ್ವದ ಪ್ರಶ್ನೆ, ಮಾನ-ಅಪಮಾನದ ಪ್ರಶ್ನೆ ಆಕೆಗೆ ಮುಖ್ಯವಾಗುತ್ತದೆ. ರಾಮಲಕ್ಷ್ಮಣರ ಅಮಾನುಷ ಪ್ರವೃತ್ತಿಯನ್ನು ಪರಿಗ್ರಹಿಸಿ ತನಗಾದ ಅವಮಾನ ಮಾತ್ರವಲ್ಲ ಸಮಸ್ತ ಸ್ತ್ರೀಕುಲದಿಂದ ತೊಡಗಿ ಸಮಗ್ರ ಸಾಮ್ರಾಜ್ಯಲಕ್ಷ್ಮಿಗಾದ ಅವಮಾನ ಮತ್ತು ಅನ್ಯಾಯ ಎಂದೇ ಪರಿಗಣಿಸುತ್ತಾಳೆ.

ಹಾಗಾಗಿ ಶೂರ್ಪನಖಿಯ ಹೋರಾಟ, ಕ್ರಾಂತಿಕಾರಕ ಮನೋಭಾವ ಕಠಿಣತಮ ಸ್ವರೂಪದ್ದಾಗಿದ್ದು ತೀವ್ರಮಟ್ಟದಲ್ಲಿ ಅನಾವರಣಗೊಂಡಿದೆ.

ಶೂರ್ಪನಖಿಯ ಮಾತು ಲಂಕಾಸಾಮಾಜ್ಯದ ಸ್ತ್ರೀಸ್ವಾತಂತ್ರ್ಯಕ್ಕೆ ಸಾಕ್ಷಿಯಾಗಿದೆ. ಪತಿ ವಿದ್ಯುಜ್ಜಿಹ್ವನು ಮಡಿದಾಗ ಯಾರೂ ಆಕೆಯನ್ನು ಲಂಕೆಯಲ್ಲಿ ಹೀನಾಯವಾಗಿ ಕಂಡಿಲ್ಲ. ವಿಧವಾ ಪುನರ್‌ವಿವಾಹಕ್ಕೆ ಅವಕಾಶ ಕಲ್ಪಿಸಲಾಗಿದೆ. ಈ ಉದ್ದೇಶದ ಸಾರ್ಥಕತೆಗೆ ಹಾತೊರೆದ ಶೂರ್ಪನಖಿ ರಾಮನ ರೂಪು, ಲಾವಣ್ಯಕ್ಕೆ ಮನಸೋಲುತ್ತಾಳೆ. ತನ್ನ ವರ್ಚಸ್ಸನ್ನು ವಧಿಸಿದ ರಾಮಲಕ್ಷ್ಮಣರ ಕುರಿತು ಆಕ್ರೋಶ ತಾಳಿದ ಆಕೆಗೆ ತನ್ನ ಬದುಕು, ಭಾವದ ಕುರಿತು ಮರುಕವಿದೆ. ತನ್ನ ಅಂತರಂಗಪ್ರೀತಿಗೆ ಸ್ಪಂದಿಸುವ ಗಂಡುಜೀವಿಯನ್ನು ಆಕೆ ಹುಡುಕುತ್ತಾಳೆ. ತನ್ನನ್ನು ತಿರಸ್ಕರಿಸಿದುದಕ್ಕಿಂತ ಅವಮಾನಗೊಳಿಸಿದುದರ ಬಗ್ಗೆ ಆಕೆಯ ಪ್ರತಿಕ್ರಿಯೆ ಇದೆ. ಈ ಪ್ರತಿಕ್ರಿಯೆಯನ್ನು ಆಕ್ರೋಶ, ಪ್ರತಿಭಟನೆಯ ಮಾರ್ಗದಲ್ಲಿ ಬಳಸಿಕೊಳ್ಳುತ್ತಾಳೆ. ವೈಯಕ್ತಿಕ ನೆಲೆಯ ದ್ವೇಷಕ್ಕಿಂತ ಸಾಮುದಾಯಿಕ ನೆಲೆಯ ದ್ವೇಷ ಆಕೆಗೆ ಮುಖ್ಯವಾಗುತ್ತದೆ. ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯ ಪಾತ್ರ ಪ್ರತಿಭಟನಾತ್ಮಕ ನೆಲೆಯಲ್ಲಿ ಸಾಗಿದೆ. ಪ್ರೌಢಚಿಂತನೆ, ಬುದ್ಧಿಕೌಶಲ್ಯ, ಸ್ತ್ರೀಸಮಾನತೆಗಾಗಿ ಹೆಣಗಾಟ, ಸ್ತ್ರೀಸಂವೇದನಾಶೀಲತೆ, ತಿರಸ್ಕಾರಕ್ಕೆ ಪ್ರತಿತಿರಸ್ಕಾರ ಆಕೆಯಲ್ಲಿ ಅಭಿವ್ಯಕ್ತಗೊಂಡಿದೆ. ಮಾನವತ್ವದ ಪ್ರತಿಪಾದನೆಯೊಂದಿಗೆ ಮಾನವ ಸ್ವರೂಪ, ಲಕ್ಷಣ, ಬಯಕೆಗಳೆಲ್ಲವೂ ಶೂರ್ಪನಖಿಯಲ್ಲಿ ಅಂತರ್ಗರ್ಭಿತವಾಗಿವೆ.

### ೫.೨.೨ ಕೈಕೆ

ಮಹಾನ್ವೇಷಣಂನಲ್ಲಿ ಕೈಕೆಯ ಸಹಜ ವ್ಯಕ್ತಿತ್ವದ ಮೇಲೆ ಮಂಥರೆಯ ಪ್ರಭಾವವಿದೆ. ಮಂಥರೆಯ ಮಾತಿನ ಸೂಕ್ಷ್ಮತೆಯ ಅರಿವು ಕೈಕೆಗೆ ಇದೆ. ಜೊತೆಯಲ್ಲಿ ಸ್ವಹಿತದ ಉದ್ದೇಶವೂ ಸಾಕಾರಗೊಂಡಿದೆ. ಮಂಥರೆಯ ಕುಟಿಲತೆ ಕೈಕೆಯ ಅಂತರಂಗಶಕ್ತಿಯನ್ನು ಭೇದಿಸಿದೆ. ಅರಮನೆಯ ರಾಣಿಯರ ಸವತಿಮಾತ್ಸರ್ಯದ ಬಿರುಕು ಕಾವ್ಯದಲ್ಲೆಲ್ಲೂ ನೇರವಾಗಿ ವ್ಯಕ್ತವಾಗಿಲ್ಲ. ಆದರೂ ಕೌಸಲ್ಯೆ ರಾಜಮಾತೆಯಾಗುವಳು ಎಂಬ ಆತಂಕ ಕೈಕೆಯಲ್ಲಿ ಇತ್ತೆಂದೇ ಹೇಳಬೇಕು. ತಾನು ಕಿರಿರಾಣಿ ಎಂಬ ಅರಿವು ಕೈಕೆಯಲ್ಲಿದ್ದರೂ ದಶರಥನ ಪ್ರೀತಿಗೆ ಕೊರತೆ ಇರಲಿಲ್ಲ. ಆದರೂ ಸ್ಥಾನಮಾನದ ಕೊರತೆ ಕೈಕೆಯನ್ನು ಕಾಡಿತ್ತು. ಈ ಅಂತರಂಗದ ಚಿಂತೆಗೆ ಮಂಥರೆಯ ಮೂಲಕ ಪರಿಹಾರ ಕಂಡುಕೊಳ್ಳಲು ಸಾಧ್ಯವಾಯಿತು. ಈ ಮೂಲಕ ಕೈಕೆಯ ಆಳದ ಅಪೇಕ್ಷೆ ಈಡೇರುವಂತಾಯಿತು. ಸಮಾಜದ ಸವತಿಮಾತ್ಸರ್ಯಭಾವ ಕೈಕೆಯನ್ನು ಕಾಡದಿರಲು ಅಸಾಧ್ಯ. ಹಾಗಾಗಿ ಮಂಥರೆಯ ಮಾತಿಗೆ ಕೈಕೆಯ ಸಮ್ಮತಿ ದೊರಕುವಂತಾಯ್ತು.

ಹೀಗೆ ಮಂಥರೆಯ ಮಾತಿಗೆ ಮೆಚ್ಚುಗೆ ವ್ಯಕ್ತಪಡಿಸಿದ ಕೈಕೆ ರಾಮನನ್ನು ಅರಮನೆಯ ವ್ಯಾಪ್ತಿಯಿಂದ ಹೊರಗೆ ಉಳಿಸಿದಳು.

ಶಿಷ್ಟ ರಾಮಾಯಣ ಪರಂಪರೆಯ ಕೈಕೆಯ ಪಾತ್ರಕ್ಕೂ ಮಹಾನ್ವೇಷಣಂ ಕಾವ್ಯದ ಕೈಕೆಯ ಪಾತ್ರಕ್ಕೂ ಸಾಮ್ಯ ಇದೆ. ಮಂಥರೆಯ ವ್ಯಕ್ತಿತ್ವ ಶಿಷ್ಟ ರಾಮಾಯಣದಲ್ಲಿ ಅಸಹನೀಯವಾಗಿ ತೋರಿದೆ. ಇಲ್ಲಿ ಕವಿ ಮಂಥರೆಯ ಪಾತ್ರ ನಿರೂಪಿಸುವಲ್ಲಿ ಉದಾರತೆ ತೋರಿದ್ದಾರೆ. ರಾಮನ ವನವಾಸಕ್ಕೆ ಪ್ರೇರಕಶಕ್ತಿ ಎಂಬಂತೆ ಮಂಥರೆಯೊಂದಿಗೆ ಕೈಕೆಯನ್ನೂ ನಿರೂಪಿಸಿದ್ದಾರೆ. ರಾಮನಿಲ್ಲದ ಬದುಕನ್ನು ಕಲ್ಪಿಸಲೂ ಆಗದ ದಶರಥನ ಅಂತರಂಗದ ಮಾತುಗಳಲ್ಲಿ ಇದು ವ್ಯಕ್ತವಾಗುತ್ತದೆ. ರಾಮನ ವನವಾಸಕ್ಕೆ ಕೈಕೆ ಕಾರಣಳು ಎಂದು ದೂಷಿಸುವ ದಶರಥ ಮಂಥರೆಯನ್ನು ಪ್ರಸ್ತಾಪಿಸುವುದೇ ಇಲ್ಲ. ಹಾಗಾಗಿ ಈ ಸನ್ನಿವೇಶಕ್ಕೆ ಸಂಬಂಧಿಸಿದಂತೆ ಮಂಥರೆಗೂ, ಕೈಕೆಗೂ ಸಮಪಾಲಿದೆ.

ಮಂಥರೆಯಂತೆ ಕೈಕೆಯ ಅಂತರಂಗದಲ್ಲೂ ಆಕ್ರೋಶ, ದ್ವೇಷ, ಮಾತ್ಸರ್ಯಗಳು ಇದ್ದವು. ದಶರಥನಲ್ಲಿ ವರಬೇಡುವ ಪ್ರಸಂಗದಲ್ಲಿ ಈ ಭಾವ ಸ್ಫೋಟವಾಗಿದೆ. ಕೌಸಲ್ಯೆಯ ಮೇಲಾಗಲಿ, ರಾಮನ ಮೇಲಾಗಲಿ ಯಾವುದೇ ರೀತಿಯ ಮಾತ್ಸರ್ಯಭಾವ ಕಾವ್ಯಾರಂಭದಲ್ಲಿ ಅಭಿವ್ಯಕ್ತಗೊಂಡಿಲ್ಲ. ರಾಮಪಟ್ಟಾಭಿಷೇಕದ ಸಂದರ್ಭದಲ್ಲಿ ಸ್ಫುಟಗೊಂಡಿದೆ. ಈ ಸಂದರ್ಭದಲ್ಲಿ ಕೈಕೆಯ ಪ್ರತೀಕಾರದ ಸ್ವರೂಪ ತೀವ್ರ ತೆರನಾಗಿದೆ. ಮಾನವೀಯ ನೆಲೆಯನ್ನು ಮೀರಿನಿಂತ ಮಟ್ಟದಲ್ಲಿ ಸ್ಫೋಟಗೊಂಡಿದೆ. ಹೀಗೆ ಕೈಕೆಯ ಮಾನಸಿಕ ನೆಲೆಯ ಕ್ರಾಂತಿಕಾರಿ ಧೋರಣೆಗಳು ಸ್ಫೋಟಕ ಶಕ್ತಿಯಾಗಿ ಬುಗಿಲೆದ್ದಿವೆ. ಈ ನಿಟ್ಟಿನಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕೈಕೆಯ ಪಾತ್ರ ಪ್ರತಿಭಟನಾತ್ಮಕ ಮಾದರಿಯಲ್ಲಿ ಅಭಿವ್ಯಕ್ತವಾಗಿದೆ. ಮಾತ್ರವಲ್ಲ ಕೈಕೆಯ ಅಂತರಂಗದ ಕ್ರೌರ್ಯವನ್ನು ಸಾದರಪಡಿಸಿದೆ.

ಕೈಕೆಗೆ ಸ್ಥಾನಭದ್ರತೆಯ ಕೊರತೆ ಕಾಡಿತ್ತು. ಈ ಕಾರಣವೇ ಮುಂದಿನ ಎಲ್ಲಾ ಅನಾಹುತಗಳಿಗೆ ನಾಂದಿಯಾಯಿತು ಎಂಬಂತೆ ಕವಿ ನಿರೂಪಿಸಿದ್ದಾರೆ. ಆದರೂ ಕೈಕೆಯಿಂದ ಮತ್ತು ಮಂಥರೆಯಿಂದ ಎಷ್ಟೆಲ್ಲಾ ಪಶ್ಚಾತಾಪವನ್ನು ವ್ಯಕ್ತಪಡಿಸಲು ಸಾಧ್ಯವೋ ಅಷ್ಟರಮಟ್ಟಿಗೆ ಕವಿ ಈ ಎರಡೂ ಪಾತ್ರಗಳಲ್ಲಿ ಪಾಪಪ್ರಜ್ಞೆ ಒಡಮೂಡಿಸಿದ್ದಾರೆ.

**೫.೨.೩ ಮಂಥರೆ**

ಮಹಾನ್ವೇಷಣಂ ಮಹಾಕಾವ್ಯದ ಮಂಥರೆಯ ಮಾತು, ಕೃತ್ಯ, ಭಾವದಲ್ಲಿ ಸೇಡಿದೆ. ರಾಮಪಟ್ಟಾಭಿಷೇಕವನ್ನು ತಡೆಯುವ ಹುನ್ನಾರ ಮಂಥರೆಯ ನೆಲೆಯಿಂದ ಸಾಗಿದೆ. ಭರತನನ್ನು

ಅರಸನನ್ನಾಗಿಸುವ ಮಹಾತ್ವಾಕಾಂಕ್ಷೆ ಮಂಥರೆಯಲ್ಲಿ ಇತ್ತು. ಈ ವಿಚಾರದಲ್ಲಿ ಆಕೆ ಸ್ವಹಿತವನ್ನು ಸಾಧಿಸಿದ್ದಾಳೆ. ಕೇಕಯ ರಾಜನ ಆಸರೆಯಲ್ಲಿ ಬೆಳೆದ ಕುಬ್ಜಮಗು ಮಂಥರೆ ಸಾರ್ವಜನಿಕರಿಂದ ಅವಹೇಳನಕ್ಕೆ ಗುರಿಯಾದವಳು. ಈ ಅಲಕ್ಷ್ಯವನ್ನು ನೀಗಲಾಗದ ಮಂಥರೆಯ ಮನಸ್ಥಿತಿ ಕೋಲಾಹಲ ಎಬ್ಬಿಸಿತು. ಅಸಹನೆ ವ್ಯಕ್ತಪಡಿಸಲು ಸಮರ್ಪಕ ವೇದಿಕೆ ಸಿಗದಾಗ ಸಿಕ್ಕ ಸಂದರ್ಭವನ್ನೇ ಅವಕಾಶವಾಗಿ ಬಳಸಿಕೊಳ್ಳಲಾಯಿತು. ರಾಮಪಟ್ಟಾಭಿಷೇಕದ ಸಂದರ್ಭದಲ್ಲಿ ಅದು ಜ್ವಾಲಾಮುಖಿಯ ರೂಪು ಪಡೆಯಿತು. ರಾಮಪಟ್ಟಾಭಿಷೇಕದ ಹುನ್ನಾರದಿಂದ ತನ್ನನ್ನು ತಿರಸ್ಕರಿಸಿದ ಅಯೋಧ್ಯಾಸಂಸ್ಕೃತಿಯನ್ನು ತಲೆಕೆಳಗು ಮಾಡುವ ಉದ್ದೇಶ ಒಂದಾದರೆ ತನ್ನನ್ನು ಪ್ರೀತಿಸಿದ ಭರತ, ಕೈಕೆಯರನ್ನು ಕಾಪಿಡುವ ಉದ್ದೇಶ ಮತ್ತೊಂದು. ತನ್ನ ಅಂತರಂಗದ ಉದ್ದೇಶವನ್ನು ಸಾರ್ಥಕಪಡಿಸಿಕೊಳ್ಳಲು ಕೈಕೆ ಮಂಥರೆಯನ್ನು ದೀವವಾಗಿ ಬಳಸಿದಳು. ಅಂತೆಯೇ ತನ್ನ ಅಂತರಂಗದ ಸೇಡನ್ನು ಪ್ರತೀಕಾರ ರೂಪಕ್ಕೆ ತರುವಲ್ಲಿ ಮಂಥರೆ ಕೈಕೆಯನ್ನು ದೀವವಾಗಿ ಬಳಸಿದ್ದಾಳೆ. ಏಕೆಂದರೆ ಪ್ರಭುಸಂಸ್ಕೃತಿಯಲ್ಲಿ ಅಧಿಕಾರ, ಸಂಪತ್ತು, ಯಾಜಮಾನ್ಯತೆ ಶಕ್ತಿರಾಜಕಾರಣ ಅಡಕವಾಗಿರುತ್ತವೆ. ಈ ಶಕ್ತಿ ಸೇರ್ಪಡೆಯಿಂದ ಮಾತಿಗೊಂದು ಮೌಲ್ಯ ದೊರಕುತ್ತದೆ. ಮಹಾನ್ವೇಷಣಂ ಮಹಾಕಾವ್ಯದ ಮಂಥರೆಯಲ್ಲಿ ಆಕ್ರೋಶ, ಸೇಡು, ಹತಾಶೆ, ನಿರೀಕ್ಷೆಗಳೆಲ್ಲವೂ ಇವೆ. ಅನುಕೂಲಕ್ಕೆ ತಕ್ಕಂತೆ ಸಂದರ್ಭದ ಸದುಪಯೋಗ ಪಡೆದವಳು ಮಂಥರೆ. ಈ ಉದ್ದೇಶದಿಂದಲೇ ಭರತ ಪಟ್ಟಾಭಿಷೇಕದ ಪ್ರಸ್ತಾಪವನ್ನು ಆಕೆ ಕೈಕೆಯಲ್ಲಿ ಬಿತ್ತಿದಳು.

ಕುವೆಂಪು ರಾಮಾಯಣದಲ್ಲಿ ಮಂಥರೆಗೆ ವಿಶೇಷ ಸ್ಥಾನ ದಕ್ಕಿದಂತೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲೂ ಆಕೆಗೆ ಆದ್ಯತೆ ದೊರೆತಿದೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕವಿ ಮನೋವಿಶ್ಲೇಷಣಾತ್ಮಕ ನೆಲೆಯಲ್ಲಿ ಮಂಥರೆಯನ್ನು ವಿಶ್ಲೇಷಿಸಿದ್ದಾರೆ. ಸಾಮಾಜಿಕ ತಿರಸ್ಕಾರಕ್ಕೆ ಒಳಗಾದ ಮನಸ್ಸು ರೋಸಿ ಹೋದ ಪರಿಣಾಮದ ಕುರಿತು ಮಾತಾಡಿದ್ದಾರೆ. ಮಂಥರೆ ಕುಬ್ಜೆ, ಕುರೂಪಿ. ಎಲ್ಲರಿಂದಲೂ ತಿರಸ್ಕಾರಕ್ಕೆ ಒಳಗಾದವಳು. ಅಯೋಧ್ಯಾ ಸಾಮ್ರಾಜ್ಯದಲ್ಲಿ ಕೈಕೆ ಮತ್ತು ಭರತನನ್ನು ಹೊರತುಪಡಿಸಿದರೆ ಅವಳ ಮನಸ್ಥಿತಿಯನ್ನು ಅರ್ಥೈಸಿಕೊಳ್ಳುವವರು ಯಾರೂ ಇಲ್ಲ. ಎಲ್ಲರಂತೆಯೇ ಸಾಮಾಜಿಕ ಮನ್ನಣೆ ಮತ್ತು ವ್ಯಕ್ತಿಗೌರವವನ್ನು ಅಪೇಕ್ಷಿಸಿದವಳು ಆಕೆ. ಆದರೆ ಅದು ದಕ್ಕದ ಪರಿಣಾಮದಿಂದಾಗಿ ಆಕೆ ಮನೋವಿಕಾರಕ್ಕೆ ಒಳಗಾಗುವಂತಾಯಿತು. ಕವಿ ಆಕೆ ಪಾತ್ರ ಪರಿಕಲ್ಪನೆಗೆ ಸಂಬಂಧಿಸಿದಂತೆ ಈ ವಾಸ್ತವವನ್ನು ಅನಾವರಣಗೊಳಿಸಿದ್ದಾರೆ.

ವ್ಯಕ್ತಿಗೌರವದ ಪ್ರಶ್ನೆ ಪ್ರತಿಯೊಬ್ಬನಿಗೂ ಮುಖ್ಯವಾಗಿಬಿಡುತ್ತದೆ. ಪ್ರತಿಯೊಬ್ಬ ಸಾಮಾಜಿಕನೂ ಅದನ್ನು ಅಪೇಕ್ಷಿಸುತ್ತಾನೆ ಎಂಬುದನ್ನು ಹೇಳುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾರೆ.

ಮಂಥರೆಯನ್ನು ಮಾನವ ಸಹಜ ನೆಲೆಯಲ್ಲಿಯೇ ಅಭಿವ್ಯಕ್ತಿಸಿದ್ದಾರೆ. ಕೈಕೆ ಭರತನ ಮೇಲಿನ ವ್ಯಾಮೋಹವೇ ಆಕೆಯ ಮನಸ್ಥಿತಿಗೆ ಕಾರಣವಾಯಿತು ಎಂಬುದನ್ನು ಕವಿ ಪರಿಗ್ರಹಿಸಿದ್ದಾರೆ.

ಕುವೆಂಪು ಮಂಥರೆಯನ್ನು ಮಮತೆಯ ಸುಳಿಯಾಗಿ ನಿರೂಪಿಸಿದ್ದಾರೆ. ಇದಕ್ಕೆ ಪೂರಕವಾಗಿ ಮಹಾನ್ವೇಷಣಂನ ಕವಿಗೂ ಮಂಥರೆಯ ಮನಸ್ಥಿತಿಯನ್ನು ಕೇಂದ್ರಕ್ಕೆ ತಂದಿದ್ದಾರೆ. ಆಕೆಯು ಪಾತ್ರ ನಿರೂಪಣೆಯಲ್ಲಿ ಕವಿ ಯಾವುದೇ ಪಕ್ಷಪಾತ ಧೋರಣೆಯನ್ನಾಗಲಿ, ಪೂರ್ವಗ್ರಹವನ್ನಾಗಲಿ ತಳೆದಿಲ್ಲ. ಸಾಮಾಜಿಕ ತಿರಸ್ಕಾರಕ್ಕೆ ಒಳಗಾದ ಜೀವ ಈ ರೀತಿ ಪ್ರತಿಕ್ರಿಯಿಸುವುದರಲ್ಲಿ ಆಶ್ಚರ್ಯವಿಲ್ಲ ಎಂಬುದು ಕವಿಯ ಅಭಿಮತ. ಅಂತೆಯೇ ಯಾರೂ ಯಾರನ್ನೂ ಹೀನಾಯವಾಗಿ ನಡೆಸಿಕೊಳ್ಳಬಾರದು. ರೂಪ ವಿಕಾರವಾದ ಮಾತ್ರಕ್ಕೆ ಅವರನ್ನು ದುಷ್ಟರೆಂದು ಪರಿಗಣಿಸಬಾರದು ಎಂಬುದನ್ನು ಇಲ್ಲಿ ಕವಿ ಮಂಥರೆಯ ಪಾತ್ರಮುಖೇನ ಅಭಿವ್ಯಕ್ತಿಸಿದ್ದಾರೆ.

ರೂಪ ವಿಕಾರವಾದ ಮಾತ್ರಕ್ಕೆ ಗುಣವೂ ವಿಕಾರವಾಗಿರುತ್ತದೆ ಎಂಬ ಪೂರ್ವಗ್ರಹಗಳನ್ನು, ಸಾಂಪ್ರದಾಯಿಕ ಚಿಂತನೆಯನ್ನು ಮಹಾನ್ವೇಷಣಂನ ಕವಿ ಇಲ್ಲಿ ಒಡೆದಿದ್ದಾರೆ. ಮಂಥರೆಗೆ ಕುರೂಪ ಇತ್ತೆಂಬುದು ವಾಸ್ತವ. ಆದರೆ ಈ ಕುರೂಪತೆಯ ಪರಿಣಾಮ ಆಕೆಯ ಅಂತರಂಗವನ್ನು ಘಾಸಿಗೊಳಿಸಿಬಿಟ್ಟಿದೆ. ಇದರಿಂದಾಗಿ ಆಕೆಗೆ ಅಭದ್ರತೆ ಕಾಡಿತ್ತು. ತನ್ನ ರಕ್ಷಣೆ ಮತ್ತು ಕೈಕೆ, ಭರತನ ಮೇಲಿನ ಪ್ರೀತಿ ಮತ್ತು ಸಾಮಾಜಿಕ ತಿರಸ್ಕಾರ ಪ್ರತಿಫಲದಿಂದಾಗಿ ಆಕೆಯ ಮನಸ್ಥಿತಿಯನ್ನೇ ಬದಲಾಯಿಸಿತು. ಹಾಗಾಗಿ ಅವಳ ಮನಸ್ಥಿತಿ ಮತ್ತು ವರ್ತನೆಗೆ ಸಮಾಜವ್ಯವಸ್ಥೆಯೇ ಕಾರಣ ಎಂಬುದನ್ನು ಕವಿ ನಿರೂಪಿಸಿದ್ದಾರೆ. ಮಂಥರೆಯ ರೂಪದೊಂದಿಗೆ ಗುಣವೂ ಕುರೂಪವಾಗಿತ್ತು ಎಂಬುದನ್ನು ಹೇಳುವ ಉದ್ದೇಶ ಇಲ್ಲಿ ಕವಿಗೆ ಇಲ್ಲ. ಹಾಗಾಗಿ ಮಂಥರೆಯನ್ನು ಮನೋವಿಶ್ಲೇಷಣಾತ್ಮಕ ನೆಲೆಯಲ್ಲಿ ನಿರೂಪಿಸಿದ ಕವಿ ಅವಳ ಮನಸ್ಥಿತಿಗೆ ಕಾರಣವಾದ ಸಮಾಜ ವ್ಯವಸ್ಥೆಯನ್ನು ವಿಮರ್ಶಿಸಿದ್ದಾರೆ.

ಕೈಕೆಯನ್ನು ಜಾಗೃತಗೊಳಿಸುವ ಹಂತದಲ್ಲಿ ಸ್ವಹಿತ ಸಾಧನೆಯನ್ನು ಮಂಥರೆ ಸಾಧಿಸಿದ್ದಾಳೆ. ಆಕೆಯ ಮಾತಿಗೆ ಕೈಕೆಗೆ ವಿಶೇಷ ಗೌರವ, ಆದರವಿದೆ. ಪರಿಣಾಮ ಅಸ್ತಿತ್ವರಹಿತ ವ್ಯಕ್ತಿತ್ವ ತಾನೆಂಬ ಪ್ರಜ್ಞೆ ಕೈಕೆಯನ್ನು ಕಾಡುವಂತಾಯಿತು. ಮಂಥರೆಯ ಮಾತಲ್ಲಿ ನೈಜತೆಯನ್ನು ಕೈಕೆ ಕಂಡುಕೊಂಡಳು. ಪರಿಣಾಮ ಅವಳ ಮನಪರಿವರ್ತನೆ ಆಗುವಂತಾಯಿತು. ಕೇಕಯನನ್ನು ಆಮಂತ್ರಿಸದ, ಭರತನನ್ನು ತವರಿಗೆ ಅಟ್ಟಿ ರಾಮನನ್ನು ಸಿಂಹಾಸನಕ್ಕೆ ಏರಿಸುವ ವಿಚಾರ ಮಂಥರೆಯ ಮನವನ್ನು ಕದಡಿತು. ಪರಿಣಾಮ ಕೈಕೆಯನ್ನು ನಾಟಿತು.

ರಾಣಿಯಾದವಳು ಎಂದಿಗೂ ದಾಸಿಯಾಗುವುದನ್ನು ಅಪೇಕ್ಷಿಸಲಾರಳು. ಹಾಗಾಗಿ ಮಂಥರೆ ತನ್ನ ವೈಯಕ್ತಿಕ ಹಿತಾಸಕ್ತಿಯನ್ನು ಕಾಯ್ದುಕೊಳ್ಳಲು ಕೈಕೆಯನ್ನು ಜಾಗೃತಗೊಳಿಸುವ ನೆಪ ಹೂಡಿದಳು. ತನ್ನ ಖಾಸಗಿ ನೆಲೆಯ ಉದ್ದೇಶವನ್ನು ಎಲ್ಲಿಯೂ ಕೈಕೆಯ ಸಮಕ್ಷಮ ಅಭಿವ್ಯಕ್ತಿಸಲೇ ಇಲ್ಲ.

ಮಂಥರೆ ಕೈಕೆಯನ್ನು ಹುರಿದುಂಬಿಸಲು ಕಾರಣ ಅವಳ ಹತಾಶ ಮನಸ್ಥಿತಿ. ತನ್ನನ್ನು ಅಮಂಗಳವಾಗಿ ಪರಿಗಣಿಸಿದ ರಾಜಪರಂಪರೆ, ಪ್ರಜಾಪರಿವಾರದ ಕುರಿತು ಮುಂಚೆಯೇ ಆಕೆಗೆ ಆಕ್ರೋಶವಿತ್ತು. ಈ ಆಕ್ರೋಶಕ್ಕೆ ರಾಮಪಟ್ಟಾಭಿಷೇಕದ ಸಂದರ್ಭ ಹೊಸ ತಿರುವು ನೀಡಿತು. ಸಮಾಜದಿಂದ ತಿರಸ್ಕಾರಕ್ಕೆ ಒಳಗಾದ ಮಂಥರೆಯ ಮನಸ್ಸು ಜಂಜಡವಾಗಿತ್ತು. ಕೀಳರಿಮೆ ಅಂತರಂಗದ ಅಸ್ತಿತ್ವದ ಗುರುತಿಸುವಿಕೆಗೆ ಚಾಲನೆ ನೀಡಿತು. ತಿರಸ್ಕೃತ ಮನಸ್ಸು ಕಹಿ ಅನುಭವದ ನೆಲೆಯಲ್ಲಿ ಎಬ್ಬಿಸುವ ಅವಾಂತರಗಳು ಮಂಥರೆಯಲ್ಲಿ ವ್ಯಕ್ತವಾಗಿವೆ. ರಾಜಪರಂಪರೆಯಿಂದ, ಪ್ರಜಾಸಮುದಾಯ ತಿರಸ್ಕೃತವಾದ ಮಂಥರೆಯ ಮಾನಸಿಕ ವೇದನೆ, ದುಃಖದ ಪ್ರಭಾವ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಒಡಮೂಡಿದೆ. ಹಾಗಾಗಿ ಮಂಥರೆಯನ್ನು ವ್ಯಕ್ತಿಗತ ನೆಲೆಯಲ್ಲಿ ಅಭ್ಯಸಿಸುವುದಕ್ಕಿಂತ ಅವಳ ಮನಸ್ಥಿತಿಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯನ್ನು ವಿಶ್ಲೇಷಿಸಬೇಕಿದೆ.

ಶಿಷ್ಟ ರಾಮಾಯಣ ಪರಂಪರೆಯಿಂದ ತೊಡಗಿ ಬಹುತೇಕ ರಾಮಾಯಣಗಳು ಮಂಥರೆಯನ್ನು ದುಷ್ಟಳನ್ನಾಗಿ ಚಿತ್ರಿಸಿವೆ. ಅವಳ ಮನಸ್ಥಿತಿಗೆ ಕಾರಣವಾದ ಸಾಮಾಜಿಕ ವ್ಯವಸ್ಥೆಯ ಕುರಿತು ಮಾತಾಡಿಲ್ಲ. ತನ್ನ ರೂಪಕ್ಕೆ ಅಸಹ್ಯಪಡುವ, ತನ್ನೊಂದಿಗೆ ಮಾತಾಡಬಯಸದ ಜನಸಮುದಾಯದ ಕುರಿತು ಆಕೆಗೆ ಆಕ್ರೋಶವಿದೆ. ಅಸಹನೆ ಇದೆ. ಮಾನವೀಯತೆಯ ನೆಲೆಯಲ್ಲಿ ಮಂಥರೆಯನ್ನು ನಡೆಸಿಕೊಂಡವರು ಯಾರೂ ಇಲ್ಲ. ಭರತ, ಕೈಕೆಯರನ್ನು ಹೊರತುಪಡಿಸಿ ಮತ್ತಾರೂ ಅಯೋಧ್ಯೆಯಲ್ಲಿ ಮಂಥರೆಯನ್ನು ಪ್ರೀತಿಯಿಂದ ಕಂಡಿಲ್ಲ. ಪರಿಣಾಮ ಅವಳ ಮನಸ್ಸು ಸೇಡಿನ ಜಾಡಿನೊಳಗೆ ಸಿಲುಕುವಂತಾಯಿತು. ತನ್ನನ್ನು ಹಗುರವಾಗಿ ಕಂಡ ವ್ಯವಸ್ಥೆಯ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳುವಂತಾಯಿತು.

ಈಂದ ಪುಲಿಯಂತೆ ಕೆರಳಿದಳು ಕುಬ್ಜೆ!
'ನಿಲ್ಲಿಸು ಕೈಕೆ ನಿನ್ನ ಅಪಲಾಪವನು, ಭರತನಿಗೆ
ಆಗಿರುವೆ ನೀನೆ ಮೃತ್ಯು ಸಾಕೇತನಗರಿಯಲಿ
ರಾಮನಾಡಳಿತದಲಿ ನೀನಾಗುವೆ ಎನ್ನಂತೆ ತೊತ್ತು'[೧]
(ಮೊಯಿಲಿ: ೨೦೦೧ : ೨೮೪ – ೨೮೫)

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಥರೆಯ ಪಾತ್ರ ನಿರೂಪಣೆಯಲ್ಲಿ ಕವಿ ಮಾನವ ಸಹಜ ಗುಣಗಳನ್ನೇ ಆರೋಪಿಸಿದ್ದಾರೆ. ಯಾವ ಸಂದರ್ಭದಲ್ಲಿಯೂ ಆಕೆಯನ್ನು ವಿಚಿತ್ರವಾಗಿ ನಿರ್ವಚಿಸಿಲ್ಲ. ಕುವೆಂಪು ರಾಮಾಯಣದಲ್ಲಿ ಕೌಸಲ್ಯೆ ಮಂಥರೆಗೆ ರಾಮನನ್ನು ಮುಟ್ಟಲು ಕೊಡುವುದಿಲ್ಲ. ಈ ಸಂಕಟ ಸಹಜವಾಗಿಯೇ ಆಕೆಯ ಅಂತರಂಗವನ್ನು ಕಾಡಿತ್ತು. ಮಹಾನ್ವೇಷಣಂ ಮಹಾಕಾವ್ಯದ ಮಂಥರೆಗೆ ಭರತನ ಮೇಲೆ ಅಪಾರ ವ್ಯಾಮೋಹ. ಇದರ ಪರಿಣಾಮ ಆತನೇ ರಾಜನಾಗಬೇಕು ಎಂಬ ಆಸೆ ಅವಳದ್ದು. ಒಂದು ವೇಳೆ ರಾಮ ರಾಜನಾದರೆ ಕೌಸಲ್ಯೆ ರಾಜಮಾತೆಯಾಗುತ್ತಾಳೆ. ಆಗ ಕೈಕೆ ಮೂಲೆಗುಂಪಾಗುತ್ತಾಳೆ. ತಾನು ಸಂಪೂರ್ಣ ತಿರಸ್ಕೃತಳಾಗಿಬಿಡುತ್ತೇನೆ. ಈ ದುರಂತವನ್ನು ತಪ್ಪಿಸಿದರೆ ಮಾತ್ರ ತನ್ನ ಸ್ಥಾನಮಾನವನ್ನು ಭದ್ರಪಡಿಸಿಕೊಳ್ಳಲು ಸಾಧ್ಯ ಎಂಬುದನ್ನು ಮನವರಿಕೆ ಮಾಡಿಕೊಂಡವಳು ಮಂಥರೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಮಂಥರೆ ಸಹಜವಾಗಿಯೇ ಚಿಂತನೆ ನಡೆಸುತ್ತಾಳೆ. ತನ್ನ ಸ್ಥಾನಮಾನದ ಉಳಿವಿಕೆಯೊಂದಿಗೆ ಭರತ ಮತ್ತು ಕೈಕೆಯರು ಪ್ರಧಾನ ವೇದಿಕೆಯಲ್ಲಿ ಇರಬೇಕು ಎಂಬುದು ಆಕೆಯ ಆಶಯ. ಈ ಕಾರಣದಿಂದಾಗಿಯೇ ಮಂಥರೆ ಕೈಕೆಗೆ ನಾನಾ ತೆರನಾದ ಮಾತುಗಳನ್ನು ಆಡಿ ಉತ್ತೇಜನ ನೀಡುತ್ತಾಳೆ. ಮಾನವಸಹಜವಾದ ಪ್ರೀತಿ, ಭಾವನೆ, ಬಯಕೆಗಳು ಮಂಥರೆಯಲ್ಲೂ ಇದ್ದವು. ಆದರೆ ಈ ಭಾವಗಳನ್ನು ಎಲ್ಲಿಯೂ ಅಭಿವ್ಯಕ್ತಿಸಲು ಸಾಧ್ಯವಾಗದ ಕಾರಣ ಆಕೆಯ ಮನಸ್ಸು ಹತಾಶೆಗೆ ಒಳಾಗಾಗುವಂತಾಯಿತು. ಇದರ ಪರಿಣಾಮವೇ ಅಯೋಧ್ಯೆಯ ವ್ಯವಸ್ಥೆಯನ್ನು ತಲೆಕೆಳಗು ಮಾಡಿತು.

**೫.೨.೪ ರುಮೆ**

ಮಹಾನ್ವೇಷಣಂ ಮಹಾಕಾವ್ಯದ ಪ್ರತಿಭಟನೆಯ ಮಾದರಿಯ ಬಹುತೇಕ ಪಾತ್ರಗಳಲ್ಲಿ ರುಮೆಯ ಪಾತ್ರವೂ ಒಂದು. ಸುಗ್ರೀವನ ಮಡದಿಯಾದ ಈಕೆಯಲ್ಲಿ ಲಕ್ಷ್ಮಣನನ್ನು ಪ್ರಶ್ನಿಸುವ ದೃಢತೆ ಇದೆ. ದಿಟ್ಟತೆ ಇದೆ. ಸ್ಪಷ್ಟತೆ ಇದೆ. ಸುಗ್ರೀವನ ಸಮಾಜ ಸುಧಾರಣಾ ಕಾರ್ಯವೈಖರಿಗೆ ಸಂಪೂರ್ಣ ಬೆಂಬಲ ನೀಡಿದ್ದಾಳೆ. ರುಮೆ ಇಲ್ಲಿ ಪ್ರೌಢಚಿಂತಕಳೂ, ಬುದ್ಧಿಕೌಶಲ್ಯ ಉಳ್ಳವಳೂ ಆಗಿದ್ದಾಳೆ. ಸುಗ್ರೀವನ ವಿರುದ್ಧ ಲಕ್ಷ್ಮಣ ಸಿಡಿದೆದ್ದ ಸಂದರ್ಭಕ್ಕೆ ಪ್ರತಿಯಾಗಿ ನಮಸ್ಕರಿಸುತ್ತಾ ಲಕ್ಷ್ಮಣನಲ್ಲಿ ಪ್ರಾರ್ಥಿಸಿದ್ದಾಳೆ. ತಿಳುವಳಿಕೆ ಇಲ್ಲದ ಪಾಮರರು ತಾವಾದ ಕಾರಣ ಶಾಂತನಾಗಬೇಕು ಎಂದು ವಿಜ್ಞಾಪಿಸಿದ್ದಾಳೆ.

ಸುಗ್ರೀವನೋರ್ವ ರಾಜನೀತಿಜ್ಞ, ರುಮೆ ಆತನ ಸಾಧನೆಗೆ ಬೆನ್ನೆಲುಬಾಗಿ ನಿಂತವಳು. ತನ್ನ ಪತಿಯನ್ನು ಸಂರಕ್ಷಿಸಬೇಕೆಂದು ಲಕ್ಷ್ಮಣನಲ್ಲಿ ಅಂಗಲಾಚಿ ಬೇಡುತ್ತಾಳೆ. ನನ್ನನ್ನು ಕೊಂದುಬಿಡು, ಪತಿಯನ್ನು ಕಾಪಾಡು ಎನ್ನುತ್ತಾಳೆ. ಮುತ್ತೈದೆಯಾಗಿ ಸ್ವರ್ಗ ಸೇರಬೇಕು

ಎಂಬ ಆಕಾಂಕ್ಷೆ ರುಮೆಯಲ್ಲಿ ಇದೆ. ಹೀಗೆ ರುಮೆಯ ಈ ಭಾವ ಉದ್ದೀಪನದ ಹಿಂದೆ ಕವಿ ಐದೆತನದ ಪರಿಕಲ್ಪನೆಗೆ ಆದ್ಯತೆ ನೀಡಿದ್ದಾರೆ. ಪಾತಿವ್ರತ್ಯ ಧರ್ಮಕ್ಕೆ ಪೂರಕವಾಗಿ ಸ್ತ್ರೀಯನ್ನು ಮುತ್ತೈದೆಯಾಗಿ ಉಳಿಸುವ ಉದ್ದೇಶ ಕವಿಯದ್ದು. ಈ ವಿಚಾರದಲ್ಲಿ ಕವಿ ಸಾಂಪ್ರದಾಯಿಕ ಚಿಂತನೆಗೆ ಬದ್ಧರಾಗಿದ್ದಾರೆ. ಪ್ರಬುದ್ಧ ಮಹಿಳೆಯಾದ ರುಮೆಗೆ ತನ್ನ ಸಾಮರ್ಥ್ಯ, ಸಾಧನೆ ವ್ಯಕ್ತಿತ್ವದ ಕುರಿತು ಎಳ್ಳಷ್ಟೂ ಅಹಂಭಾವವಿಲ್ಲ. ಮಿತ್ರಪ್ರೇಮ ಮರೆತ ಸುಗ್ರೀವ ಮೋದದಲ್ಲಿ ಮುಳುಗಿರುವನೆಂದು ಲಕ್ಷ್ಮಣ ತಿಳಿಯುತ್ತಾನೆ. ಕೋಪದ ಪರಿಣಾಮವನ್ನು ವಾನರ ಸಂತತಿಯ ಮೇಲೆ ತೀರಿಸಿಕೊಳ್ಳಬಯಸುತ್ತಾನೆ. ವಾನರ ಸಂತತಿಯನ್ನು ಮೆಟ್ಟಿಕೊಲ್ಲುತ್ತಾ ಕಿಷ್ಕಿಂದೆಯನ್ನು ನಾಶಮಾಡಿ ಯಮಪುರಿಗೆ ಅಟ್ಟುವೆನು ಎನ್ನುತ್ತಾನೆ. ತಾಳ್ಮೆ ತಪ್ಪಿದ ರುಮೆ ಲಕ್ಷ್ಮಣನೊಂದಿಗೆ ಕಟುವಾಗಿ ಮಾತಾಡುತ್ತಾಳೆ. ವಸ್ತುಸ್ಥಿತಿಯನ್ನು ತಿಳಿದಾಗಿಯೂ ಲಕ್ಷ್ಮಣ ಕಿಡಿಕಾರಿದಾಗ ರುಮೆ ಪ್ರತಿಭಟಿಸುತ್ತಾಳೆ.

ಉತ್ತಮ ವಿಚಾರವಾದಿಯಾದ ರುಮೆ ರಾಜನೀತಿಜ್ಞೆಯೂ ಹೌದು. ಸುಗ್ರೀವ ಸಾಮಾಜಿಕ, ರಾಜಕೀಯ ಸುಧಾರಣೆ ತಂದಾಗ ಶ್ರೀಮಂತರು ಕಡು ವೈರಿಗಳಾಗುತ್ತಾರೆ ಎಂಬುದನ್ನು ಮನದಟ್ಟು ಮಾಡುತ್ತಾಳೆ. ಸುಗ್ರೀವನ ಕ್ರಾಂತಿಕಾರಿ ಧೋರಣೆ, ಸುಧಾರಣಾ ನಿಲುವಿನ ಕುರಿತು ರುಮೆಗೆ ಅಭಿಮಾನ ಇದೆ. ಆದರೂ ಸಮಾಜ ಸುಧಾರಣೆಯನ್ನು ವಿರೋಧಿಸುವ ವರ್ಗ ಇರುತ್ತದೆ ಎಂಬ ವಾಸ್ತವದ ಅರಿವು ರುಮೆಯಲ್ಲಿ ಇದೆ. ಈ ವಾಸ್ತವವಾದದ ನೆಲೆಯಲ್ಲಿ ರುಮೆಯ ಪಾತ್ರ ಮೂಡಿದೆ. ತನ್ನ ಬದುಕಿಗೆ ಕಂಟಕಪ್ರಾಯರಾದ ರಾಮಲಕ್ಷ್ಮಣರನ್ನು ಝುಂಕಿಸುವಲ್ಲಿ ರುಮೆಗೆ ಹಿಂಜರಿಕೆ ಇಲ್ಲ.

**೫.೨.೫ ಸೀತೆ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಯ ಪಾತ್ರ ಪ್ರತಿಭಟನಾತ್ಮಕ ಮಾದರಿಯಲ್ಲಿ ನಿರೂಪಿತವಾಗಿದೆ. ಪುರುಷಪರ ಸಮಾಜ ಮಹಿಳೆಯರನ್ನು ಹೀನಾಯವಾಗಿ ಕಂಡಿದೆ ಎಂಬುದರ ಅರಿವು ಇಲ್ಲಿ ಸೀತೆಗೆ ಇದೆ. ಹಾಗಾಗಿ ಮಹಿಳಾ ಸ್ಥಿತಿಗತಿಯ ಸುಧಾರಣೆಯ ಆಶಯ ಸೀತೆಯ ಪಾತ್ರಮುಖೇನ ಬಿಂಬಿತವಾಗಿದೆ. ಸ್ತ್ರೀಶಕ್ತಿ ಬೆಳೆಯಬೇಕು. ಸ್ತ್ರೀಸಮುದಾಯ ಜಾಗೃತಗೊಳ್ಳಬೇಕು ಎಂಬ ಆಶಯ ಸೀತೆಯದ್ದು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಗೆ ಆತ್ಮಗೌರವದ ಪ್ರಶ್ನೆ ಮುಖ್ಯವಾಗುತ್ತದೆ. ಆದುದರಿಂದ ವ್ಯಕ್ತಿಗೌರವದ ಅಗತ್ಯತೆಯನ್ನು ಕವಿ ಆಕೆಯ ನೆಲೆಯಿಂದಲೇ ನಿರೂಪಿಸಿದ್ದಾರೆ. ಸ್ವಇಚ್ಛೆಯಿಂದ ಅರಣ್ಯವಾಸವನ್ನು ಅಪೇಕ್ಷಿಸುವ ಅವಕಾಶ ಮಹಾನ್ವೇಷಣಂ ಮಹಾಕಾವ್ಯದ ಆಕೆಗೆ ಇದೆ. ತನ್ನ ತೀರ್ಮಾನಗಳಿಗೆ ಬೆಲೆ ದಕ್ಕಬೇಕು ಎಂಬ ಮಹಾತ್ವಾಕಾಂಕ್ಷೆ ಇಲ್ಲಿ ಅಭಿವ್ಯಕ್ತವಾಗಿದೆ. ತಾನು ರಾಜವಂಶಜಳು ಎಂಬ ಅಹಂಮಿಕೆ ಆಕೆಯಲ್ಲಿ ಕಿಂಚಿತ್ತೂ

ಇಲ್ಲ. ಸಮಸ್ತ ಸ್ತ್ರೀಸಮುದಾಯದ ಮೇಲೆ ಆಗುತ್ತಿರುವ ದಬ್ಬಾಳಿಕೆಯ ಅರಿವು ಅವಳಿಗೆ ಇದೆ. ಅಗ್ನಿಪ್ರವೇಶದ ಸಂದರ್ಭ ಸೀತೆಯ ಪ್ರತಿಭಟನೆಗೆ ಸಾಕ್ಷಿಯಾಗಿದೆ. ಅಗ್ನಿಪ್ರವೇಶದ ಸಂದರ್ಭಕ್ಕೆ ಅನುಗುಣವಾಗಿ ಕವಿ ಶಿಷ್ಟ ರಾಮಾಯಣದ ತಿರುಳನ್ನು ಒಡೆದಿದ್ದಾರೆ. ಸೀತೆಯಲ್ಲಿ ಸತ್ತ್ವ ಶಕ್ತಿ ಇದೆ. ದಿಟ್ಟತೆಯ ನೆಲೆಯಲ್ಲಿ ಆಕೆಯನ್ನು ಕಟ್ಟಲಾಗಿದೆ. ತನ್ನ ಬದುಕು ಹೀಗೆಯೇ ಇರಬೇಕು ಎಂಬ ಉದಾತ್ತ ಧ್ಯೇಯ ಸೀತೆಯಲ್ಲಿ ಇದೆ. ಈ ಧ್ಯೇಯವನ್ನು ಸಾಧಿಸುವ ಹಂತದಲ್ಲಿ ಎದುರಾಗುವ ಅಡ್ಡಿ ಆತಂಕಗಳನ್ನು ಮೀರಿ ನಿಲ್ಲುವಲ್ಲಿ ಆಕೆ ಯಶಸ್ವಿಯಾಗಿದ್ದಾಳೆ. ತನ್ನನ್ನು ರಾಮ ಸ್ವೀಕರಿಸಲು ತಡವಾಯಿತು ಎಂಬ ಕಾರಣಕ್ಕೆ ಆಕೆ ಅಗ್ನಿಪ್ರವೇಶ ಮಾಡುತ್ತಾಳೆ. ಇಲ್ಲಿ ಆಕೆಯ ಪ್ರತಿಭಟನೆಯ ಸ್ವರೂಪ ವ್ಯಕ್ತವಾಗಿದೆ. ಈ ಮೂಲಕ ಮಹಿಳೆಯರ ಆತ್ಮಗೌರವದ ಪ್ರಶ್ನೆಯನ್ನು ಸೀತೆ ಮುಂದಿಡುತ್ತಾಳೆ.

ಸೀತೆಯ ಅಗ್ನಿಪ್ರವೇಶಕ್ಕೆ ಸಂಬಂಧಿಸಿದಂತೆ ಈ ಮಹಾಕಾವ್ಯದಲ್ಲಿ ಪ್ರತಿಭಟನೆ ಇದೆ. ಸೀತೆಯ ಅಗ್ನಿಪ್ರವೇಶ ರಾಮನಲ್ಲಿ ಜಾಗೃತಪ್ರಜ್ಞೆ ಮೂಡಿಸಿದೆ. ಸೀತೆಯನ್ನು ಆತ್ಮಾಭಿಮಾನಿಯನ್ನಾಗಿ ನಿರೂಪಿಸಿದಂತೆ ಮಾನವೀಯ ನೆಲೆಯಲ್ಲೂ ನಿರ್ವಚಿಸಲಾಗಿದೆ. ರಣಾಂಗಣದಲ್ಲಿ ಗಾಯಾಳುಗಳ ಶುಶ್ರೂಷೆಗೈಯುವ ಸೀತೆ ದೀನದಲಿತರ, ಸ್ತ್ರೀಯರಪರ ಕಾಳಜಿ ಉಳ್ಳವಳು. ರಾಜವಂಶಜಳಾದರೂ ಸರಳ ಬದುಕನ್ನು ಅಪೇಕ್ಷಿಸುವ ನಿಗರ್ವಿಯಾಗಿ ಆಕೆಯ ಬದುಕು ಇಲ್ಲಿ ಅನಾವರಣಗೊಂಡಿದೆ. ತನ್ನನ್ನು ಅಗ್ನಿಕುಂಡದಿಂದ ಮೇಲಕ್ಕೆ ಎತ್ತಿದ ಮಂಡೋದರಿಗೆ ಕೃತಜ್ಞತೆ ಸಲ್ಲಿಸುತ್ತಾಳೆ. ರಾವಣ ಮಗಳಂತೆ ನಿನ್ನನ್ನು ಕಾಪಾಡಿಕೊಂಡಿದ್ದ ಎಂಬ ಮಂಡೋದರಿಯ ಮಾತಿಗೆ ಸೀತೆ ಪರಿತಪಿಸುತ್ತಾಳೆ. ತಾಯಿಯ ಮಾಂಗಲ್ಯವನ್ನು ತಾನೆ ಕಡಿದೆ ಎಂದು ಪಶ್ಚಾತ್ತಾಪ ಪಡುತ್ತಾಳೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆ ಸ್ವಾಭಿಮಾನಿ ಆದರೆ ಅಹಂಭಾವ ಉಳ್ಳವಳು ಅಲ್ಲ. ರಾವಣನ ರಾವಣತ್ವ ತೊಡೆಯಲು ಬಹುವಿಧದ ಉಪದೇಶದ ಮಾತುಗಳನ್ನು ಆಡುತ್ತಾಳೆ. ಅಶೋಕ ವನದಲ್ಲಿ ರಾವಣನನ್ನು ಹೀನಾಯವಾಗಿ ಮೂದಲಿಸುತ್ತಾಳೆ. ಹೀಗೆ ಮೂದಲಿಸುವಲ್ಲಿ ಆಕೆಯ ಪ್ರತಿಭಟನಾತ್ಮಕ ಮನಸ್ಥಿತಿ ವ್ಯಕ್ತವಾಗುತ್ತದೆ. ಅಶೋಕ ವನದಲ್ಲಿ ತಪಸ್ವಿನಿಯಂತೆ ಶ್ರೀರಾಮನ ಧ್ಯಾನವನ್ನು ಮೈಮನಗಳ ತುಂಬೆಲ್ಲ ತುಂಬಿಕೊಂಡವಳು ಸೀತೆ. ಇಲ್ಲಿ ಆಕೆಯ ಪತಿಪರಾಯಣತೆಯ ನಿರೂಪಣೆ ಇದೆ. ಹುಲ್ಲುಕಡ್ಡಿಯನ್ನು ಎದುರಾಗಿ ಹಿಡಿದೇ ರಾವಣನೊಂದಿಗೆ ಸಂಭಾಷಣೆ ನಡೆಸಿದವಳು ಸೀತೆ. ಇಲ್ಲಿ ಈ ಸಂದರ್ಭಕ್ಕೆ ಅನುಗುಣವಾಗಿ ಎರಡು ಮುಖ್ಯ ವಿಚಾರಗಳು ಸ್ಪಷ್ಟವಾಗುತ್ತವೆ.

೧. ಹುಲ್ಲುಕಡ್ಡಿಯನ್ನು ತೃಣಸಮಾನ ಎಂದು ಬಗೆವಂತೆ ಸೀತೆ ರಾವಣನನ್ನು ಕ್ಷುಲ್ಲಕವಾಗಿ ಕಂಡಳು.
೨. ರಾವಣನ ಮುಖ ನೋಡಬೇಕೆಂದು ಸೀತೆ ಎಂದಿಗೂ ಅಪೇಕ್ಷಿಸಿದ್ದಿಲ್ಲ.

ಕಾಯತ್ಯಾಗ ಮಾಡಲು ಸಿದ್ಧಳಿರುವ ಸೀತೆ ರಾವಣನಿಗೆ ಒಲಿಯುವ ವಿಚಾರ ಎಂದಿಗೂ ಮಾಡಿದ್ದಿಲ್ಲ. ವನವಾಸದ ಸಂದರ್ಭದಲ್ಲಿ ರಾಮನಿಗೆ ಅಹಿಂಸೆ ಉಪದೇಶಿಸಿದ ಆಕೆ ರಾಮನಿಂದ ವನ್ಯಮೃಗ ಬೇಟೆ ತಪ್ಪಿಸುವ ಪ್ರಯತ್ನ ಮಾಡುತ್ತಾಳೆ. ಆಕೆಯ ತೀರ್ಮಾನದಲ್ಲಿ ದಿಟ್ಟತೆ ಇದೆ. ಮೂರ್ಛೆ ತಪ್ಪಿದ ಸೀತೆಯನ್ನು ಲಕ್ಷ್ಮಣನೊಂದಿಗೆ ಅಯೋಧ್ಯೆಗೆ ತಲುಪಿಸುವ ವ್ಯವಸ್ಥೆ ಮಾಡಲು ರಾಮ ಮುಂದಾದಾಗ ಆಕೆ ತಿರಸ್ಕರಿಸುತ್ತಾಳೆ. ಇಲ್ಲಿ ಅವಳಿಗೆ ತನ್ನದೇ ಆದ ಅಭಿಪ್ರಾಯ, ಉದ್ದೇಶ, ಆಶಯ, ಧ್ಯೇಯ, ಆಲೋಚನೆ ಇದೆ. ಸ್ವತಂತ್ರ ಚಿಂತನೆಯ ನೆಲೆಯಿಂದ ತೀರ್ಮಾನ ಕೈಗೊಳ್ಳುವ ಪಾತ್ರವಾಗಿ ಇಲ್ಲಿ ಆಕೆ ಕಾಣಿಸಿದ್ದಾಳೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಯ ಮಾತುಗಳಲ್ಲಿ ಆತ್ಮವಿಶ್ವಾಸ, ಸ್ಪಷ್ಟತೆ, ನೈಜತೆ, ದಿಟ್ಟತನವಿದೆ. ತನಗೆ ಸರಿ ತೋರದ್ದನ್ನು ಪ್ರತಿಭಟಿಸುವಲ್ಲಿ ಆಕೆಗೆ ಹಿಂಜರಿಕೆ ಇಲ್ಲ. ಹಾಗಾಗಿ ಅಶೋಕ ವನದಲ್ಲಿ ಸೀತೆ ರಾವಣನ ವೈಭವ, ಅಪೇಕ್ಷೆಗಳನ್ನು ತಿರಸ್ಕರಿಸುತ್ತಾಳೆ. ತನ್ನ ಆತ್ಮಗೌರವಕ್ಕೆ ಧಕ್ಕೆ ತಂದ ರಾಮನನ್ನು ಪ್ರತಿಭಟಿಸಿ ಅಗ್ನಿಪ್ರವೇಶ ಮಾಡುತ್ತಾಳೆ. ಹೀಗೆ ಆತ್ಮಸಾಕ್ಷಿಗೆ ಅನುಗುಣವಾಗಿ ನಡೆಯುವ, ಅನ್ಯಾಯವನ್ನು ತಿರಸ್ಕರಿಸುವ ಪ್ರತಿಭಟನೆಯ ಮಾದರಿಯಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಸೀತೆಯ ಪಾತ್ರ ನಿರೂಪಿತವಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಸೀತೆಯನ್ನು ಬುದ್ಧಿಪ್ರೌಢಿಮೆ ಮತ್ತು ಚೈತನ್ಯಶಕ್ತಿಯ ನೆಲೆಯಲ್ಲಿ ಕವಿ ನಿರೂಪಿಸಿದ್ದಾರೆ. ಆಕೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಈ ಚೈತನ್ಯದ ನೆಲೆಯ ನಿರೂಪಣೆ ಎಲ್ಲಿಯೂ ಸೋಲುವುದಿಲ್ಲ. ಅಶೋಕ ವನದಲ್ಲಿದ್ದ ಸೀತೆ ಎಲ್ಲಿಯೂ ಅನ್ಯಾಯ, ಅಧರ್ಮದ ಜೊತೆ ಒಪ್ಪಂದ ಮಾಡಿಕೊಳ್ಳುವುದಿಲ್ಲ. ಈಕೆಯೆ ಜೊತೆಗೆ ಮಂಡೋದರಿಗೆ ಆತ್ಮೀಯ ಸಂಬಂಧ ಇದೆ. ಈ ಸಂಬಂಧದ ಉಳಿವಿಕೆಯಲ್ಲಿ ಸೀತೆ ಯಶಸ್ವಿಯಾಗಿದ್ದಾಳೆ. ವನವಾಸದ ಬದುಕಿನ ಕುರಿತಾಗಲಿ, ರಾಜವೈಭೋಗದಿಂದ ದೂರ ಉಳಿದ ವಿಚಾರದ ಕುರಿತಾಗಲಿ ಆಕೆಗೆ ಅಸಹನೆ ಇಲ್ಲ. ಈ ಸಂದರ್ಭದಕ್ಕೆ ಕಾರಣೀಭೂತರಾದವರ ಕುರಿತು ಆಕೆಗೆ ಆಕ್ರೋಶವಿಲ್ಲ. ಇಲ್ಲಿ ಆಕೆ ವ್ಯವಸ್ಥೆಯ ಕ್ರೌರ್ಯ ಮತ್ತು ದೋಷವನ್ನು ತಿರಸ್ಕರಿಸುತ್ತಾಳೆಯೇ ವಿನಾ ವ್ಯಕ್ತಿಗಳನ್ನಲ್ಲ. ಹಾಗಾಗಿ ಈ ಮಹಾಕಾವ್ಯದ ಉದ್ದಕ್ಕೂ ಸೀತೆ ಯಾವ ಸಂದರ್ಭದಲ್ಲಿಯೂ ಯಾರೊಂದಿಗೂ ಹಗೆತನ ಕಟ್ಟಿಕೊಳ್ಳುವುದಿಲ್ಲ.

ರಾವಣನ ಕ್ರೂರ ಮನಸ್ಥಿತಿಯನ್ನು ಅರಿತ ಸೀತೆ ಆತನಿಗೆ ನಾನಾ ತೆರನಾದ ಬುದ್ಧಿವಾದದ ಮಾತುಗಳನ್ನು ಆಡುತ್ತಾಳೆ. ಅವನ ಮೇಲಿನ ಕ್ರೌರ್ಯವನ್ನು ಮಂಡೋದರಿಯ ಮೇಲೆ ತೀರಿಸಿಕೊಳ್ಳುವ ಹಗೆತನವಾಗಲಿ, ದುರುದ್ದೇಶವಾಗಲಿ ಆಕೆಯಲ್ಲಿ ಇಲ್ಲ. ಮಂಡೋದರಿಯನ್ನು ತನ್ನ ತಾಯಿ ಎಂದು ಬಗೆದ ಸೀತೆಗೆ ಆಕೆಯ ಮಾತುಗಳ ಮೇಲೆ ಗೌರವ ಇದೆ.

ವನವಾಸದ ಸಂದರ್ಭವಾಗಲಿ, ಅಶೋಕವನದ ಸಂದರ್ಭವಾಗಲಿ ಇಂಥ ಯಾವುದೇ ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವಾಗ ಆಕೆ ಕ್ರಿಯಾಶೀಲವಾಗಿಯೇ ಇರುತ್ತಾಳೆ.

ಅತ್ರಿ–ಅನಸೂಯರ ಉಪದೇಶದ ಮಾತುಗಳನ್ನು ಆಲಿಸಿ, ಪಾಲಿಸುವ ವಿಚಾರದಲ್ಲಿ ಆಕೆಗೆ ಅಪಾರ ಆಸಕ್ತಿ. ಈ ಸಂದರ್ಭದಲ್ಲಿ ಆಕೆ ಉತ್ತಮ ಕೇಳುಗಳಾಗಿ ಕಾಣಿಸಿದ್ದಾಳೆ. ಅಗಸ್ತ್ಯ–ಲೋಪಾಮುದ್ರರ ಭೇಟಿಯ ಸಂದರ್ಭದಲ್ಲೂ ಇವಳ ಪ್ರತಿಕ್ರಿಯೆ ವಿನಯ ಮತ್ತು ವಿಧೇಯತೆಯಿಂದ ಕೂಡಿದೆ. ಸೀತೆಯ ಪಾತ್ರಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಐದು ವಿಶೇಷ ಗುಣಗಳನ್ನು ಕಾಣಬಹುದು.

೧. ಸೀತೆ ನಿಗರ್ವಿಯಾಗಿ ಕಾಣಿಸಿದ್ದಾಳೆ.

೨. ಮಾತನ್ನು ಆಡುವಲ್ಲಿ ತೋರುವ ಆಸಕ್ತಿಗಿಂತ ಉಪದೇಶವನ್ನು ಕೇಳುವಲ್ಲಿ ಆಕೆಗೆ ಅಧಿಕ ಉತ್ಸಾಹವಿದೆ.

೩. ತಾನು ರಾಜವಂಶಜಳು ಎಂಬ ಅಹಂಮಿಕೆಯನ್ನು ಮೀರಿ ನಿಂತ ವ್ಯಕ್ತಿತ್ವ

೪. ಕರ್ತವ್ಯ ಪಾಲನಾ ಪ್ರಜ್ಞೆ

೫. ಸಮಯಪ್ರಜ್ಞೆ ಮತ್ತು ಬುದ್ಧಿಮತ್ತೆ.

ಈ ಎಲ್ಲಾ ವಿಶಿಷ್ಟ ಗುಣಗಳಿಂದ ಸೀತೆಯ ವ್ಯಕ್ತಿತ್ವ ಉನ್ನತ ಮಟ್ಟದಲ್ಲಿದೆ.

"ಲಂಕೇಶ ಕೇಳಿಲ್ಲಿ
ಶ್ರೀರಾಮ ಮರ್ಯಾದಾಪುರುಷೋತ್ತಮನು ಧರ್ಮ
ರಕ್ಷಕನು ದುಷ್ಟಸಂಹಾರಕನು ಸಾಧ್ವಿಯನು
ಕಾಪಿಡನೆ ನಿನ್ನ ವೈಭವವೆನಗೆ ತೃಣಸಮನು
ಮಿಣುಕುಹುಳು ಬೆಳಕಿನಲಿ ಕಮಲವರಳುವುದೇನು",

(ಮೊಯಿಲಿ: ೨೦೦೪ : ೧೨೯)

ರಾವಣನಿಗೆ ನಾನಾ ತೆರನಾದ ಬುದ್ಧಿವಾದದ, ಉಪದೇಶದ ಮಾತುಗಳನ್ನು ಆಡಿದ ಸೀತೆ ಆತನನ್ನು ಸರಿದಾರಿಗೆ ತರಲು ಪ್ರಯತ್ನಿಸುತ್ತಾಳೆ. ಆತನ ಮೇಲೆ ತನಗೆ ಕಿಂಚಿತ್ತೂ ಆಸೆ ಇಲ್ಲ ಎಂಬ ವಾಸ್ತವವನ್ನು ತಿಳಿಯಪಡಿಸಿದ ಆಕೆ ಅವನನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾಳೆ. ರಾಮನ ಶಕ್ತಿ, ಸಾಮರ್ಥ್ಯ, ಆದರ್ಶದ ಕುರಿತು ಸೀತೆಗೆ ಎಲ್ಲಿಲ್ಲದ ಗೌರವ. ಈ ಗೌರವಭಾವವನ್ನು ಉಳಿಸಿಕೊಂಡೇ ಆಕೆ ರಾವಣನ ಎದುರು ರಾಮತ್ವದ ಕುರಿತು ಮಾತಾಡುತ್ತಾಳೆ. ರಾಮ ದುಷ್ಟಸಂಹಾರಕ ಎಂಬ ಸೀತೆಯ ಮಾತುಗಳಲ್ಲಿ ರಾವಣತ್ವ ರಾಮತ್ವದಿಂದಲೇ ನಾಶ ಹೊಂದುವುದು ಎಂಬ ಸೂಕ್ಷ್ಮಪ್ರಜ್ಞೆ ಇದೆ. ರಾವಣನ

ದುಷ್ಟತನವನ್ನು ಕ್ಷುಲ್ಲಕವಾಗಿ ಕಂಡ ಸೀತೆಗೆ ಆತನ ಕುರಿತು ಅಪಾರ ಆಕ್ರೋಶ ಇದೆ. ಈ ನೆಲೆಯಲ್ಲಿ ಆತನನ್ನು ಮಿಣುಕುಹುಳುವಿಗೆ ಸಮಾನವಾಗಿ ಕಂಡಿದ್ದಾಳೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಯ ಮಾತುಗಳಲ್ಲಿ ತೂಕವಿದೆ. ವಿನಾಕಾರಣ ಆಕೆ ರಾವಣನೊಂದಿಗೆ ಚರ್ಚೆಗೆ ಇಳಿಯುವುದಿಲ್ಲ. ತನ್ನ ಚುರುಕು ಬುದ್ಧಿ ಮತ್ತು ಮಾತಿನ ಸೂಕ್ಷ್ಮತೆಯ ಮುಖಾಂತರ ವಿಚಾರಗಳನ್ನು ಮಂಡಿಸುತ್ತಾಳೆ. ಅವಳ ಚಿಂತನೆ ಸ್ತ್ರೀಪರ ಧೋರಣೆಯಾಗಿದ್ದು ಮುಖ್ಯವಾಗಿ ಎರಡು ವಿಚಾರಗಳನ್ನು ಮುಂದಿಡುತ್ತದೆ.

೧. ಸ್ತ್ರೀಸಮುದಾಯಕ್ಕೆ ಸಾರ್ವಕಾಲಿಕ ಮಾನ್ಯತೆ ದೊರಕಬೇಕು.

೨. ಸ್ತ್ರೀ ತಾತ್ಸಾರ ಯೋಗ್ಯಳಲ್ಲ.

ಈ ಹಿನ್ನೆಲೆಯಲ್ಲಿ ಸೀತೆಯ ಮಾತುಗಳು ಸ್ತ್ರೀಬದುಕಿನ ಸುಧಾರಣೆಯ ಕುರಿತದ್ದಾಗಿದೆ. ಮಹಿಳಾಸಮುದಾಯದ ವಾಸ್ತವ ಸ್ಥಿತಿಯನ್ನು ಅನಾವರಣಗೊಳಿಸುವ ಅವಳ ಮಾತುಗಳಲ್ಲಿ ಪರಿವರ್ತನೆಯ ಆಶಯವೂ ಸೇರಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಗೆ ಮಹಿಳಾಸಮುದಾಯದ ಕುರಿತು ವಿಶೇಷ ಕಾಳಜಿ ಇದೆ. ಹಾಗಾಗಿ ಸ್ತ್ರೀಶೋಷಣೆಯ ಸಂದರ್ಭವನ್ನೆಲ್ಲ ಮೀರಿ ನಿಲ್ಲುವ ಪ್ರಯತ್ನ ಆಕೆಯದು. ಹಾಗಾಗಿ ರಾವಣನು ಒಡ್ಡುವ ಅಪಾಯ ಹಾಗೂ ಅಡ್ಡಿ ಆತಂಕಗಳನ್ನು ಆಕೆ ಸಂಪೂರ್ಣವಾಗಿ ಮೀರಿ ನಿಂತಿದ್ದಾಳೆ. ಹೀಗೆ ಸ್ತ್ರೀಚೈತನ್ಯ ಮತ್ತು ಶಕ್ತಿಯ ನೆಲೆಯಲ್ಲಿ ರಾಮಾಯಣದ ಸೀತೆಯ ಪಾತ್ರವನ್ನು ನಿರೂಪಿಸಿದುದರ ಹಿಂದೆ ಕವಿಗೆ ಮಹಿಳಾಸಮುದಾಯದ ಕುರಿತು ಇರುವ ವಿಶೇಷ ಕಾಳಜಿ ಅಭಿವ್ಯಕ್ತಗೊಂಡಿದೆ. ಸ್ತ್ರೀಸಮುದಾಯದ ಬದುಕಿಗೆ ಪೂರಕವಾದ ಜೀವನಪರ ಸಂದೇಶ ಇದೆ. ಈ ಸಂದೇಶವನ್ನು ಕವಿ ಸೀತೆಯ ಪಾತ್ರಮುಖೇನ ನಿರ್ವಚಿಸಿದ್ದಾರೆ.

**೫.೨.೬ ವೇದವತಿ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಲೌಕಿಕ ಕಾಮನೆಗಳಿಂದ ದೂರ ಉಳಿದು ತಪಸ್ವಿನಿಯಾಗಿ ಬದುಕು ನಿರ್ವಹಿಸಿದ ಪಾತ್ರ ವೇದವತಿಯದ್ದು. ಭಕ್ತಿಯ ತೀವ್ರತೆಯ ಪರಿಣಾಮ ಪರಾಕಾಷ್ಠೆಗೆ ತಲುಪಿ ಹರಿಯನ್ನೇ ಪತಿಯನ್ನಾಗಿ ಪರಿಭಾವಿಸಿದವಳು ವೇದವತಿ. ವೇದವತಿಯ ಭಕ್ತಿಯಲ್ಲಿ ಕಪಟವಿಲ್ಲ, ದೋಷವಿಲ್ಲ, ಸ್ವಾರ್ಥಪರತೆ ಇಲ್ಲ. ಅಂತರಂಗದ ತನ್ಮಯತೆಯಿಂದ ಮಾನಸಿಕವಾಗಿ ಹರಿಯನ್ನು ಸ್ವೀಕರಿಸಿದವಳು. ರಾವಣನ ಕಾಮಚೇಷ್ಟೆಗೆ ಬಲಿಬೀಳದೆ ಆತ್ಮಾರ್ಪಣೆಗೈದ ವ್ಯಕ್ತಿತ್ವವಾಗಿ ವೇದವತಿ ಕಾಣಿಸಿದ್ದಾಳೆ. ಸ್ವಯಂ

ಇಚ್ಛೆಯಿಂದ ಯಜ್ಞಪ್ರವೇಶ ಕೈಗೊಂಡವಳು. ರಾವಣನನ್ನು ತಿರಸ್ಕರಿಸಿದ ವೇದವತಿ ಅವನ ಕಾಮುಕತನದಿಂದ ತಪ್ಪಿಸಿಕೊಳ್ಳಲು ಯತ್ನಿಸಿದಳು. ತನ್ನ ಪ್ರಾಣಹೋದರೂ ಸರಿ ತಾನು ರಾವಣನಿಗೆ ಒಲಿಯುವುದಿಲ್ಲ ಎಂಬ ಸೈದ್ಧಾಂತಿಕ ನಿಲುವು ವೇದವತಿಯದ್ದು. ಹಾಗಾಗಿ ರಾವಣನನ್ನು ಧಿಕ್ಕರಿಸಿದ ವೇದವತಿ ಇಹಲೋಕದಿಂದ ಕಳಚಿಕೊಳ್ಳುವ ಸಲುವಾಗಿ ಯಜ್ಞಕುಂಡವನ್ನು ಪ್ರವೇಶಿಸುತ್ತಾಳೆ. ಪ್ರತಿಭಟನಾತ್ಮಕ ನೆಲೆಯಲ್ಲಿ ಮೂಡಿದ ಈ ಪಾತ್ರ ಆತ್ಮಸಾಕ್ಷಿಗೆ ಮತ್ತು ಅಂತರಂಗದ ಪ್ರೀತಿಗೆ ಅಧಿಕ ಮಹತ್ವ ನೀಡುತ್ತದೆ. ಪರವೆಣ್ಣ ಮೋಹಕ್ಕೆ ಸಿಲುಕಿ ನಾಶವಾಗು ಎಂದು ವೇದವತಿ ರಾವಣನನ್ನು ಶಪಿಸುವಲ್ಲಿ ಶತಮಾನಗಳ ಹೆಣ್ಣಿನ ರೋದನ, ಆಕ್ರೋಶ ವ್ಯಕ್ತವಾಗುತ್ತದೆ. ಈ ಹತಾಶೆಯಲ್ಲಿ ಕೇವಲ ದೈನ್ಯತೆ ತುಂಬಿಲ್ಲ. ಆತ್ಮಪ್ರತಿಷ್ಠೆಯನ್ನು ಉದ್ದೀಪನಗೊಳಿಸುವ ಪ್ರತಿಭಟನೆ ಇದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಪ್ರತಿಭಟನಾತ್ಮಕ ಮಾದರಿಯ ಮಹಿಳಾ ಪಾತ್ರಗಳಲ್ಲಿ ಪ್ರತಿಭಟನೆಯ ಸ್ವರೂಪ ಅಭಿವ್ಯಕ್ತಗೊಂಡಿದೆ. ಈ ಪ್ರತಿಭಟನೆ ತೀವ್ರಗಾಮಿಯಾದದ್ದು. ವ್ಯವಸ್ಥೆಯ ದೋಷವನ್ನು ಪರಿಗ್ರಹಿಸಿ, ವಿರೋಧಿಸುವಲ್ಲಿ ಈ ಮಹಾಕಾವ್ಯದ ಯಾವ ಪಾತ್ರಗಳೂ ಹಿಂದೆ ಸರಿಯುವುದಿಲ್ಲ. ವ್ಯವಸ್ಥೆಯ ಕ್ರೌರ್ಯ, ಹಿಂಸೆಯ ಕುರಿತು ಇಲ್ಲಿನ ಬಹುತೇಕ ಪಾತ್ರಗಳು ಬಂಡಾಯದ ಅಲೆ ಎಬ್ಬಿಸಿವೆ. ಈ ಬಂಡಾಯ ಪ್ರವೃತ್ತಿಯ ಹಿಂದೆ ಯಾರ ಒತ್ತಡವೂ ಇಲ್ಲ. ವ್ಯವಸ್ಥೆಯ ದೋಷದ ಕುರಿತು ತಮ್ಮ ಅಸಹನೆಯನ್ನು ಪ್ರತಿಭಟನೆಯ ಮಾದರಿಯಲ್ಲಿ ವ್ಯಕ್ತಪಡಿಸುವ ಈ ಮಹಾಕಾವ್ಯದ ಮಹಿಳಾ ಪಾತ್ರಗಳಲ್ಲಿ ಸ್ವತಂತ್ರ ಚಿಂತನೆ ಇದೆ. ಸ್ವಂತಿಕೆಯ ನೆಲೆಯ ತೀರ್ಮಾನಗಳಿವೆ. ಇಲ್ಲಿ ಮಹಿಳಾಸಮುದಾಯದ ಬುದ್ಧಿಶಕ್ತಿ, ಕ್ರಿಯಾಶೀಲತೆ, ಪ್ರಜ್ಞಾಪೂರ್ವಕ ಮನಸ್ಥಿತಿ ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ.

ಅನ್ಯಾಯದ ವಿರುದ್ಧ ಬಂಡೇಳುವ ಪ್ರತಿಭಟನಾತ್ಮಕ ಮಾದರಿ ಪಾತ್ರಗಳ ನಿರೂಪಣೆ ಕವಿಯ ವಿನೂತನ ಪರಿಕಲ್ಪನೆ ಎನ್ನಬಹುದು. ಶಿಷ್ಟ ರಾಮಾಯಣದಲ್ಲಿ ಪ್ರತಿಭಟನಾತ್ಮಕ ಮಾದರಿ ಮಹಿಳಾ ಪಾತ್ರಗಳು ಕಾಣಿಸುವುದು ತೀರಾ ವಿರಳ. ಶಿಷ್ಟ ರಾಮಾಯಣದಲ್ಲಿ ಬಂಡೇಳುವ ಪಾತ್ರವಾಗಿ ಶೂರ್ಪನಖಿ ಕಾಣಿಸಿದ್ದಾಳೆ. ಆದರೆ ಶೂರ್ಪನಖಿಯ ಪಾತ್ರ ಇಲ್ಲಿ ಓದುಗರ ಮನ ಮುಟ್ಟುವುದಿಲ್ಲ. ಇದಕ್ಕೆ ಕಾರಣ ಶಿಷ್ಟ ರಾಮಾಯಣ ಪರಂಪರೆ ಶೂರ್ಪನಖಿಯ ಪಾತ್ರವನ್ನು ಅಮಾನವೀಯ ನೆಲೆಯಲ್ಲಿಯೇ ನಿರೂಪಿಸಿಬಿಟ್ಟಿದೆ. ಹಾಗಾಗಿ ತನಗಾದ ಅವಮಾನಕ್ಕೆ ಶೂರ್ಪನಖಿಯ ಪ್ರತಿಕ್ರಿಯೆ ಹೋರಾಟ ಎನಿಸುವುದಿಲ್ಲ. ಶಿಷ್ಟ ರಾಮಾಯಣಗಳಲ್ಲಿ ಶೂರ್ಪನಖಿಗೆ ತಾಮಸ ಗುಣಗಳನ್ನು ಆರೋಪಿಸುವ ಮೂಲಕ ರೂಪ ಹಾಗೂ ಗುಣಗಳೆರಡರಲ್ಲೂ ಕ್ರೌರ್ಯವನ್ನು ಅಳವಡಿಸಲಾಗಿದೆ. ಹಾಗಾಗಿ ಇಂತಹ

ರಾಮಾಯಣದ ಓದುಗರು ಶೂರ್ಪನಖಿಯನ್ನು ಜೀವದ ನೆಲೆಯಲ್ಲಿ ಪರಿಗಣಿಸಲು ಸಾಧ್ಯವಾಗುವುದಿಲ್ಲ. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಶೂರ್ಪನಖಿಯಲ್ಲಿ ಜೀವಕಳೆ ಇದೆ. ಅವಳ ಬದುಕಿಗೆ ಅರ್ಥವಂತಿಕೆ ಇದೆ. ಅವಳ ಹೋರಾಟಕ್ಕೆ ವಿಶೇಷ ಸ್ಥಾನಮಾನ ಇದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಬಹುತೇಕ ಮಹಿಳಾ ಪಾತ್ರಗಳು ಪ್ರತಿಭಟನೆಯ ಮಾದರಿಯಲ್ಲಿ ಇವೆ. ದಾಸಿಯಿಂದ ತೊಡಗಿ ರಾಣಿಯವರೆಗೆ ತಮ್ಮ ಅಸಹನೆಯನ್ನು ವ್ಯಕ್ತಪಡಿಸಿ ನ್ಯಾಯಕ್ಕಾಗಿ ಹೋರಾಡಿ ಯಶಸ್ಸುಗಳಿಸುತ್ತವೆ. ಹೀಗೆ ರಾಮಾಯಣದ ಎಲ್ಲಾ ವರ್ಗದ ಮಹಿಳಾಸಮುದಾಯಕ್ಕೆ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಲು ಅವಕಾಶ ಕಲ್ಪಿಸಿದ್ದು ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರ ಉದಾರತೆ. ಕವಿಗೆ ಮಹಿಳಾಸಮುದಾಯದ ಬದುಕಿನ ಕುರಿತು ವಿಶೇಷ ಕಾಳಜಿ ಇರುವುದರಿಂದ ಈ ಅಭಿವ್ಯಕ್ತಿ ಸಾಧ್ಯವಾಗಿದೆ.

ನ್ಯಾಯಕ್ಕಾಗಿ, ಸತ್ಯಕ್ಕಾಗಿ, ಸಮಾನತೆಗಾಗಿ, ಹಕ್ಕಿಗಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತು ನೀಡುವ ಹೋರಾಟಕ್ಕೆ ವಿಶೇಷವಾದ ಅರ್ಥವಿದೆ. ಈ ಮಹಾಕಾವ್ಯದ ಬಹುತೇಕ ಮಹಿಳಾ ಪಾತ್ರಗಳಲ್ಲಿ ಆಕ್ರೋಶ ಇದೆ ಅಂದಮಾತ್ರಕ್ಕೆ ಈ ಪಾತ್ರಗಳಿಗೆ ಹೃದಯವಂತಿಕೆ ಇಲ್ಲವೆಂದಲ್ಲ. ಮಾನವಸಹಜ ಭಾವನೆ, ಕಾಮನೆ, ಆಕ್ರೋಶ, ಅಸಹನೆಗಳು ಕೇವಲ ಪುರುಷಸಮುದಾಯದಲ್ಲಿ ಮಾತ್ರ ಅಡಕವಾಗಿರುವುದಿಲ್ಲ. ಮಹಿಳಾಸಮುದಾಯಲ್ಲೂ ಈ ಗುಣವನ್ನು ಕಾಣಲು ಸಾಧ್ಯ ಎಂಬುದನ್ನು ಸಾಬೀತುಪಡಿಸುವ ಉದ್ದೇಶ ಇಲ್ಲಿ ಕವಿಗೆ ಇರುವುದು ಸ್ಪಷ್ಟ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಬಹುತೇಕ ಮಹಿಳಾ ಪಾತ್ರಗಳಿಗೆ ಈ ಗುಣಗಳನ್ನು ಆರೋಪಿಸಿದ್ದಾರೆ.

ಕವಿ ಮೊಯಿಲಿಯವರು ಪ್ರತಿಭಟನಾತ್ಮಕ ಮಾದರಿಯಲ್ಲಿ ಮಹಿಳಾಸಮುದಾಯವನ್ನು ನಿರೂಪಿಸಲು ಕಾರಣ ಏನು? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕಿದೆ. ಕವಿಯ ಈ ನಿರೂಪಣೆಗೆ ಸಂಬಂಧಿಸಿದಂತೆ ಮುಖ್ಯವಾಗಿ ನಾಲ್ಕು ವಿಚಾರಗಳನ್ನು ಉತ್ತರ ರೂಪದಲ್ಲಿ ಕಂಡುಕೊಳ್ಳಬಹುದು.

೧. ಶಿಷ್ಟ ರಾಮಾಯಣ ಪರಂಪರೆ ಮಹಿಳಾಸಮುದಾಯದ ಕುರಿತು ತಳೆದ ತಾತ್ಸಾರದ ಧೋರಣೆಗೆ ಕವಿಯ ಪ್ರತಿಕ್ರಿಯೆ.

೨. ಮಹಿಳಾಸಮುದಾಯದ ಅನನ್ಯತೆಯನ್ನು ಸಾಮಾಜಿಕರಿಗೆ ಮನದಟ್ಟು ಮಾಡುವ ಆಶಯ.

೩. ತನ್ನ ಚಿಂತನೆಗಳನ್ನು ಪಾತ್ರಮುಖೇನ ಪ್ರತಿಬಿಂಬಿಸುವ ಪ್ರಯತ್ನ.

೪. ಮಹಿಳಾಸಮುದಾಯದ ಸ್ವತಂತ್ರ ಚಿಂತನೆ, ಧೋರಣೆ ನಿಲುವನ್ನು ಕೇಂದ್ರಕ್ಕೆ ತಂದು ನಿರೂಪಿಸುವ ಉದ್ದೇಶ.

ಈ ಹಿನ್ನೆಲೆಯಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಲೋಕವನ್ನು ಪ್ರತಿಭಟನೆಯ ನೆಲೆಯಲ್ಲಿ ನಿರೂಪಿಸುವ ಉದ್ದೇಶವನ್ನು ಕವಿ ಹೊಂದಿರುವುದು ಸ್ಪಷ್ಟವಾಗುತ್ತದೆ.

## ೫.೩ ಸ್ವತಂತ್ರ ಮಾದರಿ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸ್ವರೂಪ, ಲಕ್ಷಣಗಳಲ್ಲಿ ವೈವಿಧ್ಯತೆ ಇದೆ. ಭಿನ್ನ ಸಾಂಸ್ಕೃತಿಕ ಪಾರಂಪರಿಕ ನಿಲುವಿಗೆ ಬದ್ಧವಾಗಿ ವಾಸ್ತವಪ್ರಜ್ಞೆ ತಾಳಿ ಪ್ರತಿರೋಧದ ಮಾದರಿಯಲ್ಲಿ ಇಲ್ಲಿನ ಮಹಿಳಾ ಪಾತ್ರಗಳು ಪ್ರತಿಕ್ರಿಯಿಸಿವೆ. ಸಾಂಪ್ರದಾಯಿಕ ಮತ್ತು ಪ್ರತಿಭಟನಾತ್ಮಕ ಮಾದರಿಗಿಂತ ಭಿನ್ನ ನೆಲೆಯಲ್ಲಿ ಸ್ವತಂತ್ರ ಮಾದರಿಯ ಪಾತ್ರಗಳು ಸಾಗಿವೆ. ಈ ಬಗೆಯ ಸಾಗುವಿಕೆಯ ಹಿಂದೆ ಸ್ವತಂತ್ರ ಮಾದರಿಯ ಪಾತ್ರಗಳಲ್ಲಿ ಆಕ್ರೋಶವಾಗಲಿ, ಅಸಹಾಯಕತೆಯಾಗಲಿ ವ್ಯಕ್ತವಾಗಿಲ್ಲ. ವ್ಯವಸ್ಥೆಯ ದೋಷ, ಪಕ್ಷಪಾತವನ್ನು ಗುರುತಿಸುವ ಮಟ್ಟಕ್ಕೆ ಇಲ್ಲಿನ ಪಾತ್ರಗಳು ಬೆಳೆದಿವೆ. ಇದರೊಂದಿಗೆ ವ್ಯಕ್ತಿಗತ ನಿಲುವನ್ನು ಅಭಿವ್ಯಕ್ತಿಸಿವೆ. ಸ್ವತಂತ್ರ ಮಾದರಿ ಪಾತ್ರಗಳು ಅಸ್ತಿತ್ವ, ವ್ಯಕ್ತಿತ್ವ, ಹಕ್ಕು ಮತ್ತು ಸ್ವಾತಂತ್ರ್ಯದ ಕುರಿತು ಮಾತಾಡುತ್ತವೆ. ತೋಚಿದ್ದನ್ನು ತನ್ನ ನೆಲೆಯಿಂದ ಅಭಿವ್ಯಕ್ತಿಸುವ ಸ್ವಾತಂತ್ರ್ಯ ಪಡೆದಿವೆ. ಮಹಾನ್ವೇಷಣಂ ಮಹಾಕಾವ್ಯದ ಸ್ವತಂತ್ರ ಮಾದರಿ ಪಾತ್ರಗಳು: ಅನಸೂಯೆ, ಪ್ರಭಾವೈದ್ಯೆ, ಊರ್ಮಿಳೆ, ತಾರೆ, ಸ್ವಯಂಪ್ರಭೆ. ಮಂಡೋದರಿ, ಅಹಲ್ಯೆ, ತ್ರಿಜಟೆ, ಸುರಮೆ, ಅನಲೆ,

### ೫.೩.೧ ಅನಸೂಯೆ

ಮಹಾನ್ವೇಷಣಂ ಮಹಾಕಾವ್ಯ ಅರಮನೆಯ ಬದುಕನ್ನು ಮಾತ್ರ ಗ್ರಹಿಸಿಲ್ಲ. ಋಷಿಸಂಸ್ಕೃತಿಯನ್ನು ಪ್ರಧಾನವಾಹಿನಿಗೆ ತಂದಿದೆ. ಈ ಪ್ರಯತ್ನದಲ್ಲಿ ಕವಿ ಋಷಿಪತ್ನಿಯರನ್ನು ಕಡೆಗಣಿಸಿಲ್ಲ. ಋಷಿಸಂಸ್ಕೃತಿಯರ ಸಾಧಕ – ಬಾಧಕ, ಶಕ್ತಿ, ಉಪದೇಶ, ತಾತ್ವಿಕತೆಯನ್ನು ಅನುಷ್ಠಾನಕ್ಕೆ ತರಲಾಗಿದೆ. ಪ್ರಭುತ್ವಸಂಸ್ಕೃತಿ ಋಷಿಸಂಸ್ಕೃತಿಯನ್ನು ಪ್ರಧಾನವೆಂದು ಪರಿಭಾವಿಸಿದೆ. ಈ ಸಂಸ್ಕೃತಿಯ ತಾತ್ವಿಕ ನಿಲುವನ್ನು ಸ್ವೀಕರಿಸುವ ಮುಖಾಂತರ ಕುಟೀರದ ಬದುಕಿಗೆ ಆದ್ಯತೆ ನೀಡಲಾಗಿದೆ. ಮಾನವಬದುಕು ಕೇವಲ ಭೋಗವಿಲಾಸಕ್ಕೆ ಸೀಮಿತವಾಗಬಾರದು. ನಾಗರಿಕತೆಯೊಂದಿಗೆ ಮಾನವೀಯತೆಯನ್ನು ಪ್ರತಿಪಾದಿಸಬೇಕು. ದಾನವತ್ವ ನಶಿಸಬೇಕು.

ಇಂಥ ಮೌಲ್ಯಭರಿತ ಚಿಂತನೆಯನ್ನು ಮಹಾನ್ವೇಷಣಂ ಮಹಾಕಾವ್ಯ ಹೊತ್ತಿದೆ. ಈ ಮೂಲಕ ಕುಟೀರ ವಾಸಿಗಳ ಬದುಕನ್ನು ಕೇಂದ್ರಕ್ಕೆ ತರಲಾಗಿದೆ.

ಅತ್ರಿ, ಅನಸೂಯೆಯರದ್ದು ಪ್ರೌಢ ವ್ಯಕ್ತಿತ್ವ. ಸಹಜ ಬದುಕನ್ನು ಮೀರಿ ಬದುಕಿನ ಆಚೆಗೆ ಇರುವ ಸಾರ್ಥಕ ಜೀವನ ಶೋಧದಲ್ಲಿ ಈ ಪಾತ್ರಗಳು ಸಾಗಿವೆ. ತಪೋನಿಧಿಗಳಾದ ಇವರು ಪ್ರೌಢ ನೆಲೆಯಲ್ಲಿ ಸುದೀರ್ಘ ಅವಧಿಯ ಬದುಕು ಕಂಡವರು. ಇವರ ಚಿಂತನೆ ಸಮಾಜಮುಖಿ ನೆಲೆಯದ್ದು. ಮಾತಲ್ಲಿ ಸುಧಾರಣಾಪರ ನಿಲುವಿದೆ. ಸಮಾಜ ಉದ್ಧಾರದ ಪರಿಕಲ್ಪನೆ ಇದೆ. ವ್ರತ, ಜಪ, ತಪ, ಧ್ಯಾನ, ಉಪವಾಸಗಳಿಂದ ಕಾಯ ಬಳಲಿದರೂ ಮನಸ್ಸನ್ನು ಹಸಿರಾಗಿಯೇ ಉಳಿಸಿಕೊಂಡವಳು. ಅನಸೂಯೆ ಸಾಧಾರಣ ವ್ಯಕ್ತಿತ್ವದ ಋಷಿಪತ್ನಿಯಲ್ಲ. ಅವಳ ಮಾತಲ್ಲಿ ತೂಕವಿದೆ. ಈ ತೂಕದ ಮಾತುಗಳು ಅತ್ರಿ ಅನಸೂಯೆಯರ ಬದುಕಿನ ವಿಧಾನಗಳನ್ನು ಪರಿಚಯಿಸುತ್ತದೆ. ಸತಿಪತಿಯ ಸಾಮರಸ್ಯದ ಬದುಕು ಸ್ವಸ್ಥ ಕುಟುಂಬವ್ಯವಸ್ಥೆಗೆ ಬುನಾದಿಯಾಗುವುದು. ಈ ಸತ್ಯ ಋಷಿದಂಪತಿಗಳಿಂದ ಅನಾವರಣಗೊಂಡಿದೆ. ಸತಿಪತಿಗಳಲ್ಲಿ ಭಿನ್ನಾಭಿಪ್ರಾಯ, ವಿರಸ ತಲೆದೋರಿದರೆ ಬದುಕು ಜಂಜಡವಾಗುವುದು ಎಂಬ ಅಭಿಪ್ರಾಯ ಅನಸೂಯೆಯದ್ದು. ಹಾಗಾಗಿ ನುಡಿ-ನಡೆಗಳ ಸಾಮರಸ್ಯದ ಬದುಕು ಋಷಿಪತ್ನಿ ಅನಸೂಯೆಯದ್ದಾಗಿದೆ.

ಅನಸೂಯೆ ಪ್ರತಿಪಾದಿಸಿದ ಋಷಿಸಂಸ್ಕೃತಿಯ ಚಿಂತನೆಗಳು ಮಾನವಸಂಸ್ಕೃತಿಯನ್ನು ಮೀರಿದ್ದು ಮಾನವಸಮುದಾಯವನ್ನು ಉದ್ಧಾರ ಪಥದತ್ತ ಕೊಂಡೊಯ್ಯುವ ಆಶಯ ಅನಸೂಯೆಯಲ್ಲಿ ಇದೆ. ಲೌಕಿಕ ಕಾಮನೆಗಳಿಂದ ದೂರ ಉಳಿದ ಅನಸೂಯೆಗೆ ರಾಜಪರಂಪರೆಯ ಮಹಿಳಾ ಬದುಕಿನ ಒಳತೋಟಿಯ ಅರಿವಿದೆ. ಅತ್ರಿ ಅನಸೂಯೆಯ ಪ್ರಸಂಗದ ನಿರೂಪಣೆಯಲ್ಲಿ ಪವಾಡದ ಪ್ರಸ್ತಾಪವಿಲ್ಲ. ಉತ್ಪ್ರೇಕ್ಷೆಯೂ ಇಲ್ಲ. ಮಾನವೀಯತೆಯನ್ನು ಪ್ರತಿನಿಧಿಸುವ ಈ ಪಾತ್ರಗಳು ಎಲ್ಲಿಯೂ ಆತ್ಮವಂಚನೆ ಮಾಡಿಕೊಳ್ಳುವುದಿಲ್ಲ. ನರಳುವಿಕೆಗೆ ಒಳಗಾದ ಅಂತಃಪುರದ ಸ್ತ್ರೀಜಗತ್ತಿನ ಕುರಿತು ಅನಸೂಯೆಗೆ ಅನುಕಂಪ ಇದೆ. ಅವಳ ಚಿಂತನೆ, ಉದ್ದೇಶ ಆಶಯಗಳೆಲ್ಲ ಉದಾತ್ತವಾದದ್ದು. ಹಾಗಾಗಿ ರಾಮ ಮತ್ತು ಸೀತೆಯರಿಗೆ ಉಪದೇಶ ನೀಡುವ ಮಟ್ಟಕ್ಕೆ ಕವಿ ಅನಸೂಯೆಯನ್ನು ಬೆಳೆಸಿದ್ದಾರೆ.

ಪ್ರಭುತ್ವಸಂಸ್ಕೃತಿ ಋಷಿಪರಂಪರೆಯ ತಾತ್ವಿಕ ನಿಲುವನ್ನು ಸಹಜವಾಗಿಯೇ ಸ್ವೀಕರಿಸಿದೆ. ಈ ಸ್ವೀಕರಣ ಮನಸ್ಥಿತಿಯ ಹಿಂದೆ ಒತ್ತಾಯವಿಲ್ಲ. ರಾಮನೊಬ್ಬ ರಾಜಪರಂಪರೆಯ ಪ್ರತಿನಿಧಿಯಾದರೂ ಅನಸೂಯೆಯ ಉಪದೇಶಕ್ಕೆ ಬದ್ಧನಾಗಿದ್ದಾನೆ. ಜೈವಿಕ ಅಹಂಮಿಕೆ

ಒಂದೆಡೆ ಆದರೆ ಪ್ರಭುತ್ವದ ಪ್ರತಿನಿಧಿ ಎಂಬ ಪ್ರಜ್ಞೆ ಇನ್ನೊಂದೆಡೆ ರಾಮನನ್ನು ಬಾಧಿಸದೆ ಇರಲಿಲ್ಲ. ಹೀಗಿದ್ದರೂ ಕವಿ ಈ ಅಹಂಮಿಕೆಯನ್ನು ಚಿತ್ರಿಸದೆ ಪ್ರದರ್ಶಿಸದೆ ಅನಸೂಯೆಯ ಮಾತನ್ನು ಪ್ರೀತಿಯಿಂದ ಕೇಳಬಲ್ಲ ಉತ್ತಮ ಶ್ರೋತೃವನ್ನಾಗಿ ರಾಮನನ್ನು ಚಿತ್ರಿಸಿದ್ದಾರೆ. ರಾಮ ಅನಸೂಯೆಯ ಮಾತನ್ನು ಪ್ರೀತಿಯಿಂದ ಸ್ವೀಕರಿಸುವುದರ ಮೂಲಕ ಅನಸೂಯೆ ಬೋಧನೆಗೆ ಯೋಗ್ಯಳು ಎಂಬುದನ್ನು ಸಾಬೀತುಪಡಿಸಲಾಗಿದೆ. ಆಕೆಯ ಮಾತುಗಳಲ್ಲಿ ರಾಮನಿಗೆ ಪ್ರೀತಿ ಇದೆ. ಅವಳ ಮಾತನ್ನು ಆಲಿಸುವಲ್ಲಿ ಆಸಕ್ತಿ ಮತ್ತು ತಾಳ್ಮೆ ಇದೆ. ಋಷಿಪತ್ನಿಯ ಮಾತನ್ನು ಆಲಿಸದಿದ್ದಲ್ಲಿ ಶಾಪಗ್ರಸ್ತನಾಗುವ ಭೀತಿ ರಾಮನನ್ನು ಕಾಡಿಲ್ಲ. ಹಾಗಾಗಿ ರಾಮ ಸ್ವಯಂ ಆಸಕ್ತಿಯಿಂದ ಅನಸೂಯೆಯ ಮಾತನ್ನು ಸ್ವೀಕರಿಸುತ್ತಾನೆ. ಅನಸೂಯೆಯ ಮಾತು ಕೇವಲ ರಾಮಸೀತೆಗೆ ಮಾತ್ರ ಅನ್ವಯವಾಗುವಂತೆ ಇಲ್ಲ. ಸಮಸ್ತ ಮಾನವಸಮುದಾಯ ಸ್ವೀಕರಣ ಮಾಡುವಂತೆ ಇದೆ. ಪ್ರತಿಯೋರ್ವರ ದಾಂಪತ್ಯ ಚಲಿಸಬೇಕಾದ ನೆಲೆ, ದಿಕ್ಕು, ಮಾರ್ಗದ ಕುರಿತು ಅನಸೂಯೆಯ ಮಾತಿದೆ. ಇಷ್ಟಕ್ಕೂ ರಾಮಸೀತೆಯರಿಗೆ ಉಪದೇಶಿಸಲು ಅನಸೂಯೆ ಯೋಗ್ಯ ವ್ಯಕ್ತಿಯೇ? ಎಂಬ ಪ್ರಶ್ನೆ ಎದುರಾಗುತ್ತದೆ. ಅವಳ ವೈಯಕ್ತಿಕ ಬದುಕು ಸಾಮರಸ್ಯದ ಮಾದರಿಯಲ್ಲಿ ಇರುವುದರಿಂದ ಉಪದೇಶಕ್ಕೆ ಯೋಗ್ಯಳು ಎಂದೇ ಹೇಳಬೇಕು.

ತನ್ನ ತಾತ್ವಿಕ ನಿಲುವನ್ನು ವೈಯಕ್ತಿಕ ಬದುಕಲ್ಲಿ ಅಳವಡಿಸುತ್ತಾ ಉಪದೇಶದ ನೆಲೆಯಲ್ಲಿ ಅನ್ಯರನ್ನು ಪ್ರೋತ್ಸಾಹಿಸುವ ಮಾದರಿಯಲ್ಲಿ ಅನಸೂಯೆಯ ಬದುಕು ಸಾಗಿದೆ. ದಾಂಪತ್ಯದಲ್ಲಿ ಪರಸ್ಪರರು ಪೂರಕವಾಗಿ ಹೇಗೆ ನಡೆಯಬೇಕು ಎಂಬುದನ್ನು ಅನಸೂಯೆ ರಾಮಸೀತೆಯರಿಗೆ ಬೋಧಿಸಿದ್ದಾಳೆ. ಈ ಬೋಧನೆಯ ಹಿಂದೆ ಯಾವುದೇ ಪಕ್ಷಪಾತ ಧೋರಣೆ ಇಲ್ಲ. ಪೂರ್ವಗ್ರಹಪೀಡಿತ ಕಲ್ಪನೆಯೂ ಇಲ್ಲ. ಪುರುಷಪ್ರಭುತ್ವವನ್ನು ಇಲ್ಲಿ ಪ್ರೋತ್ಸಾಹಿಸಿಲ್ಲ. ಮಹಿಳೆಯನ್ನು ದ್ವಿತೀಯ ದರ್ಜೆಯ ಪ್ರಜೆ ಎಂದು ಪರಿಗಣಿಸಿಲ್ಲ. ಚಲನೆಗೆ ರಥದ ಎಲ್ಲ ಗಾಲಿಗಳು ಮುಖ್ಯವಾದಂತೆ ದಾಂಪತ್ಯದ ಸಾರ್ಥಕತೆಗೆ ಪರಸ್ಪರ ಸಹಕಾರ ಮುಖ್ಯ. ಆರೋಗ್ಯಕರ ಚಿಂತನೆ, ಸಹನಶೀಲತೆ, ವೈಚಾರಿಕತೆ ಮುಖ್ಯ ಎಂಬ ಪ್ರತಿಪಾದನೆ ಇದೆ. ಈ ಕುರಿತ ಅನಸೂಯೆಯ ಉಪದೇಶದ ಮಾತುಗಳು ಸಾರ್ವಕಾಲಿಕ ಮನ್ನಣೆಯನ್ನು ಪಡೆಯುತ್ತವೆ.

ಪತಿಯನ್ನು ಅನುಸರಿಸಿ ಮೈತ್ರಿಯುತ ಸಹಬಾಳ್ವೆ ನಡೆಸಬೇಕಾದ ಅನಿವಾರ್ಯತೆ ಸತಿಗಿದೆ ಎಂಬುದು ಅನಸೂಯೆಯ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಪಾಪ-ಪುಣ್ಯದ ಪರಿಕಲ್ಪನೆಯ ಮಹತ್ವ ಮಹಾನ್ವೇಷಣಂ ಮಹಾಕಾವ್ಯದ ಅನಸೂಯೆಯ ಪಾತ್ರದಿಂದ ಅಭಿವ್ಯಕ್ತವಾಗಿದೆ. ಅನಸೂಯೆಯ ಉಪದೇಶದ ಮಾತುಗಳು ಹೊರನೋಟಕ್ಕೆ ಸಾಂಪ್ರದಾಯಿಕ ಚಿಂತನೆಯನ್ನು

ಪ್ರೋತ್ಸಾಹಿಸಿದಂತೆ ಕಾಣುತ್ತದಾದರೂ ವಾಸ್ತವವಾಗಿ ಇಲ್ಲಿ ಸಮಾನತೆಯ ಪ್ರಸ್ತಾಪವಿದೆ. ಸೀತೆಯನ್ನು ಹೇಗೆ ನಡೆಯಿಸಿಕೊಳ್ಳಬೇಕು ಎಂಬುದರ ಕುರಿತು ರಾಮನಿಗೆ ಉಪದೇಶ ನೀಡುವಲ್ಲಿ ಅನಸೂಯೆಯ ವೈಚಾರಿಕ ನಿಲುವು ಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ.

ಅನಸೂಯೆಯ ನಿಲುವಿನಲ್ಲಿ ದ್ವಂದ್ವವಿಲ್ಲ. ಸ್ಪಷ್ಟತೆ ಇದೆ. ಪ್ರಬುದ್ಧ ಚಿಂತನೆಯಿಂದ ಸ್ತ್ರೀಬದುಕಿನ ನೆಲೆಯನ್ನು ನಿರೂಪಿಸಿದ್ದಾಳೆ. ಗಂಡು ಹೆಣ್ಣು ಸಮಾಜದ ಎರಡು ಕಣ್ಣುಗಳ ಹಾಗೆ. ಇವರಲ್ಲಿ ಉಚ್ಚ–ನೀಚ, ಪ್ರಥಮ–ದ್ವಿತೀಯ, ಶ್ರೇಷ್ಠ–ಕನಿಷ್ಠ ತಾರತಮ್ಯವನ್ನು ಗುರುತಿಸಲು ಕಷ್ಟಸಾಧ್ಯ. ಅಂತೆಯೇ ಗುರುತಿಸುವುದೂ ಸರಿಯಲ್ಲ. ಸಮಾನತೆ, ಸಮಬಲ, ಸಮಪ್ರೇಮ ಸಮಾನವಾಗಿ ಸಂಚರಿಸಿದಾಗ ಮಾತ್ರ ಪ್ರೀತಿ ಶಾಶ್ವತವಾಗಿ ಉಳಿಯುತ್ತದೆ. ಹಾಗಾಗಿ ಪರಸ್ಪರ ಕೊಡುವ ಮತ್ತು ಕೊಳ್ಳುವ ಪ್ರಕ್ರಿಯೆಯಿಂದ ಸಾಗುವ ಪ್ರೀತಿ, ಪ್ರೇಮ ದಾಂಪತ್ಯವನ್ನು ಗಟ್ಟಿಗೊಳಿಸುತ್ತದೆ. ಈ ಗಟ್ಟಿಗೊಳಿಸುವಿಕೆಯ ಹಿಂದೆ ಗಂಡ ಹೆಂಡಿರ ಶ್ರಮ ಬಹುಮುಖ್ಯ. ಹಾಗಾಗಿ ಪರಸ್ಪರ ಪ್ರೇಮದಿಂದ ದೂರ ಉಳಿಯುವ  ದಾಂಪತ್ಯ ಏಕಮುಖಿಯಾದರೆ ಶಾಶ್ವತವಾಗಲಾರದು. ಈ ಸತ್ಯದ ಅರಿವು ಪ್ರತಿಯೋರ್ವ ದಂಪತಿಗಳಲ್ಲೂ ಇರಬೇಕು ಎಂಬುದು ಅನಸೂಯೆಯ ಆಶಯ. ಅನಸೂಯೆಯ ಅನುಭವದ ನೆಲೆಯಲ್ಲಿ ಆಕೆಯ ಅಂತರಂಗದಿಂದ ಹೊಮ್ಮಿದ ಮಾತುಗಳಲ್ಲಿ ಸಾಮಾಜಿಕ ವಿಶ್ಲೇಷಣೆ ಇದೆ.

ದಾಂಪತ್ಯಧರ್ಮದ ಜವಾಬ್ದಾರಿಯನ್ನು ಬೋಧಿಸುವ ಅನಸೂಯೆಯ ಮಾತುಗಳಲ್ಲಿ ಅರ್ಥವಂತಿಕೆ ಇದೆ. ಪತಿವ್ರತಾಶಕ್ತಿಯ ಪ್ರೋತ್ಸಾಹದೊಂದಿಗೆ ಸತಿಯಾದವಳು ಪತಿಗೆ ಅನುಗುಣವಾಗಿ ನಡೆಯಬೇಕು ಎಂಬ ಆಶಯವಿದೆ. ಈ ಪಾತಿವ್ರತ್ಯದ ಮಹತ್ವ ಅಗತ್ಯತೆಯನ್ನು ಸತಿಯಂತೆಯೇ ಪತಿಯೂ ಪಾಲಿಸಬೇಕು ಎಂಬ ಉದ್ದೇಶವಿದೆ. ಸತಿಧರ್ಮಕ್ಕೆ ಆದ್ಯತೆ ಕೊಟ್ಟಿರುವ ಅನಸೂಯೆಯ ಮಾತುಗಳಲ್ಲಿ ಪತಿಧರ್ಮದ ಸಾರವೂ ಸೇರಿದೆ. ಅನಸೂಯೆಯ ಮನೋಧರ್ಮದಲ್ಲಿ ಚಿಂತನಶೀಲತೆ ಅಭಿವ್ಯಕ್ತಗೊಂಡಿದೆ. ಹೀಗೆ ತನ್ನ ಅಭಿಪ್ರಾಯವನ್ನು ಅಭಿವ್ಯಕ್ತಿಸುವಲ್ಲಿ ಅನಸೂಯೆಗೆ ಹಿಂಜರಿಕೆ ಇಲ್ಲ. ಯಾರ ಒತ್ತಡವೂ ಇಲ್ಲ. ಬಾಹ್ಯನೋಟಕ್ಕೆ ಅನಸೂಯೆಯ ಚಿಂತನೆ ಸಂಪ್ರದಾಯವನ್ನು ಬೆಂಬಲಿಸುವಂತೆ ಕಂಡರೂ ವ್ಯಕ್ತಿಗತ ನೆಲೆಯ ಚಿಂತನೆ ಮತ್ತು ಉದ್ದೇಶ ಇಲ್ಲಿ ಅಭಿವ್ಯಕ್ತಗೊಂಡಿದೆ. ಆದ್ದರಿಂದ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅನಸೂಯೆ ಸ್ವತಂತ್ರ ಮಾದರಿಯ ಪಾತ್ರವಾಗಿಯೇ ಕಾಣಿಸಿಕೊಳ್ಳುತ್ತಾಳೆ. ಪತಿಯನ್ನು ನಡೆಸಿಕೊಳ್ಳಬೇಕಾದ ವಿಧಾನವನ್ನು ಸೀತೆಗೆ ಅರುಹಿದ ಅನಸೂಯೆ ಸತಿಯನ್ನು ನಡೆಸಬೇಕಾದ ವಿಧಾನದ ಕುರಿತು ರಾಮನನ್ನು ಉಪದೇಶಿಸುತ್ತಾಳೆ.

"ಕೇಳು ಶ್ರೀರಾಮ
ಸಮಾಜದಲಿ ಸ್ತ್ರೀ ಶೋಷಿತಳು ಪೀಡಿತಳು
ಆರ್ಯರಕ್ಕಸಶ್ರಮಿಕರಾ ಮನೆಗಳಾದೊಡದೇನು
ಎಲ್ಲೆಲ್ಲು ಪೆಣ್ಜಾತಿ ಸಂಕಟದಲೇಯಿಹುದು",
(ಮೊಯಿಲಿ: ೨೦೦೨ : ೨೮)

ಶತಶತಮಾನಗಳಿಂದ ಸ್ತ್ರೀಸಮುದಾಯ ಶೋಷಣೆಗೆ ಒಳಗಾಗಿದೆ. ಈ ಶೋಷಣೆಗೆ ರಾಣಿ, ದಾಸಿ ಎಂಬ ಭೇದವಿಲ್ಲ. ಆರ್ಯ, ರಕ್ಕಸ, ಶ್ರಮಿಕ ಮಹಿಳೆಯರು ಎಂಬ ತಾರತಮ್ಯ ಇಲ್ಲ. ರಾಜಪತ್ನಿಯಾಗಿರಲಿ, ಋಷಿಪತ್ನಿಯಾಗಿರಲಿ ಇವರೆಲ್ಲ ತಮ್ಮಿಚ್ಛೆಗೆ ಅನುಗುಣವಾಗಿ ನಡೆಯುವಂತಿಲ್ಲ. ಪ್ರತಿಯೊಬ್ಬರೂ ಅವರವರ ವ್ಯಾಪ್ತಿಯೊಳಗೆ ನೋವುಣ್ಣುತ್ತಿದ್ದಾರೆ ಎಂಬುದನ್ನು ಅನಸೂಯೆ ರಾಮನಿಗೆ ಮನದಟ್ಟು ಮಾಡುತ್ತಾಳೆ. ಈ ನೆಲೆಯಲ್ಲಿ ಆಕೆ ಸ್ತ್ರೀಯರ ಸ್ಥಿತಿಗತಿಯ ಸುಧಾರಣಾ ಆಶಯವನ್ನು ಹೊತ್ತಿದ್ದಾಳೆ.

ಸಮಕಾಲೀನ ಮೌಲ್ಯಗಳನ್ನು ಅಳವಡಿಸಿ ಹೊಸ ಚಿಂತನೆಗಳನ್ನು ಆಧುನಿಕ ಕನ್ನಡ ಮಹಾಕಾವ್ಯಗಳು ಬಿತ್ತಿವೆ. ಈ ಬಗೆಯ ಬಿತ್ತುವಿಕೆಯಲ್ಲಿ ಮಹಾಕಾವ್ಯದ ಪಾತ್ರಗಳನ್ನು ಪ್ರಸ್ತುತ ವಿದ್ಯಮಾನಕ್ಕೆ ಅನುಗುಣವಾಗಿ ಮಾರ್ಪಾಟಿಸಿಕೊಳ್ಳಲಾಗಿದೆ. ಇಂಥ ಸಂದರ್ಭ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅನಸೂಯೆಯ ಪಾತ್ರದಲ್ಲಿ ವ್ಯಕ್ತಗೊಂಡಿದೆ. ಸುಧಾರಣಾಪರ ನಿಲುವನ್ನು ಮಹಾಕಾವ್ಯದಲ್ಲಿ ಅಳವಡಿಸಿದರೆ ಓದುಗರು ಬಹುಬೇಗ ಸ್ವೀಕರಿಸುತ್ತಾರೆ. ರಾಮಾಯಣ, ಮಹಾಭಾರತ ಕಾವ್ಯಪರಂಪರೆಗೆ ಅದರದ್ದೇ ಆದ ವಿಶಿಷ್ಟ ನೆಲೆ ಇದೆ. ಶಾಶ್ವತವಾಗಿ ನೆಲೆನಿಲ್ಲುವ ಮಹಾಕಾವ್ಯದ ತತ್ತ್ವಗಳನ್ನು ಮೌಲ್ಯದ ನೆಲೆಯಲ್ಲಿ ಜನಸಮುದಾಯ ಸ್ವೀಕರಿಸುತ್ತದೆ.

ರಾಜಸಂಸ್ಕೃತಿಯು ಮಹಿಳಾ ಮನಸ್ಥಿತಿಗೆ ಸ್ಪಂದಿಸುವ ಬಗೆ ರಾಮ ಮತ್ತು ಅನಸೂಯೆಯ ಪಾತ್ರಗಳಿಂದ ಅಭಿವ್ಯಕ್ತವಾಗಿದೆ. ಅನಸೂಯೆಯ ಮಾತುಗಳಲ್ಲಿ ನೈಜತೆ ಇದೆ. ರಾಮನೋರ್ವ ರಾಜವಂಶಿಗನಾದರೂ ಆತನೊಡನೆ ಸಂಭಾಷಣೆ ನಡೆಸುವಲ್ಲಿ ಅನಸೂಯೆಗೆ ಹಿಂಜರಿಕೆ ಇಲ್ಲ. ಅವಳ ಮಾತುಗಳಲ್ಲಿ ರಾಜಸಂಸ್ಕೃತಿಯ ವಿಡಂಬನೆ ಇದೆ. ಪರಿವರ್ತನೆಯ ಆಶಯ ಇದೆ. ರಾಜಪರಂಪರೆಯಿಂದ ತೊಡಗಿ ಕೆಳಸಮುದಾಯದ ಬದುಕಿನ ಬವಣೆಯ ಅನಾವರಣವಿದೆ. ಪುರುಷಸಂಸ್ಕೃತಿಯ ದಬ್ಬಾಳಿಕೆ ಸೂಕ್ಷ್ಮ ನೆಲೆಯಲ್ಲಿ ವ್ಯಂಗ್ಯ ವಿಡಂಬನೆಗೆ ಒಳಗಾಗಿದೆ. ಈ ವಿಡಂಬನಾತ್ಮಕ ಮಾತುಗಳಲ್ಲಿ ಮಹಿಳಾ ಸ್ಥಿತಿಗತಿಯ ಅನಾವರಣದೊಂದಿಗೆ ಸುಧಾರಣಾ ಆಶಯವಿದೆ. ಈ ಆಶಯ ರಾಮನನ್ನು ಜಾಗೃತಗೊಳಿಸಿದೆ. ಮಂತ್ರಮುಗ್ಧ

ಕೇಳುಗನನ್ನಾಗಿಸಿದೆ. ಈ ತಾಳ್ಮೆ ರಾಮನ ಘನತೆಯನ್ನು ಹೆಚ್ಚಿಸಿದೆ. ಅನಸೂಯೆಯ ಪ್ರತಿಯೊಂದು ಮೌಲ್ಯಯುತ ಮಾತುಗಳಿಗೆ ಸಮ್ಮತಿಸಿದ ರಾಮ ಸೀತೆಯನ್ನು ಅಂತೆಯೇ ನಡೆಸಿಕೊಳ್ಳುವುದಾಗಿ ಮಾತು ನೀಡುತ್ತಾನೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅನಸೂಯೆಯ ಪಾತ್ರ ಬೌದ್ಧಿಕ ನೆಲೆಯ ವಿಚಾರವಂತಿಕೆಗೆ ಸಾಕ್ಷಿಯಾಗಿದೆ. ಈ ಬೌದ್ಧಿಕಪ್ರಜ್ಞೆ ಸ್ವೀಕಾರಯೋಗ್ಯವಾದದ್ದು. ಅನುಷ್ಠಾನಯೋಗ್ಯವಾದದ್ದು ಕೂಡಾ. ಸ್ತ್ರೀಬದುಕಿನ ಶೋಷಣೆಯ ನೆಲೆಗಳನ್ನು ಗುರುತಿಸುವ ಅನಸೂಯೆ ಇಲ್ಲಿ ಪಕ್ಷಪಾತ ಧೋರಣೆ ತಳೆದಿಲ್ಲ. ಪುರುಷಪ್ರಧಾನ ಸಾಮಾಜಿಕವ್ಯವಸ್ಥೆ ಮಹಿಳೆಯರಿಗೆ ಒಡ್ಡುವ ಆತಂಕಗಳ ಚಿತ್ರಣ ಇಲ್ಲಿದೆ. ಈ ವೈಚಾರಿಕತೆಯ ಪ್ರತಿಪಾದನೆಯಲ್ಲಿ ನಿಷ್ಪಕ್ಷಪಾತ ನಿಲುವಿದೆ. ಹಾಗಾಗಿ ರಾಣಿಯರನ್ನು, ದಾಸಿಯರನ್ನು, ಆರ್ಯಯರನ್ನು, ರಕ್ಕಸರನ್ನು, ಶ್ರಮಿಕರನ್ನು, ಋಷಿಪತ್ನಿಯರನ್ನು ಪ್ರಸ್ತಾಪಿಸುತ್ತಾ ಎಲ್ಲರೂ ಅವರವರ ವ್ಯಾಪ್ತಿಯಲ್ಲಿ ಪತಿಯಿಂದ ನೋವುಂಡವರೆಂಬುದನ್ನು ಹೇಳಲಾಗಿದೆ. ರಾಮ ಲಿಂಗ ಅಸಮಾನತೆ ನೀಗುವ ಶಕ್ತಿಯಾಗಬೇಕು ಎಂಬುದು ಅನಸೂಯೆಯ ಆಶಯ.

ಬೌದ್ಧಿಕ ನೆಲೆಯ ಹೆಚ್ಚುಗಾರಿಕೆಯನ್ನು ಅನಸೂಯೆಯ ಪಾತ್ರಕ್ಕೆ ಅಳವಡಿಸುವ ಮೂಲಕ ಕವಿ ಮಹಾನ್ವೇಷಣಂ ಮಹಾಕಾವ್ಯಕ್ಕೆ ಹೊಸ ತಿರುವು ನೀಡಿದ್ದಾರೆ. ಋಷಿಸಮುದಾಯವನ್ನು ಕೇವಲ ಕುರಿತು ದಾರ್ಶನಿಕತೆಯ ನೆಲೆಯಲ್ಲಿ, ತತ್ತ್ವಪ್ರತಿಪಾದನೆಯ ನೆಲೆಯಲ್ಲಿ ಶಿಷ್ಟ ರಾಮಾಯಣಗಳು ನಿರೂಪಿಸಿವೆ. ಈ ಪೂರ್ವನಿರ್ಧರಿತ ಪರಿಕಲ್ಪನೆಯನ್ನು ಒಡೆದು ಸಾಮಾನ್ಯ ಪಾತ್ರಗಳಲ್ಲಿ ಈ ಪ್ರತಿಭೆಯನ್ನು ಅಳವಡಿಸಿದ ಕಾವ್ಯ ಇದು. ಈ ಮಹಾಕಾವ್ಯದ ಕವಿ ಅನಸೂಯೆಯ ವಿಚಾರದಲ್ಲಿ ತೀವ್ರ ಕಾಳಜಿ ತಳೆದಿದ್ದಾರೆ. ಋಷಿಯಂತೆಯೇ ಋಷಿಪತ್ನಿಯೂ ಪ್ರಬುದ್ಧಳು, ವಿಚಾರವಾದಿ, ಬುದ್ಧಿಕೌಶಲ್ಯ ಉಳ್ಳವಳು, ತಪಸ್ವಿನಿ ಎಂಬುದನ್ನು ಕವಿ ನಿರೂಪಿಸಿದ್ದಾರೆ. ವಿದ್ಯೆ, ಬುದ್ಧಿ ಕೌಶಲ್ಯ, ಗುರಿ, ಸಾಧನೆಗಳು ಕೇವಲ ಪುರುಷಕುಲಕ್ಕೇ ಸೀಮಿತವಾದವು ಎಂಬ ಸಿದ್ಧಮಾದರಿಯ ಚೌಕಟ್ಟನ್ನು ಕವಿ ಒಡೆದಿದ್ದಾರೆ. ಸ್ತ್ರೀಯ ಸಾಧನೆಯ ಸಾಧ್ಯತೆಗಳಿಗೆ ಅನಸೂಯೆಯ ಪಾತ್ರವನ್ನು ನಿದರ್ಶನವಾಗಿಸಿದ್ದಾರೆ. ಪುರುಷನ ನೆಲೆಯಿಂದ, ರಾಜನ ನೆಲೆಯಿಂದ, ಒಬ್ಬ ಒಳ್ಳೆಯ ಕೇಳುಗ ರಾಮ ಸ್ವೀಕರಿಸುವ ಮೂಲಕ ಅನಸೂಯೆಯ ಬುದ್ಧಿಮತ್ತೆ, ಶಕ್ತಿಯನ್ನು ಕವಿ ಪುಷ್ಟೀಕರಿಸಿದ್ದಾರೆ.

ಶತಮಾನಗಳಿಂದ ಶೋಷಣೆಗೆ ಒಳಗಾದ ಮಹಿಳಾಸಮುದಾಯದ ಕುರಿತು ಕವಿಗೆ ಕಳಕಳಿ ಇದೆ. ಇಲ್ಲಿನ ಮಹಿಳಾ ಪಾತ್ರಗಳು ಸ್ಥಾಪಿತ ಮೌಲ್ಯಗಳೊಂದಿಗೆ ಹೋರಾಟ ಕೊಡುತ್ತಾ ಪರಿವರ್ತನೆಯನ್ನು ಅಪೇಕ್ಷಿಸುತ್ತವೆ. ಉತ್ತಮ ಬದುಕಿನ ಪರಿಕಲ್ಪನೆ ಇಲ್ಲಿನ

ಬಹುತೇಕ ಪಾತ್ರಗಳಿಗೆ ಇದೆ. ಹೀಗೆ ಸ್ಥಾಪಿತ ಮೌಲ್ಯಗಳನ್ನು ಒಡೆಯುತ್ತಾ ಹೊಸ ಹೊಸ ಚಿಂತನೆಯನ್ನು ಅಳವಡಿಸುವುದರೊಂದಿಗೆ ಮಹಾಕಾವ್ಯ ಮುಂದೆ ಸಾಗಿದೆ.

ವೇದಕಾಲದಲ್ಲಿ ಮಹಿಳಾ ಸ್ಥಾನಮಾನ ಉಚ್ಚ್ರಾಯ ಸ್ಥಿತಿಯಲ್ಲಿತ್ತು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಾಧನೆ ಮಾಡಿದ ಬಹುತೇಕ ಮಹಿಳೆಯರು ನಮಗೆ ಆ ಸಂದರ್ಭದಲ್ಲಿ ಕಾಣಸಿಗುತ್ತಾರೆ. ಯಜ್ಞಯಾಗಾದಿಗಳಲ್ಲಿ ಪಾಲ್ಗೊಂಡು ಮಹಿಳೆಯರನ್ನು ಸಮಸ್ತ ಸ್ತ್ರೀಕುಲದ ಮಹಾನ್‌ಸಾಧಿಕಿಯರು ಎನ್ನಲಾಗಿದೆ. ಆದರೆ ಇದೇ ಸಾಲಿಗೆ ಸೇರುವ ಮಹಾನ್ ಶಕ್ತಿಮಾತೆಯಾಗಿ, ಸುಜ್ಞಾನಮಯಿಯಾಗಿ, ಬುದ್ಧಿಜ್ಞಾನ ಉಳ್ಳವಳಾಗಿ ಮಹಾನ್ವೇಷಣಂ ಮಹಾಕಾವ್ಯದ ಕವಿ ಅನುಸೂಯೆಯ ಪಾತ್ರ ನಿರೂಪಿಸಿದ್ದಾರೆ. ರಾಮನಿಗೆ ಆಕೆ ಆಡುವ ಬುದ್ಧಿವಾದದ ಮಾತುಗಳು ಮಾರ್ಮಿಕವಾಗಿದೆ. ಲಿಂಗಭೇದ ಸಂಪೂರ್ಣ ನಾಶವಾಗಬೇಕು. ಮಾನವ ವಿಕಾಸ ಸಾಧ್ಯವಾಗಬೇಕು ಎಂಬುದು ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರ ಆಶಯ. ಎಲ್ಲೆಲ್ಲಿ ಯಾವ್ಯಾವ ಮಾದರಿಯಲ್ಲಿ ಯಾವ್ಯಾವ ಪಾತ್ರಮುಖೇನ ಲಿಂಗಭೇದ ನೀತಿಯನ್ನು ತಿರಸ್ಕರಿಸುವ ಉದಾತ್ತ ಧ್ಯೇಯೋದ್ದೇಶವನ್ನು ಬಿಂಬಿಸಲು ಸಾಧ್ಯವೋ ಅಲ್ಲೆಲ್ಲಾ ಕವಿ ತನ್ನ ಚಿಂತನೆಯನ್ನು ಬಿತ್ತರಿಸಿದ್ದಾರೆ.

### ೫.೩.೨ ಪ್ರಭಾವೈದ್ಯೆ

ಕವಿಯ ಅಂತರಂಗದ ಚಿಂತನೆಗೆ ಒಂದು ಹೊಸಸ್ಫೂರ್ತಿ ಮಹಾನ್ವೇಷಣಂ ಮಹಾಕಾವ್ಯದ ನೂತನ ಪಾತ್ರ ಪ್ರಭಾವೈದ್ಯೆಯದ್ದು. ಶತ ಶತಮಾನಗಳಿಂದ ದ್ವಿತೀಯ ದರ್ಜೆಯ ಪ್ರಜೆ ಎಂದೇ ನಿರ್ಲಕ್ಷಿತವಾದ ಮಹಿಳಾಸಮುದಾಯದ ಸಾಧನೆಗೆ ಕನ್ನಡಿ ಹಿಡಿದ ಪಾತ್ರ, ಪುರುಷಪರ ಚಿಂತನೆಗೆ ಸವಾಲಾಗಿ ಈ ಪಾತ್ರ ಒಡಮೂಡಿದೆ. ಪಾತ್ರಪರಿಕಲ್ಪನೆ ನೂತನವಾದರೂ ಅರ್ಥವಂತಿಕೆಯನ್ನು ಸ್ಫುರಿಸುತ್ತದೆ. ಅಗಸ್ತ್ಯಾಶ್ರಮದ ಯುವತಿ ಪ್ರಭಾವೈದ್ಯೆ ಸಕಲಶಾಸ್ತ್ರ ಪಾರಂಗತಳು. ಬುದ್ಧಿಚಾತುರ್ಯ ಉಳ್ಳವಳು. ಚಾಣಾಕ್ಷಮತಿ, ಕೌಶಲ್ಯ ಉಳ್ಳವಳು. ಮಾನವ– ವಾನರ, ಸ್ತ್ರೀ–ಪುರುಷ ಎಂಬ ಭೇದ ಇಲ್ಲದೆಯೆ ಸಕಲ ರೋಗ ರುಜಿನಗಳನ್ನು ನಿವಾರಿಸಬಲ್ಲವಳು. ಶುಶ್ರೂಷಾ ಆಕಾಂಕ್ಷೆ ಉಳ್ಳ ಪ್ರಭಾವೈದ್ಯೆ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತಿಗೆ ಕಳಶವಿಟ್ಟಂತೆ. ವಾನರಸಮುದಾಯವನ್ನು ಕಾಪಿಡುವ ಉದ್ದೇಶ ಪ್ರಭಾವೈದ್ಯೆಗೆ ಇದೆ. ರಾಮತ್ವದ ಶೋಧದಿಂದ ಸರ್ವ ಸಮರ್ಪಣಭಾವ ತಳೆದವಳು. ತನ್ನ ಶಕ್ತಿ, ಸಾಮರ್ಥ್ಯ, ಕೌಶಲ್ಯದ ಕುರಿತು ಅಹಂಭಾವ ತಾಳದವಳು. ತನ್ನ ಶಕ್ತಿ ಮತ್ತು ಕಾಯಕದಲ್ಲೇ ದೈವತ್ವದ ನೆಲೆ ಕಂಡವಳು. ಈ ಪಾತ್ರಕ್ಕೆ ಸಂಬಂಧಿಸಿದಂತೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಮುಖ್ಯವಾಗಿ ಮೂರು ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳಬೇಕಿದೆ.

೧. ಪ್ರಭಾವೈದ್ಯೆ ಎಂಬ ನೂತನ ಪಾತ್ರ ಸೃಷ್ಟಿಸುವ ಅನಿವಾರ್ಯತೆ ಕವಿಗಿತ್ತೇ?

೨. ಸೃಷ್ಟಿಸಿದರೂ ವೈದ್ಯೆಯ ಪಾತ್ರವಾಗಿ ಚಿತ್ರಿಸುವ ಹಿಂದಿನ ತುಡಿತ ಯಾವುದು?

೩. ರಾಮ ಪರಿವಾರದ ಬೆಂಬಲದ ಪಾತ್ರವಾಗಿ ಚಿತ್ರಿಸಲು ಕಾರಣವೇನು?

೧. ಕವಿಗೆ ಅಂತರಂಗದ ಚಿಂತನೆ, ಅಭಿಲಾಷೆ, ಉದ್ದೇಶ ಬಹುಮುಖ್ಯ. ಇಂಥ ಭಾವಗಳನ್ನು ಹೊಸ ಪಾತ್ರದ ಮೂಲಕ ಹೊಮ್ಮಿಸಬೇಕು ಎಂಬ ಆಶಯ ಕವಿಗಿತ್ತು. ಆದ್ದರಿಂದಲೇ ಕವಿ ಮಹಾನ್ವೇಷಣಂನಲ್ಲಿ ಪ್ರಭಾವೈದ್ಯೆ ಎಂಬ ವಿನೂತನ ಪಾತ್ರ ಸೃಷ್ಟಿಸಿದರು ಎನ್ನಬೇಕು. ಜೊತೆಯಲ್ಲಿ ವಿನೂತನ ಪರಿಕಲ್ಪನೆ, ಆಧುನಿಕ ಚಿಂತನೆ, ಅಪೇಕ್ಷಿತ ಮೌಲ್ಯಗಳನ್ನು ಪುಷ್ಟೀಕರಿಸುವ ಸಲುವಾಗಿ ಹೊಸ ಪಾತ್ರ ಸೃಷ್ಟಿಯಾಗಿಸಿದ್ದಾರೆ.

೨. ಅಲಕ್ಷ್ಯಕ್ಕೆ ಒಳಗಾದ ಮಹಿಳಾಸಮುದಾಯದ ತುಡಿತ ಕವಿಯಲ್ಲಿದೆ. ಈ ನಿರ್ಲಕ್ಷಿತ ಸಮುದಾಯದ ಅಂತರಂಗಸಂವೇದನೆಯ ಬಿಸಿ ಕವಿಯನ್ನು ತಟ್ಟಿದೆ. ಈ ಸಮಸ್ಯೆಗೆ ಸ್ಪಂದಿಸುವ ಮತ್ತು ಪರಿಹಾರ ಕಂಡು ಹುಡುಕುವ ಪ್ರಯತ್ನದಲ್ಲಿ ಕವಿ ಸಾಗಿದ್ದಾರೆ. ಸ್ತ್ರೀ-ಪುರುಷ ಸಮಾನತೆ ಸಾಧಿಸುವ ಉದ್ದೇಶ ಕವಿಯಲ್ಲಿ ಇತ್ತು. ಹಾಗಾಗಿ ಪ್ರಭೆಯನ್ನು ವೈದ್ಯಳನ್ನಾಗಿ ಚಿತ್ರಿಸುತ್ತಾ ಅವಳ ಸಾಧನೆಯನ್ನು ನಿರೂಪಿಸಿದ್ದಾರೆ. ಸಾಂಪ್ರದಾಯಿಕ ಚಿಂತನೆ ಸ್ತ್ರೀಯರ ಕುರಿತು ಅಸಡ್ಡೆ ತಾಳಿದೆ. ಹೆಣ್ಣು ದೈಹಿಕವಾಗಿ ದುರ್ಬಲಳು. ಆದುದರಿಂದ ಮಾನಸಿಕವಾಗಿಯೂ ಮತಿಹೀನಳು ಎಂಬಂತೆ ಚಿತ್ರಿಸಿದೆ. ಮಾತ್ರವಲ್ಲ ವಿಚಾರಶೂನ್ಯಳು, ಶಕ್ತಿಹೀನಳು ಎಂಬಂತೆ ಆರೋಪಿಸುತ್ತಾ ಚಾಕರಿಗೆ ಮೀಸಲಿರಿಸಿದೆ. ಇಂಥ ಪೂರ್ವಗ್ರಹಪೀಡಿತ ಕಲ್ಪನೆ ಮತ್ತು ಆರೋಪಗಳಿಗೆ ಹೆಣ್ಣನ್ನು ಬದ್ಧಳನ್ನಾಗಿಸಿದೆ. ಇಂಥ ತಪ್ಪುಕಲ್ಪನೆಯನ್ನು ಒಡೆಯುವ ಉದ್ದೇಶ ಕವಿಗಿತ್ತು. ಹಾಗಾಗಿ ಸ್ತ್ರೀಯ ಸಾಧನೆಯ ಸಾಧ್ಯತೆಗಳನ್ನು ಗುರುತಿಸಿ ಸ್ತ್ರೀಚೈತನ್ಯವನ್ನು ಜಗತ್ತಿಗೆ ಪರಿಚಯಿಸುವ ಉದ್ದೇಶದಿಂದ ಕವಿ ಪ್ರಭೆಯನ್ನು ವೈದ್ಯೆಯನ್ನಾಗಿ ಚಿತ್ರಿಸಿದ್ದಾರೆ.

೩. ಧರ್ಮ-ಅಧರ್ಮ, ಸತ್ಯ-ಅಸತ್ಯ, ಪ್ರಾಮಾಣಿಕತೆ-ಮೋಸ ಅನಾದಿಕಾಲದಿಂದಲೂ ಸಮಾಜದಲ್ಲಿ ಬೇರೂರಿದೆ. ಈ ದ್ವಂದ್ವಗಳ ನಡುವಣ ಸೆಣಸಾಟ ಪೂರ್ವದಿಂದಲೂ ನಡೆಯುತ್ತಾ ಬಂದಿದೆ. ಈ ಸೆಣಸಾಟದಲ್ಲಿ ಧರ್ಮ, ಸತ್ಯ, ಪ್ರಾಮಾಣಿಕತೆಯ ಉಳಿವು ಬಹುಮುಖ್ಯ. ಇದಕ್ಕೆ ವ್ಯತಿರಿಕ್ತವಾಗಿ ಅಧರ್ಮ, ಅಸತ್ಯ ಮೋಸದ ಉಳಿವು ಆದಲ್ಲಿ ಸಮಾಜ ವಿನಾಶದ ಅಂಚಿಗೆ ಸಾಗುತ್ತದೆ. ಮಾನವೀಯತೆ, ಪ್ರಾಮಾಣಿಕತೆ, ಸತ್ಯನಿಷ್ಠೆಯನ್ನು ಪ್ರತಿಪಾದಿಸುವ ಬರಹಗಳು ಸಮಾಜ ಕೇಂದ್ರಿತವಾಗಿದ್ದು ಸಮಾಜಮುಖಿ ನೆಲೆಯಲ್ಲಿ ಸಂಚರಿಸುತ್ತವೆ. ಹಾಗಾಗಿ ಮಹಾನ್ವೇಷಣಂನ ಕವಿ ಪ್ರಭಾವೈದ್ಯೆಯನ್ನು ರಾಮತ್ವದ ಪರವಾಗಿಯೇ ನಿರೂಪಿಸಿದ್ದಾರೆ. ಪ್ರಭಾವೈದ್ಯೆಯ ವ್ಯಕ್ತಿತ್ವದ ನಿರೂಪಣೆ ಸಮಾಜಕ್ಕೆ ಕೊಡುಗೆಯಾಗಿದೆ.

ಮಹಾನ್ವೇಷಣಂನ ಪ್ರಭಾವೈದ್ಯೆ ರಾಮತ್ವದ ಶೋಧದಲ್ಲಿ ಸಾಗುತ್ತಾ ರಾಮನ ಸಂಗಡಿಗರಾದ ಹನುಮ ಮತ್ತು ಅವನ ಬಳಗಕ್ಕೆ ಬೆಂಬಲ ನೀಡಿದವಳು. ಹೀಗೆ ಸತ್ಯಶೋಧ ತತ್ತ್ವವನ್ನು ಪ್ರಧಾನ ಧ್ಯೇಯವಾಗಿರಿಸಿಕೊಂಡಿದ್ದಾಳೆ. ಈ ತತ್ತ್ವಗಳನ್ನು ಸಮಾಜದಲ್ಲಿ ಬಿತ್ತಿ ಶಾಶ್ವತವಾಗಿ ಗಟ್ಟಿಗೊಳಿಸುವ ಉದ್ದೇಶದಿಂದ ಕವಿ ಪ್ರಭಾವೈದ್ಯೆಯ ಪಾತ್ರವನ್ನು ನಿರೂಪಿಸಿದ್ದಾರೆ. ಈ ಬಗೆಯ ಪಾತ್ರ ನಿರೂಪಣೆಯಿಂದ ಕವಿಯ ಅಂತರಂಗಶಕ್ತಿ, ಮಾನಸಿಕನೆಲೆ, ಚಿಂತನೆ, ವಿಚಾರಶೀಲತೆ ವ್ಯಕ್ತವಾಗುತ್ತದೆ. ಪ್ರಭಾವೈದ್ಯೆಯ ಪಾತ್ರ ನಿರೂಪಣೆಯ ಹಿಂದೆ ಸತ್ಯವಂತಿಕೆ, ಸತ್ಸಂಗ, ಸದ್ಧರ್ಮಗಳನ್ನು ಪ್ರತಿಷ್ಠಾಪಿಸುವ ಸದುದ್ದೇಶ ಕವಿಗೆ ಇತ್ತು ಎಂಬುದು ಸ್ಪಷ್ಟ. ಸಮಾಜದಲ್ಲಿ ಚಿರಸ್ಥಾಯಿಯಾಗಿ ನೆಲೆನಿಲ್ಲಬೇಕಾದ ಅಂಶಗಳ, ಮೌಲ್ಯಗಳ ಕುರಿತು ಕವಿ ಮಾತಾಡಿದ್ದಾರೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಪ್ರಭಾವೈದ್ಯೆಯ ಪಾತ್ರ ಇಲ್ಲ. ಕನ್ನಡದ ಇತರೆ ಆಧುನಿಕ ರಾಮಾಯಣಗಳಲ್ಲೂ ಇಲ್ಲ. ಇದು ಕವಿಯ ಹೊಸ ಪರಿಕಲ್ಪನೆ. ಈ ಪರಿಕಲ್ಪನೆಯ ಹಿಂದೆ ಕವಿಯ ಕರ್ತೃತ್ವಶಕ್ತಿ ಕೆಲಸ ಮಾಡಿದೆ. ಕವಿಯ ಶೋಧನಾತ್ಮಕ ಚಿಂತನೆ ಸಮಾಜಕ್ಕೆ ಕೊಡುಗೆಯಾಗಿದೆ.

ಪ್ರಭಾವೈದ್ಯೆಯ ಸ್ವರೂಪ, ಲಕ್ಷಣ, ವೃತ್ತಿ ನಿರ್ಮಿತಿಯ ಹಿಂದೆ ಕವಿಯ ಸ್ವತಂತ್ರ ಮನೋಧರ್ಮ ಮತ್ತು ಸ್ವಂತಿಕೆ ಕೆಲಸ ಮಾಡಿದೆ. ಶುಶ್ರೂಷಾ ಮನೋಭಾವದ ಹಿಂದೆ ಯಾವ ಅನುಕರಣ ಸಿದ್ಧಾಂತವೂ ಇಲ್ಲ. ಸೇವಾಭಾವದ ನೆಲೆಯಲ್ಲಿ ಯಾರ ಒತ್ತಡವೂ ಇಲ್ಲ. ಸ್ವತಂತ್ರ ನೆಲೆಯ ಮನೋಭೂಮಿಕೆಯಿಂದ ಕವಿ ಉದಾತ್ತ ಪರಿಕಲ್ಪನೆ ತಾಳಿದ್ದಾರೆ. ಸಮಾಜ ಸೇವೆಯನ್ನು ಪ್ರಧಾನ ಧ್ಯೇಯವಾಗಿರಿಸಿ ಸಮಾಜಪರ, ಶೋಷಿತಪರ, ವಾನರಪರ, ಮಾನತ್ವದಪರ ದನಿ ಎತ್ತಿದ್ದಾರೆ. ಈ ನೆಲೆಯಿಂದ ಮಹಾನ್ವೇಷಣಂ ಮಹಾಕಾವ್ಯದ ಪ್ರಭಾವೈದ್ಯೆಯ ಪಾತ್ರ ಸ್ವತಂತ್ರ ಮಾದರಿಯಲ್ಲಿ ನಿರೂಪಿತವಾಗಿದೆ.

ಆಯುರ್ವೇದ ಔಷದಿಯಿಂದ ಎಲ್ಲರನ್ನು ಉಪಚರಿಸಿ ಕಾಯಿಲೆ ಗುಣಪಡಿಸುವ ಉದಾತ್ತ ಉದ್ದೇಶ ಪ್ರಭಾವೈದ್ಯೆಯದ್ದು. ಸಹಕಾರಭಾವ, ಸೇವಾತತ್ತ್ವದ ಪ್ರತಿಪಾದನೆ ಇಲ್ಲಿದೆ. 'ವೈದ್ಯೋ ನಾರಯಣೋ ಹರಿ:' ಎಂಬ ಮಾತಿಗೆ ಅನುಗುಣವಾಗಿ ನಡೆದವಳು ಪ್ರಭಾವೈದ್ಯೆ. ವೈದ್ಯಧರ್ಮದಲ್ಲಿ ಪಕ್ಷಪಾತ ತೋರದೆ ನ್ಯಾಯ ನೀತಿಗೆ ಬದ್ಧವಾಗಿ ಸೇವಾ ಮನೋಭಾವದಿಂದ ನಡೆದಿದ್ದಾಳೆ. ವಾನರ ಪ್ರಮುಖರ ಹತ್ತು ಹಲವಾರು ಪ್ರಶ್ನೆಗಳಿಗೆ ತನ್ನ ನೆಲೆಯಿಂದ ಸಮರ್ಪಕ ಉತ್ತರ ನೀಡಿ ಉಪಚರಿಸಿದವಳು. ಮಹಾಕಾವ್ಯದ ವಾನರ ಪ್ರಮುಖರು ಮುಚ್ಚಂಡಿ, ದುರ್ಭರ, ಜಂಬಗಿ ಪಸಾನರರು. ಈ ವಾನರ ವೀರರು ಪ್ರಭಾವೈದ್ಯೆಯಿಂದ ಸೂಕ್ತ ಸಲಹೆ, ಮಾರ್ಗದರ್ಶನ ಪಡೆದಿದ್ದಾರೆ. ವಾನರ ಕುಲ, ಬದುಕಿನ ಕುರಿತು ಪ್ರಭಾವೈದ್ಯೆಗೆ ಎಳ್ಳಷ್ಟೂ ಅಸಹನೆ ಇಲ್ಲ. ಅಸಹ್ಯ ಭಾವವೂ ಇಲ್ಲ. ಪ್ರೀತಿಪೂರ್ವಕವಾಗಿ ಅನುಕಂಪದಿಂದ

ಒಡಗೂಡಿ ವಾನರ ಪರಿವಾರವನ್ನು ಉಪಚರಿಸಿದ್ದಾಳೆ. ಸೇವಾಕಾಂಕ್ಷೆ ಉಳ್ಳ ಮಾದರಿ ಪಾತ್ರವಾಗಿ ಪ್ರಭಾವೈದ್ಯೆ ಇಲ್ಲಿ ಮೂಡಿ ಬಂದಿದ್ದಾಳೆ.

ಮಾನವಸಹಜ ಕಾಯಿಲೆಗಳು ವಾನರನ್ನು ಕಾಡದಿರದು. ಮಾನವರಂತೆ ವಾನರರಿಗೂ ಆರೋಗ್ಯ, ಔಷಧೋಪಚಾರ, ವಿರಾಮ, ಉತ್ತಮ ವಾತಾವರಣದ ಅಗತ್ಯತೆ ಇದೆ. ಇಂಥ ಉತ್ತಮ ವಾತಾವರಣವನ್ನು ನಿರ್ಮಿಸುವ ಮೂಲಕ ವಾನರ ಕುಲವನ್ನು ಬೆಂಬಲಿಸಿದವಳು ಪ್ರಭಾವೈದ್ಯೆ. ಆಕೆ ಮಾನವ ಅಪೇಕ್ಷಿತ ಸ್ನೇಹ ಮತ್ತು ಆರೈಕೆಯನ್ನು ವಾನರರಿಗೂ ನೀಡಿದ್ದಾಳೆ. ಕವಿಯ ಅಂತರಂಗದ ಶುಶ್ರೂಷಾಕಾಂಕ್ಷೆ ಪ್ರಭಾವೈದ್ಯೆಯ ಪಾತ್ರದಿಂದ ಅಭಿವ್ಯಕ್ತಗೊಂಡಿದೆ.

**೫.೩.೩ ಊರ್ಮಿಳೆ**

ಬಹುತೇಕ ಕನ್ನಡ ರಾಮಾಯಣಗಳಲ್ಲಿ ಸೀತೆಯ ಪಾತ್ರ ಕೇಂದ್ರದಲ್ಲಿದೆ. ಊರ್ಮಿಳೆಯನ್ನು ಅಂಚಿಗೆ ತಳ್ಳಲಾಗಿದೆ. ಇಂಥ ರಾಮಾಯಣಗಳಿಗೆ ಸೀತೆಯ ವನವಾಸದ ಬದುಕೇ ಪ್ರಧಾನ. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಊರ್ಮಿಳೆಯ ಬದುಕನ್ನು ಕೇಂದ್ರಕ್ಕೆ ತಂದಿದೆ. ಆಕೆಯ ಏಕಾಗ್ರತನದ ತಪಸ್ಸು ಇಲ್ಲಿ ಪ್ರಧಾನವಾಗಿದೆ. ಅವಳ ತಪಸ್‌ಶಕ್ತಿಯನ್ನು ಮನದ ಹಾರೈಕೆಯನ್ನು ಕವಿ ಪ್ರಧಾನವಾಹಿನಿಗೆ ತಂದು ನಿರೂಪಿಸಿದ್ದಾರೆ. ಸೀತೆ ಮತ್ತು ಊರ್ಮಿಳೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿ ತಾರತಮ್ಯ ತಳೆದಿಲ್ಲ. ಸೀತೆಯ ವನವಾಸದ ಬದುಕನ್ನು ನಿರೂಪಿಸಿದ ಕವಿ ಊರ್ಮಿಳೆಯ ತಪಸ್‌ಶಕ್ತಿಯನ್ನೂ ಪ್ರಧಾನಭೂಮಿಕೆಗೆ ತಂದು ನಿರೂಪಿಸಿದ್ದಾರೆ.

ಊರ್ಮಿಳೆಯನ್ನು ದೈನ್ಯತೆಯ ನೆಲೆಯಿಂದಾಗಲಿ, ಅನುಕಂಪದ ನೆಲೆಯಿಂದಾಗಲಿ ನಿರೂಪಿಸುವ ಉದ್ದೇಶ ಕವಿಗೆ ಇಲ್ಲ. ಸ್ವತಂತ್ರ ಚಿಂತನೆ, ಬುದ್ಧಿಶಕ್ತಿ ಮತ್ತು ಇಚ್ಛಾಶಕ್ತಿಯಿಂದ ತೀರ್ಮಾನ ಕೈಗೊಂಡ ಊರ್ಮಿಳೆ ಇಲ್ಲಿ ಕೇಂದ್ರಸ್ಥಾನದಲ್ಲಿ ಇದ್ದಾಳೆ. ರಾಮನೊಂದಿಗೆ ಸೀತೆ ವನವಾಸದ ಬದುಕನ್ನು ಅಪೇಕ್ಷಿಸುತ್ತಾಳೆ. ಇದಕ್ಕೆ ಪೂರಕವಾಗಿ ರಾಮ ಸೀತೆಯನ್ನು ತನ್ನೊಂದಿಗೆ ಕರೆದೊಯ್ಯುತ್ತಾನೆ. ಈ ಅವಕಾಶವಾಗಲಿ, ಪ್ರಸಂಗವಾಗಲಿ ಊರ್ಮಿಳೆಗೆ ಎದುರಾಗಲಿಲ್ಲ. ಸೀತೆಗೆ ದೊರೆತ ಅವಕಾಶ ತನಗೆ ದೊರಕಲಿಲ್ಲ ಎಂಬ ಕಾರಣಕ್ಕೆ ಸೀತೆಯ ಕುರಿತು ಅಸಹನೆಯಾಗಲಿ, ಮತ್ಸರವಾಗಲಿ ಆಕೆಯಿಂದ ಅಭಿವ್ಯಕ್ತಗೊಂಡಿಲ್ಲ. ವಿಶಾಲ ದೃಷ್ಟಿಕೋನದ ನೆಲೆಯಿಂದ ಚಿಂತನೆ ನಡೆಸುವ ಮತ್ತು ಸ್ವತಂತ್ರ ಚಿಂತನೆಯ ನೆಲೆಯಿಂದ ಬದುಕಲ್ಲಿ ಎದುರಾದ ಸಂದರ್ಭ, ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವ ಮಾದರಿಯಲ್ಲಿ ಊರ್ಮಿಳೆಯ ಪಾತ್ರ ನಿರೂಪಿತವಾಗಿದೆ. ಹದಿನಾಲ್ಕು ವರ್ಷಗಳ ಸುದೀರ್ಘ ತಪಸ್ಸು

ಆಕೆಯ ಮನೋಸ್ಥೈರ್ಯವನ್ನು ಹೇಳುತ್ತದೆ. ಊರ್ಮಿಳೆಯ ವ್ಯಕ್ತಿತ್ವದಲ್ಲಿ ದೊಡ್ಡತನವಿದೆ. ದ್ವೇಷ, ಆಕ್ರೋಶ, ಮಾತ್ಸರ್ಯಾದಿಗಳನ್ನು ಮೀರಿ ನಿಂತ ವ್ಯಕ್ತಿತ್ವವಾಗಿ ಆಕೆ ಕಾಣಿಸಿದ್ದಾಳೆ. ತನ್ನ ಸ್ಥಿತಿಯ ಕುರಿತು, ಏಕಾಂಗಿತನದ ಬದುಕಿನ ಕುರಿತು ಆಕೆಗೆ ಯಾರ ಮೇಲೂ ಆಕ್ರೋಶ ಇಲ್ಲ. ಕೈಕೆ, ಮಂಥರೆ, ಭರತ, ಲಕ್ಷ್ಮಣನ ಮೇಲೆ ಆಕೆ ಒಮ್ಮೆಯೂ ತನ್ನ ಅಸಹನೆಯನ್ನು, ಕೋಪವನ್ನು ವ್ಯಕ್ತಪಡಿಸಿಲ್ಲ. ಸಾಮಾನ್ಯ ಹೆಣ್ಣು ಪ್ರತಿಕ್ರಿಯಿಸುವುದಕ್ಕಿಂತ ಭಿನ್ನವಾಗಿ ಮೇರು ವ್ಯಕ್ತಿತ್ವದ ನೆಲೆಯಲ್ಲಿ ಪ್ರತಿಕ್ರಿಯಿಸಿರುವುದು ಊರ್ಮಿಳೆಯ ವಿಶಿಷ್ಟತೆ. ಈ ಪ್ರತಿಕ್ರಿಯೆಯ ಹಿಂದೆ ಆಕೆಯ ಹೃದಯಶ್ರೀಮಂತಿಕೆ ವ್ಯಕ್ತವಾಗುತ್ತದೆ. ಬೌದ್ಧಿಕ ಪರಿಣತಿ ಪಡೆದ ಅಸಾಮಾನ್ಯ ವ್ಯಕ್ತಿತ್ವವಾಗಿ ಇಲ್ಲಿ ಊರ್ಮಿಳೆ ಕಾಣಿಸಿದ್ದಾಳೆ.

ತನ್ನ ತಪಸ್ಸಿನ ಕುರಿತು ಹೆಮ್ಮೆಯಾಗಲಿ, ಅಹಂಭಾವವಾಗಲಿ ಊರ್ಮಿಳೆಯಲ್ಲಿ ಇಲ್ಲ. ಅಂತೆಯೇ ತನ್ನ ಸ್ಥಿತಿಯ ಕುರಿತು ಖೇದವಾಗಲಿ, ಅಸಹನೆಯಾಗಲಿ ಇಲ್ಲ. ಯಾರನ್ನೂ ತನ್ನ ಎದುರಾಳಿಗಳೆಂದು ಆಕೆ ಭಾವಿಸುವುದಿಲ್ಲ. ಇದು ಆಕೆಯ ಗುಣ ವೈಶಿಷ್ಟ್ಯ. ಹೀಗೆ ಪ್ರೌಢಚಿಂತಕಿಯಾಗಿ, ವಿಶಾಲದೃಷ್ಟಿಕೋನ ಉಳ್ಳವಳಾಗಿ, ಮಹಾನ್ ತೇಜಸ್ವಿನಿಯಾಗಿ ಊರ್ಮಿಳೆ ಕಾಣಿಸಿದ್ದಾಳೆ.

"ಏನ ಪೇಳಲಿ ಸ್ವಾಮಿ
ಯುಗಯುಗದ ಕತ್ತಲೆಯ ಹರಿಸುತ್ತ ನೀ ಬಾರಾ
ಪರಮಾನಂದಪೂರ್ಣ ಹೊಸಬೆಳಕ ನೀ ತಾರಾ
ಶರ್ವರಿಯ ಶಾಂತತೆಯ ಹಬ್ಬಿಸುತ ನೀ ಬಾರಾ",

(ಮೊಯಿಲಿ: ೨೦೦೫ : ೧೫೮)

ಧ್ಯಾನದಿಂದ ಎಚ್ಚೆತ್ತ ಊರ್ಮಿಳೆ ತನ್ನ ಕೆಳದಿಯ ಜೊತೆ ಮನದಾಳದ ಭಾವವನೆಲ್ಲ ಹಂಚಿಕೊಳ್ಳುತ್ತಾನೆ. ಲಕ್ಷ್ಮಣನ ಆಗಮನವನ್ನು ಅಪೇಕ್ಷಿಸುವ ಆಕೆಯ ಮಾತುಗಳಲ್ಲಿ ಹಾರೈಕೆ ಇದೆ. ಯುಗದ ಕತ್ತಲೆಯನ್ನು ಹೊಡೆದೋಡಿಸುವ ಶಕ್ತಿ ಲಕ್ಷ್ಮಣನಾಗಬೇಕು ಎಂಬುದು ಆಕೆಯ ಆಶಯ. ಲಕ್ಷ್ಮಣ ತನ್ನನ್ನು ಕರೆದೊಯ್ಯಲಿಲ್ಲ ಎಂಬ ಕೋಪವಾಗಲಿ, ನಿರಾಸೆಯಾಗಲಿ ಇಲ್ಲಿ ಆಕೆಗೆ ಇಲ್ಲ. ಅವನ ಬರುವಿಕೆಯ ಅಪೇಕ್ಷೆಯಲ್ಲಿ ಆಕೆ ಇದ್ದಾಳೆ. ಈ ಅಪೇಕ್ಷೆ ಅಸಾಮಾನ್ಯ ನೆಲೆಯಲ್ಲಿ ಇದೆ. ಊರ್ಮಿಳೆ ಲಕ್ಷ್ಮಣನನ್ನು ಬರಮಾಡಿಕೊಳ್ಳುವಲ್ಲಿ ಒಬ್ಬ ಸಾಧಕನನ್ನು ಬರಮಾಡಿಕೊಂಡಂತೆ ಕಾಣಿಸುತ್ತದೆ. ತನ್ನ ಪತಿಯ ಉದೇಶ, ಸಾಧನೆ, ಭ್ರಾತೃಪ್ರೇಮವನ್ನು ಅರ್ಥೈಸಿಕೊಂಡು ಆತನನ್ನು ಮಹಾನ್ ಸಾಧಕನನನಾಗಿ ಸ್ವೀಕರಿಸುವಲ್ಲಿ ಊರ್ಮಿಳೆ ಆಸಕ್ತಳಾಗಿರುವುದು ಗಮನಾರ್ಹ ಸಂಗತಿ. ಹಾಗಾಗಿ ಇಲ್ಲಿ ಊರ್ಮಿಳೆಗೆ ತನ್ನ ತಪಸ್ಸಿಗಿಂತ ಲಕ್ಷ್ಮಣನ ಅರಣ್ಯವಾಸದ ಬದುಕೇ ಶ್ರೇಷ್ಠವಾಗಿಬಿಡುತ್ತದೆ. ತನ್ನ ತಪಸ್ಸಿಗಿಂತ ಲಕ್ಷ್ಮಣನ ಗುರಿ, ಉದ್ದೇಶ, ವ್ಯಕ್ತಿತ್ವವೇ ಶ್ರೇಷ್ಠ ಎಂದು ಆಕೆ ಬಗೆಯುತ್ತಾಳೆ.

ಲಕ್ಷ್ಮಣ ಕಾಡಿಗೆ ಹೊರಟ ಅಂದಿನಿಂದ ಸ್ವಯಂ ತಪಸ್ವಿನಿಯಾದ ಊರ್ಮಿಳೆ ಮಹಾನ್ವೇಷಣಂ ಮಹಾಕಾವ್ಯದ ಸ್ವತಂತ್ರ ಮಾದರಿಯ ಪಾತ್ರಕ್ಕೊಂದು ನಿದರ್ಶನ. ಬಹುತೇಕ ರಾಮಾಯಣಗಳಲ್ಲಿ ಊರ್ಮಿಳೆಯ ಪ್ರಸ್ತಾಪ ಕಾಣಸಿಕ್ಕಿದ್ದು ತೀರಾ ವಿರಳ. ಮಹಾನ್ವೇಷಣಂ ಮಹಾಕಾವ್ಯದ ಕವಿ ಊರ್ಮಿಳೆಯ ಪಾತ್ರಕ್ಕೆ ವಿಶೇಷ ಸ್ಥಾನಮಾನ ಕಲ್ಪಿಸಿದ್ದಾರೆ. ಹದಿನಾಲ್ಕು ವರ್ಷಗಳ ಕಾಲ ಪತಿಯಿಂದ ದೂರ ಉಳಿದ ಊರ್ಮಿಳೆಯ ಏಕಾಗ್ರಚಿತ್ತವನ್ನು ಕಾವ್ಯದ ಮೂಲಕ ಪ್ರರಿಗ್ರಹಿಸಬೇಕಿದೆ. ಹದಿನಾಲ್ಕು ವರ್ಷಗಳ ವಿರಹವೇದನೆಯ ತುಡಿತ, ಸಂವೇದನಾಶೀಲತೆ ಊರ್ಮಿಳೆಯಿಂದ ಅಭಿವ್ಯಕ್ತವಾಗಿದೆ. ಮಹಾನ್ವೇಷಣಂನಲ್ಲಿ ಊರ್ಮಿಳೆ ಯುಗದತಪಸ್ವಿನಿಯಾಗಿ ಕಾಣಿಸಿಕೊಂಡಿದ್ದಾಳೆ. ಸರಯೂ ನದಿ ತೀರದ ಹದಿನಾಲ್ಕು ವರುಷಗಳ ತಪಸ್ಸಿನಲ್ಲಿ ಕಿಂಚಿತ್ತೂ ಲೋಪ ತೋರದೆ ಏಕ್ರಾಗಚಿತ್ತದಿಂದ ತಪಸ್ವಿನಿಯಾದವಳು ಊರ್ಮಿಳೆ. ಆಕೆಯ ಮನಸ್ಸು ಸಂಪೂರ್ಣ ಧ್ಯಾನಸ್ಥ ಸ್ಥಿತಿಯಲ್ಲಿದ್ದು ಲಕ್ಷ್ಮಣನ ಆತ್ಮದಲ್ಲಿ ಲೀನವಾಗಿತ್ತು. ಈ ವಿಲೀನತೆಯ ಹಿಂದೆ ಊರ್ಮಿಳೆಗೆ ಲಕ್ಷ್ಮಣನ ಮೇಲಿರುವ ಪ್ರೀತಿ ವ್ಯಕ್ತವಾಗುತ್ತದೆ. ತಾ ಕಂಡ ಪ್ರಕೃತಿಯ ಎಳೆಎಳೆಯಲ್ಲೂ ಪ್ರಿಯತಮನನ್ನೇ ಧ್ಯಾನಿಸಿದವಳು ಇಕೆ. ಊರ್ಮಿಳೆ ಲಕ್ಷ್ಮಣನನ್ನು ಸ್ಮರಿಸುತ್ತಾ ತಪಸ್ವಿನಿಯಾಗಿ ಬದುಕನ್ನು ಮುನ್ನಡೆಸಿದವಳು. ಹದಿನಾಲ್ಕು ವರುಷಗಳ ವನವಾಸದ ಬದುಕಿನ ಕಾಲ್ಪನಿಕ ಚಿತ್ರ ಕವಿಗೆ ಇಲ್ಲಿ ಇದೆ. 'ದೀಪ ಹಚ್ಚದಿರು ಪತಂಗ ಸಾಯುವುದು' ಎಂಬ ಆಶಯವನ್ನು ಊರ್ಮಿಳೆ ಗೆಳತಿಯಲ್ಲಿ ವ್ಯಕ್ತಪಡಿಸುತ್ತಾಳೆ. ಇಲ್ಲಿ ಹಿಂಸೆಯ ವಿರೋಧನೀತಿ ಇದೆ. ಪ್ರಿಯತಮನನ್ನೇ ಬೆಳಕೆಂದು ಬಗೆದ ಊರ್ಮಿಳೆ ಪ್ರಿಯತಮನಿಲ್ಲದ ಬದುಕಲ್ಲಿ ಬೆಳಕನ್ನು ಅಪೇಕ್ಷಿಸಲಾರಳು. ಧ್ಯಾನಸ್ಥ ಸ್ಥಿತಿಯಲ್ಲಿ ಲಕ್ಷ್ಮಣನನ್ನು ನೆನೆಯುತ್ತಾ ಕಾಲಕಳೆದ ಊರ್ಮಿಳೆಯ ತಪಸ್ಸಿನಲ್ಲಿ ಕಪಟವಿಲ್ಲ. ಭೋಗಲಾಲಸೆ ಇಲ್ಲ. ಸ್ವಾರ್ಥಪರತೆ ಇಲ್ಲ. ಊರ್ಮಿಳೆಯ ತಪಸ್ಸಿನ ಹಿಂದೆ ಮುಖ್ಯವಾಗಿ ಎರಡು ಉದ್ದೇಶಗಳನ್ನು ಪರಿಗ್ರಹಿಸಲು ಸಾಧ್ಯ.

೧. ರಾಮಲಕ್ಷ್ಮಣಸೀತೆಯರಿಗೆ ಶುಭ ಹಾರೈಕೆ

೨. ಅರಮನೆಯ ಸುಖದಿಂದ ದೂರ ಉಳಿಯುವಿಕೆ

ಲಕ್ಷ್ಮಣ ರಾಮನನ್ನು ಅನುಸರಿಸಿ ವನವಾಸ ಬಯಸಿದ. ಊರ್ಮಿಳೆ ಲಕ್ಷ್ಮಣನಿಗೆ ಪೂರಕವಾಗಿ ಸ್ವಯಂ ತಪಸ್ವಿನಿಯಾದಳು. ರಾಜವೈಭೋಗದಿಂದ ದೂರ ಉಳಿದು ಬದುಕಿನ ಸಾರ್ಥಕತೆಯನ್ನು ಕಂಡಳು. ಈ ತಪಸ್ಸು ಊರ್ಮಿಳೆಯ ಶ್ರೇಷ್ಠತೆಗೆ ಇಟ್ಟ ಕಳಶದಂತಿದೆ. ಈ ಸಂದರ್ಭದ ವಿವಿಧ ಭಾವನೆ, ಕಾಮನೆ, ವಿರಹವೇದನೆಯನ್ನು ಹತ್ತಿಕ್ಕುವಲ್ಲಿ ಊರ್ಮಿಳೆ ಯಶಸ್ವಿಯಾಗಿದ್ದಾಳೆ. ಊರ್ಮಿಳೆಯಲ್ಲಿ ಸ್ವತಂತ್ರ ಚಿಂತನೆ ಇದೆ. ಸ್ವಂತಿಕೆಯ ಅಭಿವ್ಯಕ್ತಿ ಇದೆ. ಇಂಥ ಚಿಂತನಶೀಲ ಪ್ರವೃತ್ತಿ ವೈಯಕ್ತಿಕ ನೆಲೆಯಲ್ಲಿ ಅಭಿವ್ಯಕ್ತಗೊಂಡಿದ್ದು ಊರ್ಮಿಳೆಯ ಸ್ವತಂತ್ರ ನಿರ್ಧಾರಕ್ಕೆ ಸಾಕ್ಷಿಯಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಊರ್ಮಿಳೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಆಕೆಯ ಸಹಜ ವ್ಯಕ್ತಿತ್ವವನ್ನು ಅನಾವರಣ ಮಾಡಿದ್ದಾರೆ. ಸರಯೂ ನದಿ ತೀರದಲ್ಲಿ ಪತಿಯ ಧ್ಯಾನ ಮಾಡುತ್ತಾ ದಿನ ಕಳೆದ ಊರ್ಮಿಳೆಯ ಕುರಿತು ಕವಿಗೆ ಅನುಕಂಪವಿದೆ. ಆಕೆಯ ಏಕಾಂಗಿತನದ ಬದುಕಿನ ಕುರಿತು ಕವಿಗೆ ಖೇದವಿದೆ. ಆದರೂ ಆಕೆಯ ತಪಸ್ಸನ್ನು, ಅಂತರಂಗದ ಚೇತನಶಕ್ತಿಯನ್ನು ವಿಶೇಷವಾಗಿ ಪರಿಗಣಿಸಿದ್ದಾರೆ. ಬದುಕಲ್ಲಿ ಎದುರಾದ ಏರುಪೇರನ್ನು ಸಹಜವೆಂಬಂತೆ ಸ್ವೀಕರಿಸಲು ಪ್ರಯತ್ನಿಸುವ ಊರ್ಮಿಳೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ತಣ್ಣಗೆ ಹರಿಯವ ನದಿಯಂತೆ ಕಂಗೊಳಿಸಿದ್ದಾಳೆ.

ಲಕ್ಷ್ಮಣನ ವನವಾಸದ ಕುರಿತು ಊರ್ಮಿಳೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಯಾವುದೇ ಆಕ್ಷೇಪ ಎತ್ತಿಲ್ಲ. ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿಲ್ಲ. ಸ್ವಯಂ ಇಚ್ಛೆಯಿಂದ ತಪಸ್ವಿನಿಯಾದವಳು. ಹೀಗೆ ಸ್ವತಂತ್ರ ಮಾದರಿಯ ನೆಲೆಯಿಂದ ಊರ್ಮಿಳೆಯ ಪಾತ್ರ ನಿರೂಪಿಸಿದ ಮಹಾನ್ವೇಷಣಂ ಮಹಾಕಾವ್ಯದ ಕವಿ ಸ್ವಾಭಿಮಾನದ ನೆಲೆಯಿಂದಲೇ ಮಹಾನ್ವೇಷಣಂ ಮಹಾಕಾವ್ಯದ ಊರ್ಮಿಳೆಯ ಪಾತ್ರವನ್ನು ನಿರೂಪಿಸಿದ್ದಾರೆ.

**೫.೩.೪ ತಾರೆ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರೆಯ ಪಾತ್ರ ಬುದ್ಧಿಶಕ್ತಿಯ ತೀವ್ರತೆಯನ್ನು ಪ್ರತಿನಿಧಿಸುತ್ತದೆ. ಸಂಯಮಶೀಲೆಯಾಗಿ, ವಿಚಾರವಾದಿಯಾಗಿ ಪ್ರೌಢನೆಲೆಯಲ್ಲಿ ಬುದ್ಧಿಶಕ್ತಿ ಉಳ್ಳ ವ್ಯಕ್ತಿತ್ವವಾಗಿ ತಾರೆ ಕಾಣಿಸಿದ್ದಾಳೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರೆ ನೈತಿಕ ಸಿದ್ಧಾಂತಕ್ಕೆ ಬದ್ಧಳಾದವಳು. ಮಾನವೀಯತೆಯ ನೆಲೆಯಲ್ಲಿ ಬದುಕನ್ನು ಪರಿಗ್ರಹಿಸುವವಳು. ವಾಲಿಸುಗ್ರೀವರ ನಡುವಣ ಯುದ್ಧಭೀಕರತೆಯನ್ನು ತಪ್ಪಿಸಲು ಬಹು ವಿಧದ ಪ್ರಯತ್ನ ಮಾಡುತ್ತಾಳೆ. ಇಲ್ಲಿ ಕವಿ ತಾರೆಗೆ ವಾಕ್‌ಸ್ವಾತಂತ್ರ್ಯವನ್ನು ಒದಗಿಸಿದ್ದಾರೆ. ಪ್ರೌಢಮಟ್ಟದಲ್ಲಿ ಗಂಭೀರ ವ್ಯಕ್ತಿತ್ವವಾಗಿ ಇಲ್ಲಿ ತಾರೆ ಕಾಣಿಸಿದ್ದಾಳೆ. ಬಂಧುತ್ವವನ್ನು ಉಳಿಸಿಕೊಳ್ಳುವ ಆಶಯ ತಾರೆಯಲ್ಲಿ ಇದೆ. ತನ್ನ ಪತಿ ತಪ್ಪು ದಾರಿಯಲ್ಲಿ ನಡೆಯುವವನು ಎಂಬ ಪ್ರಜ್ಞೆಯುಳ್ಳ ತಾರೆ ಮುಂದೆ ಸಂಭವಿಸುವ ಅನಾಹುತದ ಕುರಿತು ವಾಲಿಯನ್ನು ಎಚ್ಚರಿಸುತ್ತಾಳೆ. ಆತ್ಮಗೌರವದ ಪ್ರಶ್ನೆ ಆಕೆಗೆ ಮುಖ್ಯವಾಗುತ್ತದೆ. ಸಂಬಂಧಗಳ ಉಳಿವಿಕೆಗಾಗಿ ಹೋರಾಟ ಕೊಡುತ್ತಾಳೆ. ವಾಲಿಯ ಅನುಪಸ್ಥಿತಿಯಲ್ಲಿ ಸುಗ್ರೀವನನ್ನು ರಾಜ್ಯಾಧಿಪತಿಯನ್ನಾಗಿ ಮಾಡುತ್ತಾಳೆ. ಹೀಗೆ ಮಾಡುವಲ್ಲಿ ತಾರೆಗೆ ಯಾವುದೇ ಸ್ವಾರ್ಥ ಇಲ್ಲ. ಪ್ರತಿಫಲ ಅಪೇಕ್ಷೆಯೂ ಇಲ್ಲ. ಹಾಗಾಗಿ ನಿರ್ಮಲ ವ್ಯಕ್ತಿತ್ವದ ಪಾತ್ರವಾಗಿ ತಾರೆ ಇಲ್ಲಿ ಮೂಡಿದ್ದಾಳೆ. ರಾಮನ ರಾಮತ್ವವನ್ನು ಅರಿತ ತಾರೆ ರಾಜನೀತಿಜ್ಞೆ, ಇವಳ ರಾಜನೀತಿ ತತ್ತ್ವದಲ್ಲಿ ಪಕ್ಷಪಾತ ಇಲ್ಲ. ಮಗ ಅಂಗಧ ಸಣ್ಣವನಾದ ಕಾರಣ ಸುಗ್ರೀವನಿಗೆ ರಾಜ್ಯಭಾರದ ಸೂತ್ರ ವಹಿಸುತ್ತಾಳೆ. ಇಲ್ಲಿ ದೇಶಪ್ರೇಮದೊಂದಿಗೆ ತಾರೆಯ ನಿಸ್ವಾರ್ಥತೆ ವ್ಯಕ್ತವಾಗುತ್ತದೆ.

ಪ್ರಭುತ್ವ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಯುದ್ಧಪರ ನೀತಿ, ದಿಗ್ವಿಜಯ, ರಾಜ್ಯವಿಸ್ತಾರದ ಹಂಬಲ ಪುರುಷಸಮುದಾಯಕ್ಕೆ ಇರುತ್ತದೆ. ಈ ಉದ್ದೇಶದ ಹಿಂದೆ ಪ್ರತಿಷ್ಠೆಯ ಹಂಬಲವೂ ಸೇರಿರುತ್ತದೆ. ಇದಕ್ಕೆ ಪೂರಕವಾಗಿ ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಯುದ್ಧಕ್ಕೆ ಅಧಿಕ ಮಹತ್ವ ನೀಡಲಾಗುತ್ತದೆ. ಆದರೆ ಅದೇ ಪ್ರಭುತ್ವ ವ್ಯವಸ್ಥೆಯಲ್ಲಿರುವ ಮಹಿಳಾಸಮುದಾಯಕ್ಕೆ ಶಾಂತಿಕಟ್ಟುವ ಉದ್ದೇಶವಿರುತ್ತದೆ. ಅವರ ಅಂತರಂಗ ಯುದ್ಧವಿರೋಧಿ ನೀತಿ ಎಡೆಗೆ ಸಂಚರಿಸುತ್ತದೆ. ಹಾಗಾಗಿ ನೆಮ್ಮದಿ ಕಾಪಿಡುವ ಮತ್ತು ಶಾಂತಿ ಸ್ಥಾಪಿಸುವ ಉದ್ದೇಶ ಈ ವ್ಯಾಪ್ತಿಗೆ ಒಳಪಡುವ ಮಹಿಳಾಸಮುದಾಯದ್ದಾಗಿರುತ್ತದೆ. ಹೀಗೆ ಶಾಂತಿ, ಸುವ್ಯವಸ್ಥೆಯೊಂದಿಗೆ ಸಂಸ್ಕೃತಿಯನ್ನು ಉಳಿಸುವ ಆಶಯ ಹೊತ್ತ ತಾರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕಾಣಿಸಿದ್ದಾಳೆ.

ರಾಮನ ಆದರ್ಶ ಮತ್ತು ಸೀತೆಯ ವ್ಯಕ್ತಿತ್ವದ ಕುರಿತು ಅಪಾರ ಗೌರವ ಇರಿಸಿಕೊಂಡವಳು ತಾರೆ. ಆದರೆ ಅಯೋಧ್ಯಾ ಸಂಸ್ಕೃತಿಯ ಕುರಿತು ಆಕೆಗೆ ವಿಶೇಷ ಗೌರವಾದರಗಳು ಇಲ್ಲ. ಕೆಲವು ವಿಚಾರದಲ್ಲಿ ಲಂಕಾಸಂಸ್ಕೃತಿಯೇ ಅಯೋಧ್ಯಾ ಸಂಸ್ಕೃತಿಗಿಂಗ ಮೇಲ್ಮಟ್ಟದಲ್ಲಿ ಇದೆ ಎಂಬುದನ್ನು ಆಕೆ ಅಭಿವ್ಯಕ್ತಿಸಿದ್ದಾಳೆ.

ಲಂಕಾಸಂಸ್ಕೃತಿಯ ಕುರಿತು ಆಕೆಗೆ ಅಪಾರವಾದ ಹೆಮ್ಮೆ ಇದೆ. ಈ ಕಾರಣದಿಂದಾಗಿಯೇ ಯುದ್ಧವನ್ನು ತಪ್ಪಿಸುವ ಉದ್ದೇಶವನ್ನು ಇರಿಸಿಕೊಂಡ ತಾರೆ ವಾಲಿಗೆ ನಾನಾ ತೆರನಾದ ಬುದ್ಧಿವಾದದ ಮಾತುಗಳನ್ನು ಆಡುತ್ತಾಳೆ. ಈ ಬುದ್ಧಿವಾದದ ಮಾತುಗಳು ಕೇವಲ ಉಪದೇಶದ ಮಾದರಿಯಲ್ಲಿ ಕಾಣಿಸಿಲ್ಲ. ಲಂಕಾಸಾಮ್ರಾಜ್ಯದ ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಸಾರುತ್ತದೆ. ಕವಿ ತಾರೆಯ ಮುಖೇನ ವಾಲಿಗೆ ಬುದ್ಧಿವಾದ ಹೇಳಿಸುವ ಕೆಲಸ ಮಾಡಿದ್ದಾರೆ. ಈ ಮಾತುಗಳು ಜೀವನ ಸಂದೇಶದ ಮಾದರಿಯಲ್ಲಿ ನಿರೂಪಿತವಾಗಿದೆ. ಲಂಕಾಸಂಸ್ಕೃತಿಯ ಅನನ್ಯತೆಯನ್ನು ಕವಿ ತಾರೆಯ ಮೂಲಕ ಅಭಿವ್ಯಕ್ತಿಸಲು ಕಾರಣವೇನು?

೧. ಲಂಕಾಸಾಮ್ರಾಜ್ಯದ ಸಾಂಸ್ಕೃತಿಕ ಬದುಕು ಉತ್ತಮವಾಗಿತ್ತು ಎಂಬುದನ್ನು ಹೇಳುವ ಪ್ರಯತ್ನ.

೨. ಲಂಕಾಸಂಸ್ಕೃತಿಯ ವಿಶಿಷ್ಟತೆಯನ್ನು ತಾರೆಯಂತಹ ಮಹಿಳಾ ಪಾತ್ರಗಳು ಅರಿಯುವ ಮಟ್ಟಕ್ಕೆ ಬೆಳೆದಿದ್ದವು ಎಂಬುದನ್ನು ಹೇಳುವ ಉದ್ದೇಶ.

೩. ರಾವಣ ದುಷ್ಟ, ಲಂಕೆ ದುಷ್ಟಸಾಮ್ರಾಜ್ಯ ಎಂಬ ಸಾಂಪ್ರದಾಯಿಕ ಚಿಂತನೆಯನ್ನು ಒಡೆಯುವ ಉದ್ದೇಶ.

ಹೀಗೆ ಕವಿಯ ನಿರೂಪಣೆಗೆ ಸಂಬಂಧಿಸಿದಂತೆ ಮೂರು ಬಗೆಯಲ್ಲಿ ಕಾರಣಗಳನ್ನು ಕಂಡುಕೊಳ್ಳಲು ಸಾಧ್ಯ.

ಲಂಕೆಯನ್ನು ಕಳೆದರೆ ಮತ್ತು ಕಟ್ಟಬಹುದು. ಆದರೆ ಒಮ್ಮೆ ನಾಶವಾದ ಸಂಸ್ಕೃತಿಯನ್ನು ಮತ್ತೆ ಕಟ್ಟಲು ಸಾಧ್ಯವಿಲ್ಲ ಎಂಬುದು ತಾರೆಯ ಅಭಿಮತ. ರಾಜರ ದಿಗ್ವಿಜಯವನ್ನು ಸಾರುವ ಸೀಮಿತ ಉದ್ದೇಶ ಯುದ್ಧಕ್ಕಿಲ್ಲ. ಇದರಿಂದ ಸಮಸ್ತ ಜೀವಸಂಕುಲ ನಾಶವಾಗುತ್ತದೆ. ಕಳೆದ ಜೀವವನ್ನು ಮತ್ತು ಬದುಕನ್ನು ಪುನಃ ಕಟ್ಟಲು ಸಾಧ್ಯವಿಲ್ಲ. ಹಾಗಾಗಿ ಇಂಥ ಯುದ್ಧಗಳೇ ಇಲ್ಲವಾಗಬೇಕು ಎಂಬುದು ಆಕೆಯ ಉದ್ದೇಶ. ಈ ಸೂಕ್ಷ್ಮವನ್ನು ಗ್ರಹಿಸುವ ಮಟ್ಟಕ್ಕೆ ಕವಿ ತಾರೆಯು ಪಾತ್ರವನ್ನು ಬೆಳೆಸಿದ್ದಾರೆ. ಲಂಕಾಸಾಮ್ರಾಜ್ಯ ಮತ್ತು ಅಯೋಧ್ಯಾಸಾಮ್ರಾಜ್ಯದ ನಡುವಣ ಯುದ್ಧ ನಡೆದಾಗ ನಾಶವಾಗುವುದು ಲಂಕಾಸಾಮ್ರಾಜ್ಯವೇ ಎಂಬ ವಾಸ್ತವದ ಅರಿವು ಆಕೆಗೆ ಇದೆ. ಭೌತಿಕವಾಗಿ ಪುನಃ ಲಂಕಾಸಾಮ್ರಾಜ್ಯವನ್ನು ಕಟ್ಟಬಹುದು. ಆದರೆ ಸಂಸ್ಕೃತಿಯನ್ನು ಕಟ್ಟಲು ಸಾಧ್ಯವಿಲ್ಲ ಎಂಬ ಚಿಂತೆ ಆಕೆಯನ್ನು ಕಾಡಿದೆ. ಅಯೋಧ್ಯಾ ಸಂಸ್ಕೃತಿಯನ್ನು ಮೀರಿದ ಎಷ್ಟೋ ವಿಶಿಷ್ಟತೆಗಳು ಲಂಕಾಸಂಸ್ಕೃತಿಯಲ್ಲಿ ಇವೆ ಎಂಬುದು ಅವಳ ಅಭಿಮತ. ಹಾಗಾಗಿ ದೇಶೀಯ ಸಂಸ್ಕೃತಿ ಉಳಿಯಬೇಕು ಎಂಬ ಪ್ರಜ್ಞೆ ಆಕೆಯಲ್ಲಿ ಇದೆ. ಸ್ತ್ರೀ ಸ್ವಾತಂತ್ರ್ಯ, ವ್ಯಕ್ತಿಮರ್ಯಾದೆ, ಸಮಾನತಾಭಾವ, ವಿಧವಾ ಪುನರ್ವಿವಾಹದಂತಹ ಅವಕಾಶಗಳು ಲಂಕಾಸಾಮ್ರಾಜ್ಯದಲ್ಲಿ ಇವೆ. ಹಾಗಾಗಿ ಈ ಸಾಮ್ರಾಜ್ಯ ನಾಶ ಹೊಂದಿದರೆ ಇಲ್ಲಿ ಅಸ್ತಿತ್ವದಲ್ಲಿರುವ ಒಳ್ಳೆಯತನಗಳು ನಾಶ ಹೊಂದುತ್ತವೆ ಎಂಬುದು ಆಕೆಯ ಚಿಂತನೆ. ಅಯೋಧ್ಯಾ ಸಾಮ್ರಾಜ್ಯದ ಗೆಲುವು ಅಲ್ಲಿನ ಸಂಸ್ಕೃತಿಯ ಗೆಲುವಾಗಿಯೂ ಕಾಣಿಸುತ್ತದೆ. ಪರಿಣಾಮ ಲಂಕೆಯಲ್ಲೂ ಅಯೋಧ್ಯಾ ಸಂಸ್ಕೃತಿ ಗಟ್ಟಿಯಾಗಿ ಬೇರೂರುತ್ತದೆ. ಇದರಿಂದಾಗಿ ಅಯೋಧ್ಯಾ ಸಂಸ್ಕೃತಿ ಮತ್ತು ನೀತಿಗೆ ಎಲ್ಲರೂ ಬದ್ಧರಾಗಬೇಕಾಗುತ್ತದೆ ಎಂಬುದು ಆಕೆಯ ಯೋಚನೆ. ಹಾಗಾಗಿ ಯುದ್ಧ ತಪ್ಪಿಸುವ ಸಲುವಾಗಿ ವಾಲಿಗೆ ನಾನಾ ತೆರನಾದ ಬುದ್ಧಿವಾದದ ಮಾತುಗಳಲ್ಲಿ ತಾರೆ ಆಡುತ್ತಾಳೆ.

ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ದೇಶೀಯ ಸಂಸ್ಕೃತಿ ನಾಶ ಹೊಂದುತ್ತಿದೆ ಎಂಬುದು ಕವಿಯ ಚಿಂತನೆ. ಈ ನೆಲೆಯಲ್ಲಿ ಸ್ವದೇಶಿ ಸಂಸ್ಕೃತಿ ಸಂಪೂರ್ಣ ನಿರ್ನಾಮವಾಗಬಹುದೆಂಬ ದುರಂತದ ಅರಿವು ಇಲ್ಲಿ ಕವಿಗೆ ಇದೆ. ಈ ಪ್ರಜ್ಞೆಯೊಂದಿಗೆ ಮುಂದೆ ಉಂಟಾಗುವ ಅನಾಹುತವನ್ನು ತಪ್ಪಿಸುವ ಉದ್ದೇಶವೂ ಸೇರಿದೆ. ಹಾಗಾಗಿ ತನ್ನ ಸ್ವದೇಶಾಭಿಮಾನ ಮತ್ತು ದೇಶೀಯ ಚಿಂತನೆಗಳನ್ನು ತಾರೆಯ ಪಾತ್ರದ ಮೂಲಕ ಅಭಿವ್ಯಕ್ತಿಸಿದ್ದಾರೆ. ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಸ್ಥಳೀಯ, ದೇಶೀಯ ಸಂಸ್ಕೃತಿ

ನಾಶವಾಗಬಾರದು ಎಂಬ ಆಶಯವನ್ನು ಕವಿ ಇಲ್ಲಿ ವ್ಯಕ್ತಪಡಿಸಿದ್ದಾರೆ. ಸ್ಥಳೀಯ ಶಕ್ತಿ, ಚೈತನ್ಯದ ಉಳಿವಿಕೆಯ ಆಶಯ ಇಲ್ಲಿ ಅಭಿವ್ಯಕ್ತಗೊಂಡಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ತಾರೆ ಸುಗ್ರೀವರ ನಡುವಣ ಸಂಬಂಧ ಕಲ್ಪಿಸುವಲ್ಲಿ ನೈತಿಕತೆಯನ್ನು ಉಳಿಸಿಕೊಂಡಿದ್ದಾರೆ. ಸುಗ್ರೀವನಿಗೂ ತನಗೂ ಯಾವುದೇ ತೆರನಾದ ಅನ್ಯತ್ರ ಸಂಬಂಧ ಇಲ್ಲ ಎಂಬುದನ್ನು ತಾರೆಯ ಮುಖೇನ ವಾಲಿಗೆ ಹೇಳಿಸಲಾಗಿದೆ. ವಾಲಿಯ ಕ್ರೌರ್ಯಮನಸ್ಥಿತಿಯನ್ನು ಅರಿತ ತಾರೆ ಅವನ ಪರಾಕ್ರಮದ ಕುರಿತು ಹೆಮ್ಮೆಪಡುತ್ತಾಳೆ. ಇಲ್ಲಿ ವ್ಯಕ್ತಿನಿಷ್ಠ ನೆಲೆಯಿಂದ ತಾರೆ ವಾಲಿಯನ್ನು ವಿರೋಧಿಸಿಲ್ಲ. ವಸ್ತುನಿಷ್ಠತೆಯ ನೆಲೆಯಿಂದ ವಾಲಿಯ ಕ್ರೌರ್ಯದ ಕುರಿತು ಅಸಹನೆ ವ್ಯಕ್ತಪಡಿಸಿದ್ದಾಳೆ. ವಾಲಿವಧೆಯಿಂದ ನೊಂದ ತಾರೆ ರಾಮನನ್ನು ಪ್ರತಿಭಟಿಸುತ್ತಾಳೆ. ಈ ಪ್ರತಿಭಟನೆಯ ಹಿಂದೆ ಸಹಜ ಸ್ತ್ರೀಯೊಬ್ಬಳ ನೈಜ ಬದುಕಿನ ಅನಾವರಣವಿದೆ. ರಾಮನ ಕುರಿತು ಒಲವು ಹೊಂದಿರುವ ತಾರೆ ಸ್ಥಿತಪ್ರಜ್ಞೆ, ಇಲ್ಲಿ ವ್ಯವಸ್ಥೆಯ ವಿರುದ್ಧ ಆಕೆ ಹೋರಾಟ ನಡೆಸುವುದಿಲ್ಲ. ರಾಜಪರಂಪರೆಯ ಕುರಿತು ತಾರೆಗೆ ತನ್ನದೇ ಆದ ನಿಲುವಿದೆ. ಚಿಂತನೆ ಇದೆ. ರಾಜಪ್ರಭುತ್ವ ಪ್ರಜಾಸಮುದಾಯಕ್ಕೆ ಮಾರಕವಾಗಬಾರದು ಎಂಬ ಆಶಯವಿದೆ. ವಾಲಿಯು ತಾರೆಯ ಉಪದೇಶದ ಮಾತುಗಳನ್ನು ಧಿಕ್ಕರಿಸಿದಾಗಲೂ ಆಕೆ ಕೋಪಗೊಳ್ಳುವುದಿಲ್ಲ. ಪ್ರತಿಭಟಿಸುವುದೂ ಇಲ್ಲ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ತಾರೆಯ ಸಮಯಪ್ರಜ್ಞೆ, ದಿಟ್ಟತನ, ದೂರದೃಷ್ಟಿ ವ್ಯಕ್ತವಾಗುತ್ತದೆ. ಪತಿಯನ್ನು ಅಗಲಿದ ಸತಿಯ ಸಂವೇದನಾಶೀಲತೆ ತಾರೆಯ ನೆಲೆಯಿಂದ ಅನಾವರಣಗೊಂಡಿದೆ. ಬದುಕಿನ ಕುರಿತು, ರಾಜನೀತಿಯ ಕುರಿತು ತನ್ನದೇ ನೆಲೆಯ ಚಿಂತನೆಯನ್ನು ಅಭಿವ್ಯಕ್ತಿಸುವ ತಾರೆ ಸ್ವತಂತ್ರ ಮಾದರಿ ಪಾತ್ರವಾಗಿ ಕಾಣಿಸಿದ್ದಾಳೆ.

### ೫.೩.೫ ಸ್ವಯಂಪ್ರಭೆ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸ್ವಯಂಪ್ರಭೆಯ ಪಾತ್ರ ಸ್ವತಂತ್ರ ಮಾದರಿಯಲ್ಲಿದೆ. ತನ್ನದೇ ನೆಲೆಯಿಂದ ತೀರ್ಮಾನ ಕೈಗೊಳ್ಳುವ ಧೈರ್ಯ ಸ್ವಯಂಪ್ರಭೆಯಲ್ಲಿ ಇದೆ. ಈಕೆ ಭೋಗವಿಲಾಸದ ಬದುಕನ್ನು ಸ್ವಯಂ ಇಚ್ಛೆಯಿಂದ ತೊರೆದವಳು. ತಪಸ್ಸನ್ನು ಅಪೇಕ್ಷಿಸುತ್ತಾ ಬದುಕಿನ ಸಾರ್ಥಕತೆಯನ್ನು ಕಂಡುಕೊಂಡವಳು. ಇಲ್ಲಿನ ಸ್ವಯಂಪ್ರಭೆಯ ಪಾತ್ರ ಭಕ್ತಿಯ ಪರಾಕಾಷ್ಠೆಗೆ ಸಾಕ್ಷಿಯಾಗಿದೆ. ರಾಮಭಕ್ತೆಯಾದ ಈಕೆ ಹನುಮನಲ್ಲೇ ರಾಮನನ್ನು ಕಂಡವಳು. ವಾನರರ ಉಪಚಾರ ಮಾಡಿ ಸೇವಾಕಾಂಕ್ಷೆಯನ್ನು ಪರಿಪೂರ್ಣಗೊಳಿಸಿದವಳು. ಹೀಗೆ ಸ್ವತಂತ್ರತೆಯ ನೆಲೆಯಿಂದ ಬದುಕನ್ನು ರೂಪಿಸುವ, ಸಾರ್ಥಕಪಡಿಸಿಕೊಳ್ಳುವ ಮಾದರಿ ಪಾತ್ರವಾಗಿ ಸ್ವಯಂಪ್ರಭೆ ಕಾಣಿಸಿದ್ದಾಳೆ.

**೫.೩.೬ ಮಂಡೋದರಿ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಡೋದರಿ ಪ್ರಬುದ್ಧೆ. ಮಾನವೀಯತೆಯ ಪ್ರತಿಪಾದಕಿ. ವಸ್ತುಸ್ಥಿತಿಯ ಪ್ರಜ್ಞೆ ಉಳ್ಳವಳು. ನಿಷ್ಪಕ್ಷಪಾತಿ. ಸೀತೆಯ ಕುರಿತು ಅಪಾರ ಪ್ರೀತಿ ಉಳ್ಳವಳು. ಸಕಾಲಕ್ಕೆ ರಾಮ ತನ್ನನ್ನು ಸ್ವೀಕರಿಸಲು ನಿರಾಕರಿಸಿದನು ಎಂಬ ಕಾರಣಕ್ಕೆ ಸೀತೆ ಅಗ್ನಿಪ್ರವೇಶ ಮಾಡುತ್ತಾಳೆ. ಈ ಸಂದರ್ಭದಲ್ಲಿ ಅಗ್ನಿಹೊಕ್ಕು ಸೀತೆಯನ್ನು ರಕ್ಷಿಸಿದವಳು ಮಂಡೋದರಿ. ಶತಮಾನಗಳಿಂದ ಸ್ತ್ರೀಜಗತ್ತು ಅನುಭವಿಸುತ್ತಿರುವ ವೇದನೆಯ ಅರಿವು ಮಂಡೋದರಿಗೆ ಇದೆ. ಪುರುಷ ತನ್ನ ಪ್ರತಿಷ್ಠೆಯನ್ನು ಸಾಬೀತುಪಡಿಸುವ ಸಲುವಾಗಿ ಸ್ತ್ರೀಯರನ್ನು ಪರೀಕ್ಷೆಗೆ ಒಡ್ಡುವುದು ಮಂಡೋದರಿಯ ನೆಲೆಯಿಂದ ಸಮ್ಮತವಲ್ಲ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಅಗ್ನಿಪ್ರವೇಶದ ವಿಚಾರದಲ್ಲಿ ಶಿಷ್ಟ ರಾಮಾಯಣ ಪರಂಪರೆಯ ಸಾಂಪ್ರದಾಯಿಕ ನಿಲುವನ್ನು ಒಡೆದಿದ್ದಾರೆ. ಅಂತೆಯೇ ತನ್ನ ಪಾತಿವ್ರತ್ಯವನ್ನು ಸಾಬೀತುಪಡಿಸುವುದಕ್ಕಾಗಿ ಹೆಣ್ಣು ತನ್ನನ್ನು ಪರೀಕ್ಷೆಗೆ ಒಡ್ಡಿಕೊಳ್ಳುವ ಅಗತ್ಯ ಇಲ್ಲ ಎಂಬುದು ಕವಿಯ ಉದ್ದೇಶ. ಹಾಗಾಗಿ ರಾಮ ಇಲ್ಲಿ ಸೀತೆಯನ್ನು ಶಂಕಿಸಿಲ್ಲ. ಸೀತೆಯ ಪಾತಿವ್ರತ್ಯದ ಪರೀಕ್ಷೆ ಇಲ್ಲಿ ನಡೆಯುವುದೂ ಇಲ್ಲ.

ಅಗ್ನಿಪ್ರವೇಶದ ಹಿಂದಿನ ಉದ್ದೇಶ ಏನೇ ಆದರೂ ನರಳುವವರು ಮಹಿಳೆಯರೇ ಎಂಬ ಅರಿವು ಮಹಾಕಾವ್ಯದ ಮಂಡೋದರಿಯ ಪಾತ್ರದಿಂದ ವ್ಯಕ್ತವಾಗಿದೆ. ಹಾಗಾಗಿ ಸೀತೆಯ ಅಗ್ನಿಪ್ರವೇಶಕ್ಕೆ ಮಂಡೋದರಿಯ ಸಮ್ಮತವಿಲ್ಲ. ತನ್ನ ಪತಿಯನ್ನು ಸಂಹರಿಸಿದವನ ಪತ್ನಿಯನ್ನು ಉಲ್ಲೇಖಿಸುವಲ್ಲಿ ಮಂಡೋದರಿ ಮುಂದಾಗುತ್ತಾಳೆ. ಇಲ್ಲಿ ಮಂಡೋದರಿಯ ಪಾತ್ರದ ಮೂಲಕ ಕವಿ ಮನಸ್ಸು ಸ್ತ್ರೀಸಂವೇದನೆಗೆ ಮಿಡಿದಿರುವುದು ಸ್ಪಷ್ಟವಾಗುತ್ತದೆ.

"ಏನಿದೇನಿದು ಮಗಳೆ
ಅಗ್ನಿಯನು ಪೊಕ್ಕಿರುವೆ ಎನ್ನನೂ ಸೆಳೆದಿರುವೆ
ನಾರಿಯರು ನಾವೆಲ್ಲ ಇಂದುವರೆ ಸಹಿಸಿರುವ
ಅಗ್ನಿದಿವ್ಯದ ಬಾಳು ಸಾಲದೆಂದೆಣಿಸಿದೆಯ?."

(ಮೊಯಿಲಿ: ೨೦೦೫ : ೪೭೬)

ಸೀತೆಯ ಅಗ್ನಿಪ್ರವೇಶದ ಸಂದರ್ಭವನ್ನು ತಡೆದ ಮಂಡೋದರಿ ಇಲ್ಲಿ ಮಹಾಮಾತೆಯಾಗಿ ಕಾಣಿಸಿದ್ದಾಳೆ. ಸೀತೆಯ ಆತ್ಮಾಭಿಮಾನವನ್ನು ಅರ್ಥೈಸಿಕೊಂಡ ಮಂಡೋದರಿ ಅವಳ ಅಗ್ನಿಪ್ರವೇಶದ ಸಂದರ್ಭವನ್ನು ತಪ್ಪಿಸುವ ಪ್ರಯತ್ನ ಮಾಡುತ್ತಾಳೆ. ಮಾತೃವಾತ್ಸಲ್ಯದ ನೆಲೆಯಲ್ಲಿ ಸೀತೆಗೆ ಪ್ರೀತಿ ನೀಡುತ್ತಾಳೆ. ನಾರಿ ಸಮುದಾಯ ತನ್ನನ್ನು ಪರೀಕ್ಷೆಗೆ ಒಳಗುಮಾಡಿಕೊಳ್ಳುವುದನ್ನು ಈಕೆ ಒಪ್ಪುವುದಿಲ್ಲ. ಹೀಗೆ ಪರೀಕ್ಷೆಗೆ ಒಳಪಡಿಸುವುದರಿಂದ ನರಳುವವರು ಮಹಿಳೆಯರೇ ಎಂಬುದು ಆಕೆಯ ಅಭಿಮತ.

ಶತಮಾನಗಳಿಂದ ಮಹಿಳೆಯರು ಅನುಭವಿಸುತ್ತ ಬಂದಿರುವ ಯಾತನೆ, ಶೋಷಣೆಯ ಬದುಕನ್ನು ಮಂಡೋದರಿ ತೆರೆದಿಟ್ಟಿದ್ದಾಳೆ. ಆದರೆ ಹೆಣ್ಣಿನ ಬಿಡುಗಡೆಗೆ, ಶೋಷಿತ ಬದುಕಿನ ಮುಕ್ತಿಗೆ 'ಯುಗಪುರುಷ' ಬರಬೇಕು ಎನ್ನುವ ಸಾಂಪ್ರದಾಯಿಕ ನಿಲುವಿನಲ್ಲಿ ಸ್ತ್ರೀಪರ ಆಶಯ ಕಟ್ಟುವಲ್ಲಿಯೇ ಕುಸಿಯುತ್ತದೆ. ಇಲ್ಲಿ ಕವಿಯ ಮನಸ್ಸು ಸಾಂಪ್ರದಾಯಿಕ ಮತ್ತು ಆಧುನಿಕತೆಯ ಸಂಘರ್ಷಕ್ಕೆ ಸಿಲುಕಿರುವುದು ಸ್ಪಷ್ಟ. ಕವಿ ಇಲ್ಲಿ ಮಂಡೋದರಿಯ ಪಾತ್ರವನ್ನು ಸ್ವತಂತ್ರ ಮಾದರಿಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದರೂ ಸಾಂಪ್ರದಾಯಿಕ ಚಿಂತನೆಯನ್ನು ಮೀರಲಾಗದ ಅಸಹಾಯಕ ಸ್ಥಿತಿಗೆ ತಲುಪಿರುವುದು ಸ್ಪಷ್ಟ.

ಮಂಡೋದರಿಗೆ ಮಹಿಳಾಸಮುದಾಯದ ಕುರಿತು ಅತೀವವಾದ ಪ್ರೀತಿ ಇದೆ. ಶತಮಾನಗಳ ಮಹಿಳಾಸಮುದಾಯದ ಅಂತರಂಗದ ಖೇದವನ್ನು ಮಂಡೋದರಿ ಪರಿಗ್ರಹಿಸಿದ್ದಾಳೆ. ಮಹಾನ್ವೇಷಣಂನ ಮಂಡೋದರಿ ಸೀತೆಯನ್ನು ಮಗಳು ಎಂದೇ ಪರಿಭಾವಿಸಿದ್ದಾಳೆ. ಅಗ್ನಿದಿವ್ಯದಿಂದ ಗೆದ್ದುಬಂದ ಸೀತೆಯನ್ನು ಸ್ವೀಕರಿಸು ಎಂದು ರಾಮನಲ್ಲಿ ಕೇಳಿಕೊಳ್ಳುತ್ತಾಳೆ. ಹೀಗೆ ಕೇಳಿಕೊಳ್ಳುವಲ್ಲಿ ಮಂಡೋದರಿಯ ಮಾತೃಹೃದಯ ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ. ಪತಿಯ ಇಂಗಿತವನ್ನು ಅರಿತ ಮಂಡೋದರಿ ರಾವಣನನ್ನು ಸರಿದಾರಿಗೆ ತರಲು ಪ್ರಯತ್ನಿಸಿ ವಿಫಲಳಾಗುತ್ತಾಳೆ. ತನ್ನಿಂದ ಸಾಧ್ಯವಾಗದಾಗ ಶಿವನಿಗೆ ಮೊರೆ ಹೋಗುತ್ತಾಳೆ. ರಾವಣನ ಕುರಿತು ವಾಸ್ತವದಲ್ಲಿ ಮಂಡೋದರಿಗೆ ಪ್ರೀತಿ ಇದೆ. ಆದರೆ ಆತನ ಮನದ ದುಷ್ಟತೆಯ ಕುರಿತು ಖೇದ ಇದೆ. ಹಾಗಾಗಿ ರಾಮನೊಡನೆ ಯುದ್ಧ ಮಾಡದಂತೆ ತಡೆಯಲು ಪ್ರಯತ್ನಿಸುತ್ತಾಳೆ.

ಮಂಡೋದರಿಯ ಸಾಮಾಜಿಕ ಗ್ರಹಿಕೆ ನಿಷ್ಪಕ್ಷಪಾತ ನೆಲೆಯಿಂದ ಕೂಡಿದೆ. ಅಯೋಧ್ಯಾಸಂಸ್ಕೃತಿಗಿಂತ ಲಂಕಾಸಂಸ್ಕೃತಿಯ ಕುರಿತು ಮಂಡೋದರಿಗೆ ಹೆಮ್ಮೆ ಇದೆ. ಅಯೋಧ್ಯೆಯ ಬಾಲ್ಯವಿವಾಹ, ಸತಿಪದ್ಧತಿ, ಅರಮನೆಯ ರಾಣಿಯರ ಅತಂತ್ರ ಬದುಕಿನ ಕುರಿತು ಆಕೆಗೆ ಖೇದವಿದೆ. ನಾರಿಯರ ಬದುಕು ಸೋರಿ ಹೋಗುವುದು ಈಕೆಗೆ ಸಮ್ಮತವಲ್ಲ. ಮಹಿಳಾಸಮುದಾಯದ ಅಂತರಂಗಶಕ್ತಿಗೆ ಸಮಾಜ ಉತ್ತಮ ವೇದಿಕೆಯಾಗಬೇಕು ಎಂಬುದು ಮಂಡೋದರಿಯ ಮನೋಭಿಲಾಷೆ. ಲಂಕಾಸಂಸ್ಕೃತಿಯ ಕುರಿತು ಆಕೆಗೆ ಹೆಮ್ಮೆ ಇದೆ. ಶೂರ್ಪನಖಿ ವಿಧವೆಯಾದರೂ ನಿರ್ಲಕ್ಷಿಸದೆ ಆಕೆ ಜನಸ್ಥಾನದ ಚಕ್ರವರ್ತಿನಿಯಾದುದಕ್ಕೆ ಮಂಡೋದರಿ ಅಭಿಮಾನ ಪಡುತ್ತಾಳೆ. ಇಂಥ ಸುಧಾರಣಾಪರ ನಿಲುವುಗಳು ಬದುಕಿನುದ್ದಕ್ಕೂ ಸ್ತ್ರೀಸಮುದಾಯಕ್ಕೆ ದಕ್ಕುವಂತಾಗಬೇಕು ಎಂಬುದು ಮಂಡೋದರಿಯ ಆಶಯ.

ಅಯೋಧ್ಯಾಸಂಸ್ಕೃತಿಗಿಂತ ಲಂಕಾಸಂಸ್ಕೃತಿ ಬಹುತೇಕ ವಿಚಾರಗಳಲ್ಲಿ ಉಚ್ಚಾಯ ಸ್ಥಿತಿಯಲ್ಲಿ ಇತ್ತು. ಲಂಕಾಸಂಸ್ಕೃತಿಯ ಈ ವೈಶಿಷ್ಟ್ಯತೆಯನ್ನು ಮಹಾನ್ವೇಷಣಂನ ಕವಿ ಮಂಡೋದರಿಯ ಮೂಲಕ ವ್ಯಕ್ತಪಡಿಸಿದ್ದಾರೆ. ಅಯೋಧ್ಯೆ ರಾಮರಾಜ್ಯವಾದ ಮಾತ್ರಕ್ಕೆ ಅಲ್ಲಿನ ಎಲ್ಲಾ ವಿಚಾರಗಳನ್ನು ಸ್ವೀಕರಿಸುವ ಪ್ರಮೇಯ ಇಲ್ಲಿ ಇಲ್ಲ. ಅಂತೆಯೇ ಲಂಕೆ ರಾವಣರಾಜ್ಯವಾದ ಮಾತ್ರಕ್ಕೆ ಅಲ್ಲಿನ ಎಲ್ಲಾ ವಿಚಾರಗಳನ್ನು ತಿರಸ್ಕರಿಸಬೇಕು ಎಂಬ ಉದ್ದೇಶ ಇಲ್ಲಿಲ್ಲ. ಈ ಕಾವ್ಯದ ಮಂಡೋದರಿ ಬುದ್ಧಿಚಾತುರ್ಯ ಉಳ್ಳವಳು. ಅವಳ ಮಾತಲ್ಲಿ ತೂಕವಿದೆ. ಹಾಗಾಗಿ ಕವಿ ಲಂಕಾಸಾಮ್ರಾಜ್ಯದ ಗುಣವೈಶಿಷ್ಟ್ಯವನ್ನು ಮಂಡೋದರಿ ಒಪ್ಪುವ ಮಾದರಿಯಲ್ಲಿ ನಿರೂಪಿಸಿದ್ದಾರೆ.

"ಮಹಾನ್ವೇಷಣಂ ಮಹಾಕಾವ್ಯದಲ್ಲಿ ಮಂಡೋದರಿಯ ಮಾತುಗಳಿಗೆ ಅಧಿಕ ಮಹತ್ವ ಇದೆ. ಆಕೆ ಪ್ರೌಢಮಟ್ಟದ ಚಿಂತಕಿಯಾಗಿ ಇಲ್ಲಿ ಕಾಣಿಸಿದ್ದಾಳೆ. ಸ್ತ್ರೀಯರನ್ನು ಸ್ತ್ರೀಯೇ ರಕ್ಷಣೆ ಮಾಡಬೇಕು ಎಂಬ ಆಶಯ ಇಲ್ಲಿ ಆಕೆಯದ್ದು. ಶೋಷಣೆಗೆ ಒಳಗಾದ ಎಲ್ಲ ಮಹಿಳಾ ಪಾತ್ರಗಳ ಉದ್ಧಾರ ಆಗಬೇಕು ಎಂಬ ಅಶಯ ಇಲ್ಲಿ ಮಂಡೋದರಿಯ ಪಾತ್ರ ಮುಖೇನ ಅಭಿವ್ಯಕ್ತಗೊಂಡಿದೆ" (ಮೊಯಿಲಿಯವರೊಂದಿಗೆ ವೈಯಕ್ತಿಕ ಮಾತುಕತೆ: ೧೩-೧೨-೨೦೧೮)

'ಶ್ರೀ ರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಡೋದರಿಯಲ್ಲಿ ಧರ್ಮಪ್ರಜ್ಞೆ ಇದೆ. ಈ ಪ್ರಜ್ಞೆ ಕಾವ್ಯದ ಉದ್ದಕ್ಕೂ ಕಾಣಿಸುತ್ತದೆ. ಅವಳು ಎಲ್ಲೆಲ್ಲಿ, ಯಾವ್ಯಾವ ಸಂದರ್ಭದಲ್ಲಿ ರಾವಣನಿಗೆ ಬುದ್ಧಿವಾದ ಹೇಳುತ್ತಾಳೋ ಅಲ್ಲೆಲ್ಲಾ ಸತ್ಯಪರವಾದ, ಧರ್ಮಪರವಾದ, ನ್ಯಾಯಪರವಾದ ಮಾತುಗಳೇ ಕಾಣಿಸುತ್ತವೆ. ತಾರೆಯಂತೆ ಮಂಡೋದರಿಗೂ ಯುದ್ಧವನ್ನು ತಪ್ಪಿಸುವ ಉದ್ದೇಶವಿದೆ. ಲಂಕೆ ಉರಿದರೆ ಮತ್ತೆ ಕಟ್ಟಬಹುದು. ಧರ್ಮ ಉರಿದರೆ ಜಗತ್ತೇ ಸುಟ್ಟು ಭಸ್ಮವಾಗುತ್ತದೆ. ಆಗ ನಾನೆಲ್ಲಿ? ನೀನೆಲ್ಲಿ? ಎನ್ನುವ ಧರ್ಮಸೂಕ್ಷ್ಮವನ್ನು ಮಂಡೋದರಿ ರಾವಣನಿಗೆ ಹೇಳುತ್ತಾಳೆ. ಇಲ್ಲಿ ಆಕೆಯ ಸಮಯಪ್ರಜ್ಞೆಯೊಂದಿಗೆ ಧರ್ಮಪ್ರಜ್ಞೆ ಅಭಿವ್ಯಕ್ತಗೊಂಡಿದೆ. ಅಯೋಧ್ಯಾ ಸಂಸ್ಕೃತಿ - ಲಂಕಾ ಸಂಸ್ಕೃತಿಯನ್ನು, ಪುರುಷ ಪ್ರಧಾನ ಸಂಸ್ಕೃತಿ - ಸ್ತ್ರೀಸಂಸ್ಕೃತಿಯನ್ನು ಆಪೋಶನ ತೆಗೆದುಕೊಳ್ಳುವ ನೋಟದಲ್ಲಿ ತನ್ನತನವನ್ನು ಕಾಪಿಡುವ ಉದ್ದೇಶವಿದೆ. ಹೀಗಾಗಿ ಮಂಡೋದರಿ ಅತ್ಯಂತ ಗಂಭೀರ ಬೌದ್ಧಿಕ ರಾಜತಾಂತ್ರಿಕಳಾಗಿಯೂ, ದಾರ್ಶನಿಕಳಾಗಿಯೂ ಕಾಣಿಸಿಕೊಂಡಿದ್ದಾಳೆ.

'ಶ್ರೀ ರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಡೋದರಿಗೆ ಲಂಕಾ ಸಂಸ್ಕೃತಿಯ ಅನನ್ಯತೆಯ ಕುರಿತು ಅಪಾರ ಗೌರವವಿದೆ. ಅಯೋಧ್ಯಾ ಸಂಸ್ಕೃತಿ ಲಂಕಾ

ಸಂಸ್ಕೃತಿಯನ್ನು ಅಪೋಶನ ತೆಗೆದುಕೊಂಡರೆ ನರಳುವವರು ಎಲ್ಲರೂ ಎಂಬುವುದು ಅವಳ ಅಭಿಮತ. ಹಾಗಾಗಿ ಈ ನರಳುವಿಕೆಯನ್ನು ತಪ್ಪಿಸುವ ಉದ್ದೇಶ ಆಕೆಗೆ ಇದೆ. ಅಯೋಧ್ಯಾ ಸಂಸ್ಕೃತಿ ಲಂಕಾ ಸಂಸ್ಕೃತಿಯ ಕಣ್ಣು ತೆರೆಯಿಸಬೇಕೇ ವಿನಾ ವಿನಾಶಕ್ಕೆ ಕಾರಣವಾಗಬಾರದು ಎಂಬುದು ಆಕೆಯ ಉದ್ದೇಶ. ವ್ಯಕ್ತಿಗತ ಬದುಕಿಗೆ ಆದ್ಯತೆ ನೀಡಿದ ಈಕೆಗೆ ಪ್ರತಿಯೊಬ್ಬ ವ್ಯಕ್ತಿಯ ಬದುಕೂ ಪ್ರಧಾನವಾಗುತ್ತದೆ. ಪ್ರತಿಯೊಬ್ಬರನ್ನೂ ಜೀವದ ನೆಲೆಯಲ್ಲಿ ಪರಿಗಣಿಸುವ ಮಂಡೋದರಿಗೆ ಮಾನವೀಯತೆಯೇ ಬಹುಮುಖ್ಯವಾಗುತ್ತದೆ.

ಅಯೋಧ್ಯಾಸಂಸ್ಕೃತಿಯಲ್ಲಿ ಮಹಿಳಾಸಮುದಾಯಕ್ಕೆ ವಿಶೇಷ ಸ್ಥಾನಮಾನ ಪ್ರಾಪ್ತವಾಗಿಲ್ಲ. ಅಯೋಧ್ಯೆಯಲ್ಲಿ ಕಾಣಸಿಗದ ಮಹಿಳಾಸ್ವಾತಂತ್ರ್ಯ ಲಂಕೆಯಲ್ಲಿ ಕಾಣಸಿಕ್ಕಿದೆ. ಅಯೋಧ್ಯೆಯ ಬಾಲ್ಯವಿವಾಹ, ಸತಿ ಸಹಗಮನ ಪದ್ಧತಿ, ಸ್ತ್ರೀಯರನ್ನು ದ್ವಿತೀಯ ದರ್ಜೆಯ ಪ್ರಜೆಯಾಗಿಯೇ ಕಾಣುವುದರ ಕುರಿತು ಮಂಡೋದರಿಗೆ ಸಹಮತವಿಲ್ಲ. ರಾಜಸಂಸ್ಕೃತಿಯ ಎದುರು ಪ್ರಜಾಸಂಸ್ಕೃತಿ ನಾಶವಾಗಬಾರದು. ಪುರುಷಪ್ರಭುತ್ವ ಮಹಿಳೆಯರ ಶಕ್ತಿ ಸಾಮರ್ಥ್ಯಗಳನ್ನು ನುಂಗಿ ನೊಣೆಯಬಾರದು ಎಂಬುದು ಇಲ್ಲಿ ಮಂಡೋದರಿಯ ಆಶಯ. ಹಾಗಾಗಿ ರಾಜಸಂಸ್ಕೃತಿಯೊಂದಿಗೆ ಉಪಸಂಸ್ಕೃತಿಗಳೂ ಉಳಿಯಬೇಕು ಎಂಬ ಆಶಯ ಇಲ್ಲಿ ಮಂಡೋದರಿಯ ಮುಖೇನ ವ್ಯಕ್ತವಾಗಿದೆ. ಶ್ರೀರಾಮನ ಸಜ್ಜನಿಕೆಯ ನೆಲೆಗಳನ್ನು ಶೋಧಿಸಿದ ಮಂಡೋದರಿಗೆ ಆತನು ಕೇವಲ ಪುರುಷಪ್ರಧಾನ ಸಂಸ್ಕೃತಿಯನ್ನು ಪೋಷಿಸುವ ವಿಚಾರದ ಕುರಿತು ಖೇದವಿದೆ. ನಾರಿಯರನ್ನು ಪಶುಗಳನ್ನಾಗಿ ಕಾಣುವ ಪ್ರಕ್ರಿಯೆ ನಿಲ್ಲಬೇಕು. ಸ್ತ್ರೀಶಕ್ತಿ ಕೇಂದ್ರಕ್ಕೆ ಬಂದು ಸ್ವಂತಿಕೆಯ ನೆಲೆಯಿಂದ ಅವರು ತೀರ್ಮಾನ ಕೈಗೊಳ್ಳುವಂತೆ ಆಗಬೇಕು ಎಂಬ ಆಶಯ ಇಲ್ಲಿ ಮಂಡೋದರಿಯದ್ದು. ಅಯೋಧ್ಯೆ ಮಹಿಳಾಸಮುದಾಯವನ್ನು ಆವರಿಸಿರುವ ಈ ಚೌಕಟ್ಟು ಲಂಕೆಯನ್ನು ಆವರಿಸದಿರಲಿ ಎಂಬುದು ಮಂಡೋದರಿಯ ಆಶಯ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿ ಪ್ರೌಢ ಚಿಂತಕಿಯಾಗಿದ್ದಾಳೆ. ಮಂಡೋದರಿಯ ಸತ್ವಯುತ ಮಾತುಗಳಲ್ಲಿ ಸ್ತ್ರೀವಾದಿ ನೆಲೆಗಳನ್ನು ಪರಿಗ್ರಹಿಸಲು ಸಾಧ್ಯ.

ರಾಮ ಮನಸ್ಸು ಮಾಡಿದ್ದರೆ ರಾವಣನನ್ನು ಸರಿದಾರಿಗೆ ತರಬಹುದಿತ್ತು ಎಂಬುದು ಮಂಡೋದರಿಯ ಅಭಿಮತ. ಹಾಗಾಗಿ ರಾಮನನ್ನು ಶಂಕಿಸುವ ಕೆಲಸವೂ ಮಂಡೋದರಿಯಿಂದ ನಡೆದಿದೆ. ರಾಮ ಸತ್ಯ, ಧರ್ಮದ ಪ್ರತೀಕ ಎಂಬ ವಾಸ್ತವದ ಅರಿವು ಮಂಡೋದರಿಯಲ್ಲಿ ಇತ್ತು. ಪತಿಪ್ರೇಮದ ಕುರುಡುತನ ಮಂಡೋದರಿಯನ್ನು ಬಾಧಿಸಿಲ್ಲ. ಹಾಗಾಗಿ ವಾಸ್ತವದ ನೆಲೆಯಲ್ಲಿ ಮಂಡೋದರಿಯ ಚಿಂತನೆ ಸಾಗುತ್ತದೆ. ಪತಿ ವಿಯೋಗವನ್ನು ತನಗಾದ ಅನ್ಯಾಯ ಎಂದು ಬಗೆಯದೆ ಅಧರ್ಮದ ನಾಶಕ್ಕಾಗಿ ನಡೆದ

ಉದ್ಧಾರ ಎಂದು ಪರಿಗ್ರಹಿಸುತ್ತಾಳೆ. ತನ್ನದೇ ನಿಲುವಿನಿಂದ ಚಿಂತನೆಯನ್ನು ಅಭಿವ್ಯಕ್ತಿಸುವ ಸ್ವತಂತ್ರ ಮಾದರಿಯ ಪಾತ್ರವಾಗಿ ಮಂಡೋದರಿ ಕಾಣಿಸಿಕೊಂಡಿದ್ದಾಳೆ. ರಾಮನಿಂದ ಗೌರವಕ್ಕೆ ಪಾತ್ರಳಾದ ಮಂಡೋದರಿಗೆ ಯಾರ ಮೇಲೂ ದ್ವೇಷವಿಲ್ಲ. ಬದುಕನ್ನು ವಿಮರ್ಶಿಸುವ ಶಕ್ತಿ ಇದೆ. ಸರಿ-ತಪ್ಪುಗಳನ್ನು ಪರಾಮರ್ಶಿಸುತ್ತಾ ತನ್ನ ಬದುಕಿನೊಂದಿಗೆ ರಾವಣನ ಬದುಕನ್ನು ವಿಮರ್ಶೆಗೆ ಒಡ್ಡುತ್ತಾಳೆ. ಹೀಗೆ ಪ್ರಜ್ಞಾಪೂರ್ವಕ ನೆಲೆಯಲ್ಲಿ ಅಭಿವ್ಯಕ್ತವಾದ ಮಂಡೋದರಿಯ ಪಾತ್ರ ಮಹಾಕಾವ್ಯದ ಮಾದರಿ ಪಾತ್ರ ಎಂದೇ ಹೇಳಬೇಕು.

ಮಂಡೋದರಿಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿ ವಿಶಿಷ್ಟ ಗುಣಗಳನ್ನು ಅಳವಡಿಸಿ ಆಕೆಯನ್ನು ಮಹಾನ್ ತೇಜಸ್ವಿಯನ್ನಾಗಿ ನಿರೂಪಿಸಿದ್ದಾರೆ. ಮಾನವ ತನ್ನ ಬದುಕಲ್ಲಿ ಅಳವಡಿಸಿಕೊಳ್ಳಬೇಕಾದ ಸದ್ಗುಣಗಳೆಲ್ಲವನ್ನೂ ಕವಿ ಮಂಡೋದರಿಯಲ್ಲೇ ಮಿಳಿತಗೊಳಿಸಿದ್ದಾರೆ. ಮಹಾಕಾವ್ಯದ ಮಹಿಳಾ ಪಾತ್ರನಿರ್ಮಿತಿಗೆ ಸಂಬಂಧಿಸಿದಂತೆ ಕವಿ ಸೀಮಿತ ಚೌಕಟ್ಟನ್ನು ಮೀರಿ ಪ್ರವಹಿಸಿದ್ದಾರೆ. ಒಂದೊಂದು ಪಾತ್ರಗಳಿಗೆ ಒಂದೊಂದು ಗುಣವನ್ನು ಆರೋಪಿಸಿಬಿಡುವ ಸೀಮಿತ ಉದ್ದೇಶ ಇಲ್ಲಿ ಕವಿಗೆ ಇಲ್ಲ. ಮಾನವತ್ವದ ಬಹುಮುಖಿ ನೆಲೆಗಳನ್ನು ಮಂಡೋದರಿಯ ಪಾತ್ರಮುಖೇನ ಶೋಧಿಸಲು ಸಾಧ್ಯ. ಮಾನವನಲ್ಲಿರುವ ಒಳ್ಳೆಯತನ ಆತನ ಬದುಕಿನುದ್ದಕ್ಕೂ ಶಾಶ್ವತವಾಗಿ ಉಳಿಯಬೇಕು. ಅದು ಆತನ ಅಂತರಂಗದ ಸೌಂದರ್ಯ. ಈ ಭಾವ ಬದುಕನ್ನು ಸಾರ್ಥಕಪಡಿಸಿಕೊಳ್ಳಲು ನೆರವಾಗುವುದು ಮಾತ್ರವಲ್ಲ ಆತ್ಮತೃಪ್ತಿಯನ್ನು ತಂದುಕೊಡುವುದು ಎಂಬುದನ್ನು ಕವಿ ಮಂಡೋದರಿಯ ಪಾತ್ರಮುಖೇನ ಸಾಬೀತುಪಡಿಸಿದ್ದಾರೆ.

ಪುರುಷಪ್ರಧಾನ ಸಂಸ್ಕೃತಿಗೆ ಸರಿಸಮಾನವಾಗಿ ಸ್ತ್ರೀಶಕ್ತಿ ಬೆಳೆಯಬೇಕು ಎಂಬ ಆಶಯ ಹೊತ್ತವಳು ಮಂಡೋದರಿ. ಈ ಮಹಾಕಾವ್ಯದ ಮಂಡೋದರಿ ಪ್ರಗತಿಪರ ಸ್ತ್ರೀವಾದಿಯಾಗಿ ಕಾಣಿಸಿದ್ದಾಳೆ. ಮಹಿಳಾಸಮುದಾಯಕ್ಕೆ ಸಂಬಂಧಿಸಿದಂತೆ ಲಂಕಾಸಂಸ್ಕೃತಿಯ ಅನನ್ಯತೆಯನ್ನು ಎತ್ತಿಹಿಡಿದ ಮಂಡೋದರಿ ಸ್ತ್ರೀಸ್ವಾತಂತ್ರ್ಯದೊಂದಿಗೆ ಸ್ತ್ರೀಸ್ವಾಭಿಮಾನದ ಪ್ರತಿಪಾದಕಿಯಾಗಿದ್ದಾಳೆ.

**೫.೩.೭ ಅಹಲ್ಯೆ**

ಶಿಷ್ಟ ರಾಮಾಯಣ ಪರಂಪರೆಯ ಅಹಲ್ಯೆಯ ಪಾತ್ರಕ್ಕೂ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಹಲ್ಯೆಯ ಪಾತ್ರಕ್ಕೂ ವ್ಯತ್ಯಾಸ ಇದೆ. ಸ್ವಂತ ತೀರ್ಮಾನ ಕೈಗೊಳ್ಳುವ ಸ್ವತಂತ್ರ ಮಾದರಿಯ ಪಾತ್ರವಾಗಿ ಈ ಮಹಾಕಾವ್ಯದಲ್ಲಿ ಅಹಲ್ಯೆ ಕಾಣಿಸಿದ್ದಾಳೆ. ಇಲ್ಲಿ ಅಹಲ್ಯೆ ಯಾರ ಶಾಪಕ್ಕೂ ಒಳಗಾಗುವುದಿಲ್ಲ. ತನ್ನಿಂದಾದ ತಪ್ಪಿಗೆ ತಾನೇ ಶಿಕ್ಷೆ ಅನುಭವಿಸುವ ತೀರ್ಮಾನ ಕೈಗೊಳ್ಳುತ್ತಾಳೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಗೌತಮನಿಂದ ಶಾಪಕ್ಕೆ ಒಳಗಾದ ಅಹಲ್ಯೆ ಶಿಲೆಯಾಗುತ್ತಾಳೆ. ಈ ಮಹಾಕಾವ್ಯದಲ್ಲಿ ಗೌತಮ ಮುನಿ

ಇಂದ್ರನನ್ನು ಶಪಿಸುತ್ತಾನೆ. ತನ್ನ ಮಡದಿಯ ವಿಚಾರವಾಗಿ ಪಕ್ಷಪಾತ ಧೋರಣೆಯನ್ನು ಇಲ್ಲಿ ಗೌತಮ ಮಹರ್ಷಿ ತಳೆದಿಲ್ಲ. ಇಂದ್ರನು ಪೂಜಾರ್ಹನಾಗದಿರಲಿ ಎಂದು ಗೌತಮನಿಂದ ಇಂದ್ರನನ್ನು ಶಪಿಸುವ ಮೂಲಕ ಕವಿ ಸಮಸ್ತ ಸ್ತ್ರೀಕುಲಕ್ಕೆ ಆಗುವ ಅನ್ಯಾಯವನ್ನು ತಪ್ಪಿಸಿದ್ದಾರೆ. ಈ ಮೂಲಕ ಮಹಾನ್ವೇಷಣಂನ ಕವಿ ಅಹಲ್ಯೆಯ ಪಾತ್ರಕ್ಕೆ ನ್ಯಾಯ ಒದಗಿಸಿದ್ದಾರೆ. ಅರಿತೂ ಅರಿಯದೆಯೂ ಮಾಡಿದ ತಪ್ಪಿಗೆ ಸಾಮಾನ್ಯವಾಗಿ ದೂಷಿತರಾಗುವವರು ಮಹಿಳೆಯರು. ಇಂಥ ದೂಷಣೆಯಿಂದ ಕವಿ ಅಹಲ್ಯೆಯನ್ನು ಬಹುದೂರ ಉಳಿಸಿದ್ದಾರೆ. ತಪ್ಪು ಪುರುಷನಿಂದ ನಡೆದರೂ ಆತ ಶಿಕ್ಷೆ ಅನುಭವಿಸಲೇಬೇಕು ಎಂಬ ಆಶಯ ಇಲ್ಲಿ ಕವಿಯದ್ದು. ಆರಂಭದಲ್ಲಿ ಇಂದ್ರನ ಕುಟಿಲತೆಯನ್ನು ತಿಳಿಯದ ಅಹಲ್ಯೆ ಕೊನೆಗೆ ತಿಳಿದೂ ಆತನನ್ನು ಅಪೇಕ್ಷಿಸುತ್ತಾಳೆ. ಇಲ್ಲಿ ಕವಿಗೆ ದೇವೇಂದ್ರನನ್ನು ವಂಚಕನನ್ನಾಗಿ ನಿರೂಪಿಸುವ ಉದ್ದೇಶವಿಲ್ಲ. ಅಹಲ್ಯೆ, ಇಂದ್ರರ ಒಪ್ಪಿಗೆಯ ಮೇರೆಗೆ ನಡೆದ ಅಪರಾಧ ಎಂಬಂತೆ ನಿರೂಪಿಸಿದ್ದಾರೆ. ಗೌತಮನನ್ನು ಅಗಲಿದ ಕುರಿತು ಅಹಲ್ಯೆಗೆ ವೇದನೆ ಇದೆ. ಈ ಅಂತರಂಗದ ಭಾವವನ್ನು ರಾಮನೊಂದಿಗೆ ಹಂಚಿಕೊಂಡಿದ್ದಾಳೆ. ಪತಿಯಾದವ ಪತ್ನಿಯನ್ನು ದಂಡಿಸುವ ಹಕ್ಕು ಪಡೆದಿರುತ್ತಾನೆ. ಅದರಲ್ಲೂ ಗೌತಮನು ಮಹರ್ಷಿ. ಅವನಿಗೆ ಈ ಹಕ್ಕು ಇದ್ದೇ ಇದೆ ಎಂಬುದು ಸಾಮಾಜಿಕ ಅಭಿಪ್ರಾಯ. ಆದರೆ ಮಹಾನ್ವೇಷಣಂನ ಕವಿ ಈ ಕಲ್ಪನೆಯನ್ನು ಒಡೆದಿದ್ದಾರೆ. ಅಹಲ್ಯೆಯನ್ನು ಶಪಿಸುವ ಸಂದರ್ಭ ಇಲ್ಲಿಲ್ಲ. ಒಮ್ಮೆ ನಡೆದ ತಪ್ಪನ್ನು ತಿದ್ದಿಕೊಳ್ಳಲು ಇಲ್ಲಿ ಅಹಲ್ಯೆಗೆ ಅವಕಾಶ ನೀಡಲಾಗಿದೆ. ಸ್ವಯಂ ತಪಸ್ವಿನಿಯಾಗುವ ಮೂಲಕ ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಕಂಡುಕೊಳ್ಳುವ ಉದ್ದೇಶ ಇಲ್ಲಿ ಅಹಲ್ಯೆಗೆ ಇದೆ. ಹಾಗಾಗಿ ಶಿಷ್ಟ ಸಂಪ್ರದಾಯದ ಸಾಂಪ್ರದಾಯಿಕ ತಿರುಳನ್ನು ಇಲ್ಲಿ ಒಡೆಯಲಾಗಿದೆ ಎಂದೇ ಹೇಳಬೇಕು.

ಅಹಲ್ಯೆ ಮತ್ತು ಇಂದ್ರರ ಪ್ರಸಂಗ ನಿರೂಪಣೆಯಲ್ಲಿ ಮಹಾನ್ವೇಷಣಂ ಮಾಹಾಕಾವ್ಯದ ಕವಿ ಉತ್ಪ್ರೇಕ್ಷೆ ಮತ್ತು ಪೂರ್ವಗ್ರಹಗಳಿಂದ ಬಹುದೂರ ಉಳಿದಿದ್ದಾರೆ. ಅಹಲ್ಯೆ ಮತ್ತು ಇಂದ್ರರ ಪ್ರಸಂಗ ನಿರೂಪಣೆಗೆ ಸಂಬಂಧಿಸಿದಂತೆ ಕವಿ ವಾಸ್ತವಕ್ಕೆ ತೀರಾ ಸಮೀಪದಲ್ಲಿದ್ದಾರೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಬಹುತೇಕ ರಾಮಾಯಣಗಳು ಅಹಲ್ಯೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಉದಾರಭಾವ ತಳೆದಿಲ್ಲ ಎಂಬುವುದು ಸ್ಪಷ್ಟವಾಗುತ್ತದೆ. ಅಹಲ್ಯೆಯನ್ನು ದೋಷಿಯನ್ನಾಗಿಸುವ ಭರದಲ್ಲಿ ಇಂದ್ರನನ್ನು ನಿರಪರಾಧಿ ಎಂಬಂತೆ ನಿರೂಪಿಸಿದೆ. ಅಹಲ್ಯೆಯನ್ನು ಗೌತಮನಿಂದ ಶಾಪಗ್ರಸ್ಥಳನ್ನಾಗಿಸುವ ತುಡಿತದಲ್ಲಿ ಇಂದ್ರನಿಗೆ ಕ್ಷಮೆ ನೀಡಿದೆ. ಈ ನೆಲೆಯಲ್ಲಿ ಶಿಷ್ಟ ರಾಮಾಯಣ ಪರಂಪರೆ ಮಹಿಳಾಸಮುದಾಯದ ಕುರಿತು ತಳೆದಿರುವ ತಾತ್ಸಾರಭಾವ ಅಭಿವ್ಯಕ್ತಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಶಿಷ್ಟ ರಾಮಾಯಣ ಪರಂಪರೆ ಎಲ್ಲಾ ಸಾಮಾಜಿಕ ಅವಕಾಶಗಳನ್ನು ಪುರುಷಸಮುದಾಯಕ್ಕೆ ನೀಡಿತ್ತು ಎಂಬುದು

ಸ್ಪಷ್ಟವಾಗುತ್ತದೆ. ಮಾತ್ರವಲ್ಲ ಪುರುಷನ ನೆಲೆಯಿಂದ ನಡೆಯುವ ತಪ್ಪನ್ನು ತಪ್ಪೆಂದು ಪರಿಗ್ರಹಿಸದ ಮಟ್ಟಕ್ಕೆ ಶಿಷ್ಟ ರಾಮಾಯಣಗಳು ನಿಂತುಬಿಟ್ಟಿವೆ. ಆದರೆ ಅಹಲ್ಯೆ ಮತ್ತು ಇಂದ್ರರ ಪ್ರಸಂಗ ನಿರೂಪಣೆಗೆ ಸಂಬಂಧಿಸಿದಂತೆ ಇಲ್ಲಿನ ಕವಿ ಶಿಷ್ಟ ರಾಮಾಯಣ ಪರಂಪರೆಯ ಸಾಂಪ್ರದಾಯಿಕ ನಿಲುವನ್ನು ಒಡೆದಿದ್ದಾರೆ. ಅಹಲ್ಯೆಯ ಪಾತ್ರ ನಿರ್ಮಿತಿಯಲ್ಲಿ ಕವಿ ಉದಾರತೆ ತಳೆದಿದ್ದಾರೆ. ಆದರೆ ಈ ಉದಾರಭಾವ ಎಲ್ಲಿಯೂ ವೈಭವೀಕರಣದ ನೆಲೆಯಲ್ಲಿ ಕಾಣಿಸಿಲ್ಲ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಅಹಲ್ಯೆಯ ಪ್ರಸಂಗಕ್ಕೆ ವಿಶೇಷ ಸ್ಥಾನಮಾನ ಇಲ್ಲ. ಆದರೆ ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರು ಅಹಲ್ಯೆಯ ಪ್ರಸಂಗ ನಿರೂಪಣೆಯಲ್ಲಿ ವಿಶೇಷ ಆಸಕ್ತಿ ತಾಳಿದ್ದಾರೆ. ವಿವಾಹಪೂರ್ವದ ಸಂದರ್ಭದಲ್ಲಿ ಅಹಲ್ಯೆ ಒಮ್ಮೆ ಮಾನಸಿಕವಾಗಿ ಇಂದ್ರನನ್ನು ಬಯಸಿದ್ದಳು. ಅವಳ ಮನದ ಆಳದಲ್ಲಿ ಇಂದ್ರನಿಗೆ ಸ್ಥಾನ ಇತ್ತು. ವಿವಾಹದ ಬಳಿಕ ಇಂದ್ರನ ಕುಟಿಲತಂತ್ರ ತಿಳಿದೂ ಆಕೆಗೆ ಸನ್ನಿವೇಶದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇದರ ಪರಿಣಾಮವೇ ಅಹಲ್ಯೆ ಅರಿವಿದ್ದು ಇಂದ್ರನನ್ನು ಬಯಸುವಂತಾಯಿತು ಎಂಬುದನ್ನು ಕವಿ ನಿರೂಪಿಸಿದ್ದಾರೆ. ಮೊದಲು ಇಂದ್ರನನ್ನು ಗೌತಮ ಮಹರ್ಷಿ ಎಂದು ಬಗೆದ ಅಹಲ್ಯೆ ಕೊನೆಗೆ ಆತ ಇಂದ್ರನೆಂಬುದನ್ನು ತಿಳಿದಾಗಿಯೂ ಆತನನ್ನು ಅಪೇಕ್ಷಿಸುತ್ತಾಳೆ. ಈ ಸಂದರ್ಭದ ನಿರೂಪಣೆಯನ್ನು ತಪ್ಪಿಸುವ ಯೋಚನೆಯಾಗಲಿ ಅಥವಾ ಅಹಲ್ಯೆಯನ್ನು ಮುಗ್ಧೆಯನ್ನಾಗಿ ನಿರೂಪಿಸುವ ತಂತ್ರಗಾರಿಕೆಯಾಗಲಿ ಕವಿಗೆ ಇಲ್ಲ ಎಂದೇ ಹೇಳಬೇಕು. ಏಕೆಂದರೆ ಸ್ತ್ರೀಸಂವೇದನೆಯ ನೆಲೆಯಲ್ಲಿ ರಾಮಾಯಣದ ಮಹಿಳಾ ಪಾತ್ರಗಳನ್ನು ಕಟ್ಟಿದ ಕವಿಯ ಮೇಲೆ ಆಧುನಿಕ ಸಂದರ್ಭದ ಪ್ರಭಾವವಿದೆ. ಸ್ತ್ರೀಸಮುದಾಯದ ಕುರಿತು ಕವಿಗಿರುವ ವಿಶೇಷ ಕಳಕಳಿ 'ಶ್ರೀ ರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಅಹಲ್ಯೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿ ಕೃತಕ ಚಿಂತನೆಗಳಿಂದ ಬಹುದೂರ ಉಳಿದಿದ್ದಾರೆ. ಸ್ತ್ರೀಸಂವೇದನೆಯ ನೆಲೆಯಲ್ಲಿ ಅಹಲ್ಯೆಯ ಪಾತ್ರ ನಿರೂಪಿಸುವ ಕವಿಗೆ ಅಹಲ್ಯೆಯನ್ನು ನಿರ್ದೋಷಿಯನ್ನಾಗಿ ನಿರೂಪಿಸಬಹುದಿತ್ತು. ಪುರುಷಸಮುದಾಯ ತನ್ನ ಅನುಕೂಲಕ್ಕೆ ತಕ್ಕಂತೆ ಹೇಗೆ ಮಹಿಳಾಸಮುದಾಯವನ್ನು ಬಳಸಿಕೊಳ್ಳುತ್ತದೆ ಎಂಬುದನ್ನು ಹೇಳಬಹುದಿತ್ತು. ಆದರೆ ಈ ಕಾವ್ಯದ ಕವಿ ಈ ರೀತಿ ನಿರೂಪಿಸಿಲ್ಲ. ಅಹಲ್ಯೆಯ ಬದುಕನ್ನು ನಿರೂಪಿಸುವ ಭರದಲ್ಲಿ ಕವಿ ವಾಸ್ತವಪ್ರಜ್ಞೆಯಿಂದ ದೂರ ಉಳಿದಿಲ್ಲ. ಸಾಮಾಜಿಕ ವಿಶ್ಲೇಷಣೆಯ ದೃಷ್ಟಿಕೋನದ ನೆಲೆಯಲ್ಲಿ ಅಹಲ್ಯೆಯ ಬದುಕನ್ನು ನಿರ್ವಚಿಸಿದ್ದಾರೆ. ಗೌತಮ ಅಹಲ್ಯೆಯನ್ನು ಶಪಿಸುವ ಪ್ರಸಂಗವನ್ನು ತಪ್ಪಿಸಿ ಅಹಲ್ಯೆ ಸ್ವಯಂ ತಪಸ್ವಿನಿಯಾಗುವಂತೆ ನಿರೂಪಿಸಿದ್ದಾರೆ.

ಅಹಲ್ಯೆಯ ಪಾತ್ರ ನಿರ್ಮಿತಿಗೆ ಸಂಬಂಧಿಸಿದಂತೆ ಕವಿ ವಾಸ್ತವಕ್ಕೆ ತೀರಾ ಸಮೀಪದಲ್ಲಿ ಇದ್ದಾರೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಅಹಲ್ಯೆಯ ಪ್ರಸಂಗಕ್ಕೆ ವಿಶೇಷ ಸ್ಥಾನಮಾನ

ಇಲ್ಲ. ಆದರೆ ಕವಿ ಅಹಲ್ಯೆಯ ಪ್ರಸಂಗ ನಿರೂಪಣೆಯಲ್ಲಿ ವಿಶೇಷ ಆಸಕ್ತಿ ತಾಳಿದ್ದಾರೆ. ವಿವಾಹಪೂರ್ವದ ಸಂದರ್ಭದಲ್ಲಿ ಅಹಲ್ಯೆ ಒಮ್ಮೆ ಮಾನಸಿಕವಾಗಿ ಇಂದ್ರನನ್ನು ಬಯಸಿದ್ದಳು. ಅವಳ ಮನದ ಆಳದಲ್ಲಿ ಇಂದ್ರನಿಗೆ ಸ್ಥಾನ ಇತ್ತು. ವಿವಾಹದ ಬಳಿಕ ಇಂದ್ರನ ಕುಟಿಲತಂತ್ರ ತಿಳಿದೂ ಆಕೆಗೆ ಸನ್ನಿವೇಶದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇದರ ಪರಿಣಾಮವೇ ಅಹಲ್ಯೆ ಅರಿವಿದ್ದೂ ಇಂದ್ರನನ್ನು ಬಯಸುವಂತಾಯಿತು ಎಂಬುದನ್ನು ಕವಿ ನಿರೂಪಿಸಿದ್ದಾರೆ.

ಅಹಲ್ಯಾ ವೃತ್ತಾಂತಕ್ಕೆ ಸಂಬಂಧಿಸಿದಂತೆ ಈ ಕಾವ್ಯದ ಸನ್ನಿವೇಶಗಳು ವಾಸ್ತವತೆಯ ನೆಲೆಯಲ್ಲಿ ನಿರೂಪಿತಗೊಂಡಿದೆ. ಇಲ್ಲಿ ಅಹಲ್ಯೆ ಗೌತಮನ ತಿರಸ್ಕಾರಕ್ಕೆ ಒಳಗಾಗಿಲ್ಲ. ಅವಳ ತಪಸ್ಸು ಸ್ವಂತಿಕೆಯ ನೆಲೆಯಿಂದ ಕೈಗೊಂಡ ತೀರ್ಮಾನ. ಹಾಗಾಗಿ ಈ ತೀರ್ಮಾನ ಸಾಧನೆಯ ನೆಲೆಯಲ್ಲಿ ಕಾಣಿಸಿದೆ. ತನ್ನಿಂದಾದ ತಪ್ಪಿಗೆ ತಾನೇ ತಪಸ್ವಿನಿಯಾಗುವ ತೀರ್ಮಾನ ಕೈಗೊಂಡ ಅಹಲ್ಯೆ ಮಹಾನ್ ಸಾಧಕಿಯಾಗಿ ಕಾಣಿಸಿದ್ದಾಳೆ.

**೫.೩.೮ ತ್ರಿಜಟೆ**

ಈ ಕಾವ್ಯದ ತ್ರಿಜಟೆಯ ವ್ಯಕ್ತಿತ್ವ ಸ್ವತಂತ್ರ ಮಾದರಿಯ ಪಾತ್ರಕ್ಕೆ ಒಂದು ಪ್ರತ್ಯಕ್ಷ ನಿದರ್ಶನ. ತ್ರಿಜಟೆಗೆ ಸ್ವತಂತ್ರ ನಿಲುವಿದೆ. ಸ್ವಂತಿಕೆಯ ನೆಲೆಯಿಂದ ತೀರ್ಮಾನ ಕೈಗೊಳ್ಳುವ ಸಾಮರ್ಥ್ಯ ಮತ್ತು ಮನಸ್ಥಿತಿ ಇದೆ. ಈ ಹಿನ್ನೆಲೆಯಲ್ಲಿ ಸೀತೆಯ ತೀರ್ಮಾನದ ಕುರಿತು ತ್ರಿಜಟೆಗೆ ಅಭಿಮಾನ ಇದೆ. ಅವಳ ಅಂತರಂಗದ ಭಾವವನ್ನು ಅರ್ಥೈಸಿಕೊಂಡ ತ್ರಿಜಟೆ ಸೀತೆಯನ್ನು ಗೌರವಿಸುತ್ತಾಳೆ. ರಾವಣನನ್ನು ಒಲಿಸಿಕೊಳ್ಳುವಂತೆ ಎಲ್ಲಿಯೂ ಸೀತೆಯನ್ನು ಒತ್ತಾಯಿಸುವುದಿಲ್ಲ. ರಾವಣನಿಗೆ ಸೀತೆಯ ಶಕ್ತಿ, ಪಾತಿವ್ರತ್ಯ ಮತ್ತು ಮಾನಸಿಕ ಪರಿಶುದ್ಧತೆಯ ಮನವರಿಕೆ ಮಾಡಲು ಯತ್ನಿಸುತ್ತಾಳೆ. ಈ ಹಿನ್ನೆಲೆಯಲ್ಲಿ ರಾವಣನಿಗೆ ಉಪದೇಶ ನೀಡುವ ಪ್ರೌಢ ವ್ಯಕ್ತಿತ್ವವಾಗಿ ತ್ರಿಜಟೆಯನ್ನು ನಿರೂಪಿಸಲಾಗಿದೆ.

ರಾವಣನೊಂದಿಗೆ ಅವನ ವ್ಯಾಪ್ತಿಗೆ ಒಳಪಡುವ ಮಹಿಳಾಸಮುದಾಯವನ್ನು ಅತ್ಯುನ್ನತ ನೆಲೆಯಲ್ಲಿ ನಿರೂಪಿಸುವ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ವೀರಪ್ಪ ಮೊಯಿಲಿಯವರದ್ದು. ಹಾಗಾಗಿ ಒಬ್ಬ ಸಾಮಾನ್ಯ ಸ್ತ್ರೀ ತ್ರಿಜಟೆಯ ಮೂಲಕ ರಾವಣನಿಗೆ ಬುದ್ಧಿವಾದದ ಮಾತುಗಳನ್ನು ಹೇಳಿಸುವ ಕೆಲಸವನ್ನು ಕವಿ ಮಾಡಿದ್ದಾರೆ. ಹಾಗಾಗಿ ಸಾಮಾನ್ಯ ಸ್ತ್ರೀ ತ್ರಿಜಟೆ ಇಲ್ಲಿ ಅಸಾಮಾನ್ಯ ವ್ಯಕ್ತಿತ್ವದವಳಾಗಿ ಕಾಣಿಸಿದ್ದಾಳೆ.

ರಾವಣನ ಕೋಪಾಟೋಪವನ್ನು ತಡೆಯುವ ವ್ಯಕ್ತಿತ್ವವಾಗಿ ಮಹಾನ್ವೇಷಣಂನಲ್ಲಿ ತ್ರಿಜಟೆ ಕಾಣಿಸಿದ್ದಾಳೆ. ಸೀತೆಯ ಮಾನಸಿಕ ಬೇಗೆಯನ್ನು ಅರ್ಥೈಸಿಕೊಂಡು, ಅವಳಿಗೆ ಸ್ಪಂದಿಸಿ,

ಸಾಂತ್ವನ ಹೇಳುವ ಪ್ರೌಢಮಹಿಳೆಯಾಗಿ ತ್ರಿಜಟೆ ನಿರೂಪಿತಳಾಗಿದ್ದಾಳೆ. ಸೀತೆಯನ್ನು ಕೆಣಕಿದರೆ ನಾಶಕ್ಕೆ ಗುರಿಯಾಗುವೆ ಎಂಬ ಎಚ್ಚರಿಕೆಯ ಮಾತುಗಳು ತ್ರಿಜಟೆಯಿಂದ ಕೇಳಿಬಂದಿದೆ. ಹಾಗಾಗಿ ವಾಸ್ತವಪ್ರಜ್ಞೆಯೊಂದಿಗೆ ಸ್ತ್ರೀಸಂವೇದನೆಯನ್ನು ಅರ್ಥೈಸಿಕೊಳ್ಳಬಲ್ಲ ವಿಶಿಷ್ಟ ವ್ಯಕ್ತಿತ್ವವಾಗಿ ತ್ರಿಜಟೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕಾಣಿಸಿದ್ದಾಳೆ.

ರಾವಣನ ಹಂಗಿಗೆ ಒಳಗಾಗಿ ಅವನ ಆಜ್ಞೆಯನ್ನು ಪಾಲಿಸಲೇಬೇಕು ಎಂಬ ಹಟವಾಗಲಿ, ಛಲವಾಗಲಿ ತ್ರಿಜಟೆಯಲ್ಲಿ ಇಲ್ಲ. ಅನ್ನದ ಹಂಗಿಗಾಗಿ ಮಾನವೀಯತೆಯನ್ನು ತೊರೆಯುವ ವ್ಯಕ್ತಿತ್ವ ಆಕೆಯದಲ್ಲ. ಅವಳ ತೀರ್ಮಾನ ನ್ಯಾಯಪರವಾದದ್ದು. ಸತ್ಯದ ಪರವಾದದ್ದು. ಮಾನವತ್ವದ ನೆಲೆಯಲ್ಲಿ ಬದುಕನ್ನು ಕಟ್ಟಿಕೊಳ್ಳುವ ವ್ಯಕ್ತಿತ್ವ ಮತ್ತು ಉದ್ದೇಶ ಆಕೆಗೆ ಇದೆ. ಹಾಗಾಗಿ ಸೀತೆಗೆ ಸ್ನೇಹದ ಸಖ್ಯವನ್ನು ನೀಡಿದ ತ್ರಿಜಟೆ ಉದಾತ್ತ ಮಹಿಳೆಯಾಗಿ ಕಾಣಿಸಿದ್ದಾಳೆ. ತಾಯಿಯಾದವಳು ತನ್ನ ಮಗಳಿಗೆ ಹೇಗೆ ಸಾಂತ್ವನ ನೀಡಿ ಧೈರ್ಯ ತುಂಬುತ್ತಾಳೋ ಇಲ್ಲಿ ತ್ರಿಜಟೆಯೂ ಹಾಗೆಯೇ ಮಾಡಿದ್ದಾಳೆ. ತನ್ನ ಅಭಿಪ್ರಾಯವನ್ನು ಸೀತೆಯ ಎದುರಾಗಲಿ, ರಾವಣನ ಎದುರಾಗಲಿ ವ್ಯಕ್ತಪಡಿಸುವಲ್ಲಿ ಆಕೆಗೆ ಯಾವುದೇ ಹಿಂಜರಿಕೆ ಇಲ್ಲ. ತಾನು ನ್ಯಾಯದ ಪರವಾಗಿ ಇರುವೆನು ಎಂಬ ಆತ್ಮಸಾಕ್ಷಿ ಅವಳಲ್ಲಿ ಇದೆ. ಹಾಗಾಗಿ ತ್ರಿಜಟೆ ಸತ್ಯಶೋಧಕಿಯಾಗಿ ಕಾಣಿಸಿದ್ದಾಳೆ. ರಾವಣನನ್ನು ತನ್ನ ಬುದ್ಧಿಶಕ್ತಿಯ ನೆಲೆಯಿಂದ ಎಚ್ಚರಿಸುವ ತ್ರಿಜಟೆಗೆ ತನ್ನದೇ ಆದ ನೀತಿಸಿದ್ಧಾಂತವಿದೆ. ಈ ಸಿದ್ಧಾಂತ ಬದುಕನ್ನು ಸಂಸ್ಕಾರಬದ್ಧಗೊಳಿಸುವ ಮಾದರಿಯಲ್ಲಿ ಇದೆ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತ್ರಿಜಟೆಯ ವ್ಯಕ್ತಿತ್ವ ಅನುಕರಣೀಯ ಮಾದರಿಯಲ್ಲಿ ಇದೆ. ಅಂತರಂಗದ ಸಾಕ್ಷಾತ್ಕಾರದಿಂದ ಬದುಕಿನ ಸಾರ್ಥಕತೆಯ ದಿಕ್ಕಿನಲ್ಲಿ ಸಾಗುವ ಆಕೆಯ ಪಾತ್ರ ಬದುಕಿನ ಅರ್ಥವಂತಿಕೆಯ ಕುರಿತು ಮಾತಾಡುತ್ತದೆ. ರಾವಣನು ಸೀತೆಯನ್ನು ಅಪಹರಿಸಿ ಬಂಧಿಸಿದ ಸಂದರ್ಭಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ ತ್ರಿಜಟೆ ತನ್ನದೇ ಆದ ವಿಶಿಷ್ಟ ನಿಲುವನ್ನು ಅಭಿವ್ಯಕ್ತಿಸಿದ್ದಾಳೆ. ಹೀಗೆ ನಿರಾಳವಾಗಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವಲ್ಲಿ ತ್ರಿಜಟೆಗೆ ಯಾವುದೇ ಅಳುಕಿಲ್ಲ. ಸ್ವತಂತ್ರ ಚಿಂತನೆಯಿಂದ, ನಿರ್ಧಾರಗಳಿಂದ ಸ್ವಂತಿಕೆಯ ವಿಚಾರವಂತಿಕೆಯನ್ನು ಅಭಿವ್ಯಕ್ತಿಸುವ ತ್ರಿಜಟೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸ್ವತಂತ್ರ ಮಾದರಿಯ ಪಾತ್ರಕ್ಕೆ ಒಂದು ನಿದರ್ಶನ.

**೫.೩.೯ ಸುರಮೆ**

ಸೀತೆಯನ್ನು ನೋಡಿಕೊಳ್ಳಲು ರಾವಣನು ನೇಮಿಸಿದ ಕೆಲವು ದಾಸಿಯರಲ್ಲಿ ಸುರಮೆಯೂ ಒಬ್ಬಳು. ಈಕೆ ಸೀತೆಯ ಆಪ್ತಸಖಿ. ಸೀತೆಗೆ ಘಾಸಿಯಾಗದಂತೆ ನಡೆದುಕೊಳ್ಳುತ್ತಾ

ಸೇವೆಗೈದವಳು ಸುರಮೆ. ರಾಮ-ರಾವಣರ ಯುದ್ಧದ ಸಂದರ್ಭದಲ್ಲಿ ಆದ ಬೆಳವಣಿಗೆಯನ್ನು ವರದಿ ರೂಪದಲ್ಲಿ ಸೀತೆಗೆ ನೀಡಿದವಳು. ಸೀತೆಯ ಜೊತೆಗೆ ಇದ್ದು ಅವಳ ಒಡನಾಟದ ಸಖ್ಯವನ್ನು ಅನುಭವಿಸಿದ ಸುರಮೆಗೆ ಸೀತೆಯ ಸದ್ಗುಣಗಳ ಅರಿವು ಇದೆ. ತನ್ನ ಕರ್ತವ್ಯಕ್ಕೆಚ್ಯುತಿ ಬಾರದಂತೆ ಸೀತೆಯನ್ನು ಆರೈಕೆ ಮಾಡಿದವಳು. ಸುರಮೆ ಲಂಕಾಸಾಮ್ರಾಜ್ಯದವಳಾದರೂ ರಾವಣನ ಪರವಹಿಸಿದವಳಲ್ಲ. ರಾವಣನಲ್ಲಿ ಅಡಕವಾಗಿರುವ ರಾವಣತ್ವವನ್ನು ಅರಿತ ಸುರಮೆಗೆ ಸೀತೆಯ ಒಳತೋಟಿಯ ಅರಿವಿದೆ. ಹಾಗಾಗಿ ರಾವಣನ ಸೋಲನ್ನು ಅಪೇಕ್ಷಿಸುತ್ತಾ ಸೀತೆ ರಾಮನನ್ನು ಸೇರುತ್ತಾಳೆ ಎಂಬ ವಾಸ್ತವವನ್ನು ಅರಿತ ಸುರಮೆ ಈ ನಿರೀಕ್ಷೆಯಲ್ಲೇ ಕಾಲ ಕಳೆಯುತ್ತಾಳೆ. ತನ್ನ ನಿರೀಕ್ಷೆ ಹುಸಿಯಾಗಲಾರದು ಎಂಬ ನಂಬಿಕೆ ಸುರಮೆಯಲ್ಲಿ ಇದೆ. ರಾವಣ ಲಂಕಾಸಾಮ್ರಾಜ್ಯದ ಅಧಿಪತಿಯಾದರೂ ಅವನ ದಾನವತ್ವದ ಕುರಿತು ಆಕೆಗೆ ಖೇದವಿದೆ. ರಾವಣ ರಾಮನಿಗೆ ಶರಣಾದರೆ ಬದುಕಿ ಉಳಿಯಬಲ್ಲ ಎಂಬ ಅಪೇಕ್ಷೆಯೂ ಆಕೆಯಲ್ಲಿ ಇದೆ. ಹಾಗಾಗಿ ಇಲ್ಲಿ ಸುರಮೆ ರಾಮನನ್ನು ಸತ್ಯ ಮತ್ತು ನ್ಯಾಯದ ಪ್ರತಿನಿಧಿಯಾಗಿಯೂ ರಾವಣನನ್ನು ಅಸತ್ಯ ಮತ್ತು ಅನ್ಯಾಯದ ಪ್ರತಿರೂಪವಾಗಿಯೂ ಸ್ವೀಕರಿಸಿದ್ದಾಳೆ. ಈ ಹಿನ್ನೆಲೆಯಲ್ಲಿ ರಾಮನಿಂದ ಲಂಕಾಸಾಮ್ರಾಜ್ಯ ಪುನೀತವಾಗಬೇಕು ಎಂಬ ಆಶಯ ಸುರಮೆಯದು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಬಹುತೇಕ ಪಾತ್ರಗಳಲ್ಲಿ ಸ್ತ್ರೀಸಂವೇದನೆ ಅಭಿವ್ಯಕ್ತಗೊಂಡಿದೆ. ಈ ಬಗೆಯ ನಿರೂಪಣೆಯ ಹಿಂದೆ ಕವಿಯ ಸಂವೇದನಾಶೀಲ ಮನಸ್ಸು ಚಾಲನೆ ನೀಡಿದೆ ಎನ್ನಬೇಕು. ಏಕೆಂದರೆ ರಾಜಕುಟುಂಬದಿಂದ ಬಂದ ಸೀತೆಯ ಅಳಲನ್ನು ಅರಿತುಕೊಳ್ಳುವಲ್ಲಿ ಲಂಕಾಸಾಮ್ರಾಜ್ಯದ ದಾಸಿಯರು ಸಫಲರಾಗಿದ್ದಾರೆ. ತನ್ನ ಅಹಂಮಿಕೆಯನ್ನು ತೊರೆದು ದಾಸಿಯರ ಸಖ್ಯ ಬೆಳೆಸುವಲ್ಲಿ ಸೀತೆ ಯಶಸ್ವಿಯಾಗಿದ್ದಾಳೆ. ಹಾಗಾಗಿ ಇಲ್ಲಿ ಪರಸ್ಪರ ಸ್ತ್ರೀಸಂವೇದನೆಯ ಅರಿಯುವಿಕೆ ಸಾಧ್ಯವಾಗಿದೆ. ಹೀಗೆ ಮಹಿಳಾಸಮುದಾಯದ ಅಂತರಂಗದ ತುಡಿತವನ್ನು ಪರಸ್ಪರ ಅರಿಯುವಲ್ಲಿ ರಾಣಿ-ದಾಸಿ ಎಂಬ ಭೇದವನ್ನು ಕವಿ ತೊಡೆದಿದ್ದಾರೆ. ಒಬ್ಬ ರಾಣಿಯ ಅಂತರಂಗದ ಭಾವವನ್ನು ಇನ್ನೊಬ್ಬ ರಾಣಿಯೇ ಅರಿಯಬೇಕು ಎಂಬ ಪೂರ್ವಗ್ರಹವಾಗಲಿ, ಒಬ್ಬ ದಾಸಿಯ ಸಖ್ಯವನ್ನು ಇನ್ನೊಬ್ಬ ದಾಸಿಯೇ ಬಯಸಬೇಕು ಎಂಬ ಗ್ರಹಿಕೆಯಾಗಲಿ ಇಲ್ಲಿ ಇಲ್ಲ. ಸ್ನೇಹ ಹಾಗೂ ಸಂಗಾತಿತನವನ್ನು ಯಾರು ಯಾರಿಂದಲೂ ಬಯಸಬಹುದು ಎಂಬುದನ್ನು ಕವಿ ಸ್ಪಷ್ಟಪಡಿಸಿದ್ದಾರೆ. ಸ್ತ್ರೀಸಂವೇದನೆಯ ಆಳವನ್ನು ಅರಿಯುವಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಸಮುದಾಯ ಸಫಲವಾಗಿದೆ. ರಾವಣನಿಗೆ ಲಂಕೆಯ ಮೇಲೆ ವ್ಯಾಮೋಹ ಇತ್ತು. ಅಯೋಧ್ಯೆಯ ಮೇಲೆ ದ್ವೇಷ ಇತ್ತು. ಅಂದಮಾತ್ರಕ್ಕೆ ಲಂಕಾಸಾಮ್ರಾಜ್ಯದ ಪ್ರಜೆಗಳೆಲ್ಲ ಅಯೋಧ್ಯೆಯನ್ನು ತಿರಸ್ಕರಿಸಬೇಕು ಎಂಬ

ಆಶಯ ಇಲ್ಲಿ ವ್ಯಕ್ತವಾಗಿಲ್ಲ. ಈ ವಿಚಾರದ ನಿರೂಪಣೆಯಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕವಿ ಸೀಮಿತ ಚೌಕಟ್ಟನ್ನು ಮೀರಿ ವಿಶ್ವಾತ್ಮಕ ನೆಲೆಯಲ್ಲಿ ಚಿಂತನೆ ನಡೆಸಿದ್ದಾರೆ. ಹಾಗಾಗಿ ಲಂಕಾಸಾಮ್ರಾಜ್ಯದಲ್ಲೂ ಮಾನವತ್ವದ ನೆಲೆಗಳನ್ನು ಗುರುತಿಸಲು ಸಾಧ್ಯ ಎಂಬುದನ್ನು ಈ ಮಹಾಕಾವ್ಯದ ಕೆಲವು ಪಾತ್ರಗಳ ಮೂಲಕ ಕಟ್ಟಿಕೊಟ್ಟಿದ್ದಾರೆ.

ಸೀತೆಯನ್ನು ಅಶೋಕವನದಲ್ಲಿ ಬಂಧಿಸಿಟ್ಟ ರಾವಣ ಸೀತೆಯನ್ನು ಚೆನ್ನಾಗಿ ನೋಡಿಕೊಳ್ಳುವಂತೆ ಆಜ್ಞಾಪಿಸುತ್ತಾನೆ. ಹಾಗಾಗಿ ಸೀತೆಯನ್ನು ಪ್ರೀತಿಪೂರ್ವಕವಾಗಿ ನಡೆಯಿಸಿಕೊಂಡ ದಾಸಿ ಸುರಮೆಗೆ ವಾಸ್ತವವಾಗಿ ಸೀತೆಯ ಮೇಲೆ ಅಪಾರ ಗೌರವ ಇತ್ತು. ಸೀತೆಯ ಸಂಗಾತಿತನ ಬಯಸಲು ರಾವಣನ ಆಜ್ಞೆ ಇನ್ನಷ್ಟು ಪುಷ್ಠಿ ನೀಡಿತು ಎನ್ನಬೇಕು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸುರಮೆಯ ಪಾತ್ರ ಸ್ವತಂತ್ರ ಮಾದರಿಯ ಪಾತ್ರಕ್ಕೆ ಒಂದು ಉತ್ತಮ ನಿದರ್ಶನ. ಸೀತೆಯನ್ನು ಗೌರವ ಆದರಗಳಿಂದ ಉಪಚರಿಸಿದ ಸುರಮೆಗೆ ತನ್ನದೇ ಆದ ವಿಶಿಷ್ಟ ನಿಲುವು ಇದೆ. ರಾವಣ ಸೀತೆಯನ್ನು ಅಪಹರಿಸಿದ ವಿಚಾರದ ಕುರಿತು ಈಕೆಗೆ ಪಶ್ಚಾತ್ತಾಪ ಇದೆ. ರಾವಣನಿಂದ ಸೀತೆಯನ್ನು ಹೇಗಾದರೂ ಮಾಡಿ ಬಿಡುಗಡೆಗೊಳಿಸಿ ರಾಮನೊಂದಿಗೆ ಸೇರಿಸಬೇಕು ಎಂಬ ಆಶಯವಿದೆ. ಈ ಉದಾತ್ತ ಆಶಯ ಸುರಮೆಯ ಸ್ವತಂತ್ರ ಚಿಂತನೆಯ ನೆಲೆಯಿಂದ ಹೊಮ್ಮಿದ್ದು. ಈ ಚಿಂತನೆಯ ಹಿಂದೆ ಯಾರ ಒತ್ತಾಸೆಯೂ ಇಲ್ಲ. ಸರಿ–ತಪ್ಪು, ನ್ಯಾಯ–ಅನ್ಯಾಯ, ಧರ್ಮ–ಅಧರ್ಮ, ಮಾನವೀಯತೆ–ಅಮಾನವೀಯತೆಯ ವ್ಯತ್ಯಾಸವನ್ನು ಅರಿತ ಸುರಮೆಗೆ ತನ್ನದೇ ಆದ ನೈತಿಕ ಸಿದ್ಧಾಂತವಿದೆ. ಆತ್ಮಸಾಕ್ಷಿಗೆ ವಿರುದ್ಧವಾಗಿ ಆಕೆ ಎಂದಿಗೂ ವರ್ತಿಸಲಾರಳು. ಹಾಗಾಗಿ ನ್ಯಾಯದ ಪರವಾಗಿಯೇ ಆಕೆ ತೀರ್ಮಾನ ತಳೆಯುತ್ತಾಳೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಕೇವಲ ರಾಣಿಯರನ್ನು ಮಾತ್ರ ಬೌದ್ಧಿಕ ಪ್ರೌಢಿಮೆಯ ನೆಲೆಯಲ್ಲಿ ನಿರೂಪಿಸುವ ಕೆಲಸ ಮಾಡಿಲ್ಲ. ಒಬ್ಬ ಸಾಮಾನ್ಯ ಸ್ತ್ರೀಯ ಬದುಕೂ ಅವರಿಗೆ ಪ್ರಧಾನ. ಹಾಗಾಗಿ ದಾಸಿಯರಾಗಲಿ, ರಾಣಿಯರಾಗಲಿ ಇವರೆಲ್ಲರ ಬದುಕನ್ನು ಎಲ್ಲೆಲ್ಲಿ, ಯಾವ್ಯಾವ ಸಂದರ್ಭದಲ್ಲಿ ಕೇಂದ್ರಕ್ಕೆ ತರಲು ಸಾಧ್ಯವೋ ಅಲ್ಲೆಲ್ಲಾ ಕೇಂದ್ರಕ್ಕೆ ತಂದಿದ್ದಾರೆ.

**೫.೩.೧೦ ಅನಲೆ**

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅನಲೆ ಸ್ವತಂತ್ರ ಮಾದರಿ ಪಾತ್ರಕ್ಕೆ ಒಂದು ಪ್ರತ್ಯಕ್ಷ ನಿದರ್ಶನ. ಅನಲೆಗೆ ಯಾರ ಮೇಲೂ ಆಕ್ರೋಶ ಇಲ್ಲ. ರಾವಣನ

ಕುರಿತು ವಿಶೇಷ ಗೌರವಭಾವ ತಳೆದಿರುವ ಅನಲೆಗೆ ಅವಳದ್ದೇ ಆದ ವಿಶಿಷ್ಟ ಚಿಂತನೆ ಇದೆ. ನೊಂದವರಿಗೆ ಸಾಂತ್ವನ ಹೇಳುವ ಅನಲೆ ರಾವಣನ ದುರ್ಗುಣಗಳ ಕುರಿತು ಪಶ್ಚಾತ್ತಾಪ ಪಡುತ್ತಾಳೆ. ಈ ಪಶ್ಚಾತ್ತಾಪದ ಹಿಂದೆ ರಾವಣನ ಉದ್ಧಾರದ ಆಶಯವೂ ಸೇರಿದೆ. ಯುದ್ಧರಂಗಭೂಮಿಯಲ್ಲಿ ಮಡಿದ ಸಹಸ್ರಾರು ಜೀವಗಳ ಕುರಿತು ಅನಲೆಗೆ ನೋವಿದೆ. ರಾವಣನಲ್ಲಿರುವ ರಾವಣತ್ವ ನಾಶವಾಗಬೇಕು. ಅಂತೆಯೇ ರಾಮನಲ್ಲಿ ಅಡಕವಾಗಿರುವ ರಾಮತ್ವ ಸರ್ವವ್ಯಾಪಿಯಾಗಬೇಕು ಎಂಬ ನಿಲುವು ಆಕೆಯದ್ದು. ಹಾಗಾಗಿ ಅನಲೆ ಸ್ವತಂತ್ರ ಚಿಂತನೆ ಮತ್ತು ಬುದ್ಧಿಶಕ್ತಿಯ ನೆಲೆಯಿಂದ ಪ್ರತಿಕ್ರಿಯಿಸಿದ್ದಾಳೆ.

ರಾಮ–ರಾವಣರ ಕಾಳಗ ತಪ್ಪಿಸಿ ಸಂಧಾನ ತರುವುದಾಗಿ ಸೀತೆಯ ಬಳಿ ಅನಲೆ ಹೇಳುತ್ತಾಳೆ. ಈ ಸಂಧಾನದ ಹಿಂದಿನ ಉದ್ದೇಶ ವಿಶಿಷ್ಟವಾದದ್ದು. ಯುದ್ಧದಲ್ಲಿ ರಾವಣ ಹತನಾಗುವನು ಎಂಬ ವಾಸ್ತವದ ಅರಿವು ಅನಲೆಗೆ ಇತ್ತು. ಹಾಗಾಗಿ ಸಾವಿನ ಅಂಜಿನಿಂದ ರಾವಣನನ್ನು ಮುಕ್ತಗೊಳಿಸುವ ಉದ್ದೇಶವಷ್ಟೇ ಅನಲೆಗೆ ಇರಲಿಲ್ಲ. ಹೆಣ್ಣು ಹೃದಯದ ಯುದ್ಧ ವಿರೋಧಿತನ ಹಾಗೂ ಶಾಂತಿಪರ ನಿಲುವಿಗೆ ಅನಲೆ ಸಂಕೇತವಾಗಿದ್ದಾಳೆ. ಯುದ್ಧ ತರುವ ಹಿಂಸೆ, ಸಾವು ತಂದೊಡ್ಡುವ ಅನಾಹುತದ ಅರಿವು ಇರುವುದರಿಂದಲೇ ಶಾಂತಿ ಮಾರ್ಗದ ನಡೆ ಅನಲೆಗೆ ಪ್ರೀತಿ. ಯುದ್ಧ ತಪ್ಪಿಸುವ ಮೂಲಕ ಸಮಷ್ಟಿ ಹಿತ ಸಾಧಿಸುವ ಉದ್ದೇಶ ಅನಲೆಗೆ ಇತ್ತು. ಹಾಗಾಗಿ ಅನಲೆಯ ಪಾತ್ರಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಮೂರು ಚಿಂತನೆಗಳನ್ನು ಪರಿಗ್ರಹಿಸಬಹುದು.

೧. ಯುದ್ಧದಿಂದ ಮಾನವಕುಲ ನಾಶ ಹೊಂದುವುದು ಎಂಬ ಪ್ರಜ್ಞೆ ಅನಲೆಯಲ್ಲಿ ಇತ್ತು.
೨. ರಾಮನ ಆದರ್ಶ, ತತ್ತ್ವ, ಸಿದ್ಧಾಂತಗಳು ರಾವಣನನ್ನು ಪ್ರಭಾವಿಸಬೇಕು ಎಂಬ ಉದ್ದೇಶ ಆಕೆಯದ್ದು.
೩. ರಾಮನಿಂದ ರಾವಣನ ಅಂತಃಕರಣ ತೆರೆಯಬೇಕೇ ವಿನಾ ಯುದ್ಧರಂಗದಲ್ಲಿ ಸಹಸ್ರಾರು ಜನರ ನಾಶ ಆಗಬಾರದು ಎಂಬುದು ಆಕೆಯ ಅಭಿಮತವಾಗಿತ್ತು.

ಅನಲೆಯ ಮನಸ್ಸು, ಉದ್ದೇಶ ಮತ್ತು ವಿಶಾಲ ಚಿಂತನೆಯನ್ನು ಅರ್ಥೈಸಿಕೊಂಡವಳು ಸೀತೆ. ಅನಲೆಯ ಪುಟ್ಟ ತನುವಿನಲಿ ದಿಟ್ಟತನ ಅಡಗಿದೆ ಎಂಬುದನ್ನು ಸೀತೆ ಆಕೆಯಲ್ಲಿ ಕಾಣುತ್ತಾಳೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅನಲೆ ಪ್ರೌಢಚಿಂತಕಿ. ಸೀತೆಯ ಪರಿಸ್ಥಿತಿಯನ್ನು ಅರಿಯುವ ಮತ್ತು ಆಕೆಯ ಮನಸ್ಥಿತಿಗೆ ಸ್ಪಂದಿಸುವ ಮಟ್ಟಕ್ಕೆ ಅನಲೆಯ ಬುದ್ಧಿಶಕ್ತಿ ಬೆಳೆದಿದೆ. ಹಾಗಾಗಿ ಆಕೆಯ ಚಿಂತನೆ ಆಳವಾದುದು ಮತ್ತು ವಿಶಾಲವಾದುದು.

ಆಕೆ ಪ್ರತಿಕ್ರಿಯಿಸುವ ರೀತಿಯಲ್ಲಿ ಸ್ಥಿತಪ್ರಜ್ಞತೆ ಇದೆ. ಯಾವುದೇ ವಿಚಾರದ ಕುರಿತು ಆಕೆ ಕೈಗೊಳ್ಳುವ ತೀರ್ಮಾನದಲ್ಲಿ ಪಕ್ಷಪಾತ ನಿಲುವಿಲ್ಲ. ಸ್ವತಂತ್ರ ಚಿಂತನೆಗಳಿಂದ ಸಂದರ್ಭ, ಸನ್ನಿವೇಶಗಳಿಗೆ ಸ್ಪಂದಿಸುವ ಅನಲೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಾದರಿ ಪಾತ್ರ ಎಂದೇ ಹೇಳಬೇಕು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸ್ವತಂತ್ರ ಮಾದರಿ ಪಾತ್ರಗಳಿಗೆ ಸ್ವಾತಂತ್ರ್ಯದ ಪರಿಕಲ್ಪನೆ ಇದೆ. ಈ ಪರಿಕಲ್ಪನೆಯ ನೆಲೆಯಲ್ಲಿಯೇ ತಮ್ಮ ಹಕ್ಕು, ಸ್ವಾತಂತ್ರ್ಯ ಮತ್ತು ಅವಕಾಶಗಳ ಕುರಿತು ಇಲ್ಲಿನ ಮಹಿಳಾ ಪಾತ್ರಗಳು ಪ್ರತಿಕ್ರಿಯಿಸುತ್ತವೆ. ತಮ್ಮನ್ನು ಅಸಹಾಯಕತೆಯ ವ್ಯಾಪ್ತಿಗೆ ಒಳಪಡಿಸುವ, ಅನುಕಂಪ ಗಿಟ್ಟಿಸುವ ಉದ್ದೇಶ ಈ ಮಾದರಿ ಪಾತ್ರಗಳಿಗೆ ಇಲ್ಲ. ಸಂದರ್ಭ, ಸನ್ನಿವೇಶಗಳಿಗೆ ಸ್ವತಂತ್ರ ಚಿಂತನೆಗಳಿಂದ ಪ್ರತಿಕ್ರಿಯಿಸುತ್ತಾ ಮುಂದೆ ಸಾಗಿವೆ. ಸ್ವತಂತ್ರ ಮಾದರಿ ಪಾತ್ರಗಳ ನಿರೂಪಣೆಯ ಹಿಂದೆ ಕವಿಯ ಧ್ಯೇಯೋದ್ದೇಶಗಳು ಪ್ರತಿಫಲಿಸಿವೆ. ಈ ಹಿನ್ನೆಲೆಯಲ್ಲಿ ಮುಖ್ಯವಾಗಿ ಎರಡು ವಿಚಾರಗಳನ್ನು ಪರಿಗ್ರಹಿಸಬಹುದು.

೧. ವ್ಯವಸ್ಥೆಯ ದೋಷವನ್ನು ಪರಿಗ್ರಹಿಸುವ ಮಟ್ಟಕ್ಕೆ ಮಹಿಳಾಸಮುದಾಯ ಬೆಳೆಯಬೇಕು ಎಂಬ ಆಶಯ ಕವಿಯದ್ದು.

೨. ಮಹಿಳಾಸಮುದಾಯಕ್ಕೆ ಅದರದ್ದೇ ಆದ ಅನನ್ಯತೆ ಇದೆ ಎಂಬುದನ್ನು ಸ್ಪಷ್ಟಪಡಿಸುವ ಉದ್ದೇಶ.

ಈ ಹಿನ್ನೆಲೆಯಲ್ಲಿ 'ಶ್ರೀರಾವಸಾಂಯಣ ವುಹಾನ್ವೇಷಣಂ' ವುಹಾಕಾವ್ಯದ ಮಹಿಳಾಸಮುದಾಯದ ಅನನ್ಯತೆ ಮತ್ತು ಶಕ್ತಿಯನ್ನು ಶೋಧಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸಾಂಪ್ರದಾಯಿಕ, ಪ್ರತಿಭಟನಾತ್ಮಕ ಮತ್ತು ಸ್ವತಂತ್ರ ಮಾದರಿ ಪಾತ್ರಗಳ ಅಧ್ಯಯನದಿಂದ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತಿನ ಶಕ್ತಿ, ಸಾಮರ್ಥ್ಯ, ಚಿಂತನಾ ವಿಧಾನ ಮತ್ತು ಸಾಧನೆಯ ನೆಲೆಗಳನ್ನು ಶೋಧಿಸಲಾಗಿದೆ. ಈ ಅಧ್ಯಯನದಿಂದ ಕವಿ ತಳೆದಿರುವ ಮೂರು ನಿಲುವುಗಳು ಬಹುಮುಖ್ಯವಾಗುತ್ತವೆ.

೧. ಮಹಿಳಾ ಪಾತ್ರ ನಿರೂಪಣೆಯ ಹಿಂದೆ ಕವಿಯ ಸ್ತ್ರೀಸಂವೇದನೆ ಮತ್ತು ತುಡಿತ ಅಭಿವ್ಯಕ್ತಗೊಂಡಿದೆ.

೨. ರಾಮಾಯಣದ ಮಹಿಳಾಸಮುದಾಯಕ್ಕೆ ತನ್ನದೇ ಆದ ವಿಶಿಷ್ಟ ನಿಲುವಿದೆ ಎಂಬುದನ್ನು ನಿರೂಪಿಸುವ ಮೂಲಕ ಮಹಾನ್ವೇಷಣಂನ ಕವಿ ಶಿಷ್ಟ ರಾಮಾಯಣಕ್ಕೆ ಪ್ರತಿಕ್ರಿಯಿಸಿದ ಬಗೆ ವ್ಯಕ್ತವಾಗುತ್ತದೆ.

೩. ರಾಮಾಯಣವನ್ನು ಮರುವ್ಯಾಖ್ಯಾನಿಸುವ ಪ್ರಯತ್ನ.

ಹೀಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸ್ತ್ರೀಸಂವೇದನೆಯನ್ನು ಭಿನ್ನ ಭಿನ್ನ ಮಾದರಿಯಲ್ಲಿ ಗುರುತಿಸಲು ಸಾಧ್ಯ. ಈ ಮಹಾಕಾವ್ಯದ ಮಹಿಳಾ ಜಗತ್ತು ಯಾವ ಮಾದರಿಯಲ್ಲೇ ಕಾಣಸಿಗಲಿ, ಈ ನಿರೂಪಣೆಯ ಹಿಂದೆ ಕವಿಗೆ ಇರುವ ಉದ್ದೇಶ ವಿಶಿಷ್ಟವಾದುದು. ತನ್ನ ವಿಶಿಷ್ಟ ಚಿಂತನೆಗಳನ್ನು ಭಾವನೆಗಳನ್ನು ರಾಮಾಯಣದ ಮಹಿಳಾ ಪಾತ್ರಗಳ ಮೂಲಕ ಕವಿ ಅಭಿವ್ಯಕ್ತಿಸಿರುವುದು ಗಮನಾರ್ಹ.

ಈ ಮಹಾಕಾವ್ಯದ ಮಹಿಳಾ ಜಗತ್ತು ಸಂದರ್ಭ, ಸನ್ನಿವೇಶಕ್ಕೆ ಪ್ರತಿಕ್ರಿಯಿಸುವ ಬಗೆ ಭಿನ್ನ ತೆರನಾದದ್ದಾದರೂ ಬದುಕಿನ ಕುರಿತ ಉದ್ದೇಶ ಒಂದೇ ಆಗಿದೆ. ಈ ಹಿನ್ನೆಲೆಯಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಜಗತ್ತು ಸಾರ್ಥಕ ಬದುಕಿನ ಸಾಫಲ್ಯತೆಗಾಗಿ ಹೋರಾಟ ನಡೆಸುತ್ತದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ಬದುಕಿನ ಉಳಿವಿಕೆಗಾಗಿ ಹೋರಾಟ ನಡೆಸುತ್ತವೆ. ಈ ಹೋರಾಟ ನ್ಯಾಯಬದ್ಧ ಮಾದರಿಯಲ್ಲಿ ಸಾಗಿದೆ. ಪುರುಷಸಮುದಾಯ ಒಡ್ಡುವ ಸವಾಲು ಮತ್ತು ವಿಧಿಸುವ ನಿರ್ಬಂಧಗಳಿಗೆ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಸಮುದಾಯ ವೈಚಾರಿಕ ನೆಲೆಯಿಂದ ಸ್ಪಂದಿಸಿವೆ. ಈ ವೈಚಾರಿಕ ನಿಲುವು, ಚಿಂತನಶೀಲ ಪ್ರವೃತ್ತಿ ಮತ್ತು ಅಂತಃಪ್ರಜ್ಞೆ ಎಲ್ಲಿಯೂ ಸೋಲನ್ನು ತಂದೊಡ್ಡುವುದಿಲ್ಲ. ಬೌದ್ಧಿಕ ಕುಶಲತೆಯ ಪರಿಣಾಮದಿಂದ ಇಲ್ಲಿನ ಮಹಿಳಾಜಗತ್ತು ಪ್ರತಿಕ್ರಿಯಿಸುವ ರೀತಿ ವಿಶಿಷ್ಟವಾದದ್ದು. ಶ್ರೀಯುತ ಎಂ. ವೀರಪ್ಪ ಮೊಯಿಲಿಯವರು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳನ್ನು ವಿಭಿನ್ನ ಮಾದರಿಯಲ್ಲಿ ನಿರ್ವಚಿಸಿದ್ದಾರೆ. ಈ ನಿರ್ವಚನದ ಹಿಂದೆ ಕವಿಯ ವಿಶಾಲ ಉದ್ದೇಶ ವ್ಯಕ್ತವಾಗುತ್ತದೆ. ಅಂಚಿಗೆ ತಳ್ಳಲಾದ ಮಹಿಳಾಸಮುದಾಯವನ್ನು ಕೇಂದ್ರಕ್ಕೆ ತಂದು ಮಾತನಾಡಿಸುವ ಉದ್ದೇಶ ಇಲ್ಲಿ ಕವಿಗೆ ಇದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ವಾಕ್‌ಸ್ವಾತಂತ್ರ್ಯದಿಂದ ದೂರ ಉಳಿದಿಲ್ಲ. ವ್ಯವಸ್ಥೆಯನ್ನು ಒಪ್ಪಿ ಬದುಕುವ ಸಾಂಪ್ರದಾಯಿಕ ಮಾದರಿ ಪಾತ್ರಗಳಾಗಲಿ, ವ್ಯವಸ್ಥೆಯ ದೋಷವನ್ನು ಪ್ರತಿಭಟಿಸುವ ಪ್ರತಿಭಟನಾತ್ಮಕ ಮಾದರಿ ಪಾತ್ರಗಳಾಗಲಿ ಅಥವಾ ವ್ಯವಸ್ಥೆಯ ದೋಷವನ್ನು ಪರಿಗ್ರಹಿಸುತ್ತಾ ತನ್ನದೇ ನೆಲೆಯಿಂದ ಪ್ರತಿಕ್ರಿಯಿಸುವ ಸ್ವತಂತ್ರ ಮಾದರಿ ಪಾತ್ರಗಳಾಗಲಿ ಒಟ್ಟಿನಲ್ಲಿ ಇಲ್ಲಿನ ಎಲ್ಲಾ ಮಹಿಳಾ ಪಾತ್ರಗಳು ಮಾತಾಡಿವೆ. ತನಗೆ ಅನಿಸಿದ್ದನ್ನು ವ್ಯಕ್ತಪಡಿಸುತ್ತಾ ಸಮಾಜವಿಮರ್ಶೆಗೆ

ಎಡೆಮಾಡಿಕೊಟ್ಟಿವೆ. ತಾತ್ಸಾರಕ್ಕೊಳಗಾದ ಮಹಿಳಾಸಮುದಾಯವನ್ನು ಕೇಂದ್ರಕ್ಕೆ ತಂದು ನಿರ್ವಚಿಸುವುದರ ಹಿಂದೆ ಕವಿಯ ಕಾರ್ಯತತ್ಪರತೆ, ವ್ಯಕ್ತಿಗೌರವದ ಪ್ರಜ್ಞೆ ಮತ್ತು ಕಾವ್ಯಕೌಶಲ್ಯ ಅಭಿವ್ಯಕ್ತಗೊಳ್ಳುತ್ತದೆ.

ರಾಣಿಯಾಗಿ, ದಾಸಿಯಾಗಿ, ವೈದ್ಯೆಯಾಗಿ, ತಪಸ್ವಿನಿಯಾಗಿ ಮಹಿಳಾಸಮುದಾಯವನ್ನು ನಿರ್ವಚಿಸಿರುವುದು ಕವಿಯ ಕಾವ್ಯನಿರ್ಮಿತಿಯ ವೈಶಿಷ್ಟ್ಯತೆ. ಹೆಣ್ಣು ಅಡುಗೆಮನೆಗೆ ಮೀಸಲಾದವಳು ಎಂಬ ಪೂರ್ವಗ್ರಹವನ್ನು ಒಡೆಯುವ ಉದ್ದೇಶ ಇಲ್ಲಿ ಕವಿಗೆ ಇದೆ. ಹಾಗಾಗಿ ವಿಭಿನ್ನ ವಲಯಗಳಲ್ಲಿ ಮಹಿಳಾಸಮುದಾಯದ ಸಾಧನೆಯ ಸಾಧ್ಯತೆಗಳನ್ನು ಕವಿ ನಿರೂಪಿಸಿ ತೋರಿಸಿದ್ದಾರೆ. ಶಿಷ್ಟ ರಾಮಾಯಣ ಪರಂಪರೆಯಲ್ಲಿ ಸಾಮಾನ್ಯವಾಗಿ ಮಹಿಳಾಸಮುದಾಯವನ್ನು ದ್ವಿತೀಯ ದರ್ಜೆಯ ಪ್ರಜೆ ಎಂಬಂತೆ ನಿರೂಪಿಸಲಾಗಿದೆ. ಈ ನಿರೂಪಣೆಯನ್ನು ಜನ ಸಾರಸಗಟಾಗಿ ಸ್ವೀಕರಿಸಿಬಿಟ್ಟಿದ್ದಾರೆ. ಈ ಸ್ವೀಕರಣಶಕ್ತಿ ಎಲ್ಲಿಯೂ ಏನನ್ನೂ ಪ್ರಶ್ನಿಸುವುದಿಲ್ಲ. ಸಾಂಪ್ರದಾಯಿಕ ಮನಸ್ಸು ಪುರುಷಪ್ರಧಾನ ಮಹಿಳೆಅಧೀನ ಎಂಬ ಪರಿಕಲ್ಪನೆಯನ್ನು ಬಲುಸುಲಭದಲ್ಲಿ ಒಪ್ಪಿಬಿಡುತ್ತದೆ. ಹೀಗೆ ನಿರೂಪಿತವಾದ ಶಿಷ್ಟ ರಾಮಾಯಣ ಪರಂಪರೆಯ ಏಕಪಕ್ಷೀಯ ನಿಲುವನ್ನು ಒಡೆಯುವ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿಗೆ ಇದೆ. ಹಾಗಾಗಿ ಈ ಮಹಾಕಾವ್ಯದ ಮಹಿಳಾಸಮುದಾಯದ ಪಾತ್ರ ನಿರೂಪಣೆಯಲ್ಲಿ ಕವಿ ಉದಾರತೆ ತಳೆದಿದ್ದಾರೆ. ಈ ಉದಾರಭಾವ ಮಾನವತ್ವದ ನೆಲೆಯಲ್ಲಿ ನಿರೂಪಿತವಾಗಿದೆ. ಈ ಮೂಲಕ ಮಹಿಳಾ ಸ್ಥಾನಮಾನ, ಅಸ್ತಿತ್ವ, ಗೌರವ ಮತ್ತು ಸ್ವಾತಂತ್ರ್ಯದ ಔಚಿತ್ಯವನ್ನು ಕವಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಮುಖೇನ ಕಾಣಿಸಿದ್ದಾರೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಪ್ರಸ್ತುತ ಆಗುಹೋಗುಗಳ ಕುರಿತ ಪ್ರತಿಕ್ರಿಯೆ ಇದೆ. ಈ ಕಾವ್ಯದ ಅಧ್ಯಯನ ಮಾಡುವಾಗ ಯಾವುದೋ ಕಾಲದ ಬದುಕು ಎಂಬ ಭಾವ ಮೂಡುವುದಿಲ್ಲ. ಬದಲಿಗೆ ಪ್ರಸ್ತುತ ಸಂದರ್ಭದಲ್ಲಿ ನಾವು ಮತ್ತು ನಮ್ಮ ಸುತ್ತಮುತ್ತಣ ಬದುಕು ಎಂಬ ಪ್ರಜ್ಞೆ ಮೂಡುತ್ತದೆ. ಈ ವಾಸ್ತವಪ್ರಜ್ಞೆ ಮತ್ತು ಜಾಗೃತಪ್ರಜ್ಞೆಯನ್ನು ಕವಿ ಕಾವ್ಯದುದ್ದಕ್ಕೂ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ ಎಂದೇ ಹೇಳಬೇಕು. ಮಹಾಕಾವ್ಯದ ಪ್ರತಿಯೊಂದು ಸೋಪಾನದಲ್ಲೂ ಕವಿಯ ಅಂತರಂಗದ ಜ್ಞಾನ ಮತ್ತು ಚೈತನ್ಯಶಕ್ತಿ ಪ್ರಭಾವಿಸಿರುವುದು ಗಮನಾರ್ಹ. ಈ ಶಕ್ತಿಸಂಚಯನದ ಹಿನ್ನಲೆಯಲ್ಲಿಯೇ ಕವಿ ಈ ಮಹಾಕಾವ್ಯವನ್ನು ರಚಿಸಿದ್ದಾರೆ. ಸಾಮಾನ್ಯವಾಗಿ ಪುರುಷರಲ್ಲಿ ಸ್ತ್ರೀಸಂವೇದನೆ ಮೊಳಕೆ ಒಡೆಯುವುದು ವಿರಳ. ಆದರೆ ಕವಿ ಮೊಯಿಲಿಯವರ

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಅಭ್ಯಾಸ ಮಾಡಿದಾಗ ಅವರಲ್ಲಿ ಸ್ತ್ರೀಸಂವೇದನೆ ಪ್ರಭಾವಿಸಿರುವುದು ಗಮನಿಸತಕ್ಕ ವಿಷಯ.

ರಾಮಾಯಣದ ಸ್ತ್ರೀಪಾತ್ರಗಳಿಗೆ ಸಮಾನ ಅವಕಾಶ, ಸಮಾನ ಹಕ್ಕು, ಸಮಾನ ಸ್ವಾತಂತ್ರ್ಯ ಒದಗಿಸುವ ಸೀಮಿತ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿಗೆ ಇಲ್ಲ. ಕೇವಲ ಸ್ತ್ರೀಸಮುದಾಯದ ಬದುಕನ್ನು ಕೇಂದ್ರಕ್ಕೆ ತಂದು ನಿರೂಪಿಸುವಲ್ಲಿ ಕವಿ ತೃಪ್ತಿಪಟ್ಟುಕೊಂಡಿಲ್ಲ. ಶತಮಾನಗಳಿಂದ ಹತಾಶೆಗೆ ಒಳಗಾದ ಮಹಿಳಾ ಜಗತ್ತಿನ ದುಸ್ತರ ಬದುಕಿನ ಅರಿವು ಕವಿಗೆ ಇದೆ. ಪುರುಷಸಮುದಾಯಕ್ಕೆ ಸರಿಸಾಟಿಯಾಗಿ ಎಲ್ಲಾ ಕ್ಷೇತ್ರಗಳಲ್ಲೂ ಸಮಾನ ಅವಕಾಶ ಒದಗಿಸಿಕೊಟ್ಟ ಮಾತ್ರಕ್ಕೆ ಮಹಿಳಾಲೋಕದ ಬದುಕು ಸುಧಾರಿಸಿದಂತಾಯಿತು ಎಂಬ ಸೀಮಿತ ಚಿಂತನೆ ಮಹಾನ್ವೇಷಣಂ ಮಹಾಕಾವ್ಯದ ಕವಿಯದಲ್ಲ. ಸ್ವಂತಿಕೆಯ ನೆಲೆಯಿಂದ ಸ್ವತಂತ್ರ ತೀರ್ಮಾನಗಳನ್ನು ಕೈಗೊಳ್ಳುವ ಹಕ್ಕು ಮತ್ತು ಅವಕಾಶ ಮಹಿಳಾಸಮುದಾಯಕ್ಕೆ ಇದೆ. ಈ ಪ್ರಜ್ಞೆ ಸಮಸ್ತ ಮಹಿಳಾಸಮುದಾಯಕ್ಕೆ ಇರಬೇಕು. ಮಾತ್ರವಲ್ಲ ಇದರೊಂದಿಗೆ ಸ್ವತಂತ್ರ ತೀರ್ಮಾನ ಕೈಗೊಳ್ಳುವ, ಅಭಿಪ್ರಾಯ ವ್ಯಕ್ತಪಡಿಸುವ ಮತ್ತು ಬೇಕು-ಬೇಡಗಳನ್ನು ವೈಯಕ್ತಿಕ ನೆಲೆಯಿಂದ ನಿರ್ಧರಿಸುವ ಹಕ್ಕುಗಳನ್ನು ಪಡೆಯಬೇಕು ಎಂಬ ಉದ್ದೇಶ ಇಲ್ಲಿ ಕವಿಯದ್ದು. ಸ್ವತಂತ್ರ ಆಲೋಚನೆ, ಅಭಿಪ್ರಾಯ ಸ್ವಾತಂತ್ರ್ಯ, ತೀರ್ಮಾನ, ಹಕ್ಕು ಮತ್ತು ವೈಯಕ್ತಿಕ ನೆಲೆಯ ಆಸೆ, ಆಕಾಂಕ್ಷೆಗಳನ್ನು ವ್ಯಕ್ತಪಡಿಸುವ ಉದ್ದೇಶ ಮಹಿಳಾಸಮುದಾಯಕ್ಕೆ ಇರಬೇಕು ಎಂಬ ಆಶಯ ಕವಿಯದ್ದು. ಈ ಹಿನ್ನೆಲೆಯಲ್ಲಿಯೇ ಮಹಾಕಾವ್ಯದ ಕವಿ ಮಹಿಳಾ ಲೋಕವನ್ನು ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಆದರೂ ಈ ಪಾತ್ರನಿರ್ಮಿತಿಯ ಹಿಂದೆ ಕವಿಗಿರುವ ವಾಸ್ತವಪ್ರಜ್ಞೆ ಅಭಿವ್ಯಕ್ತಗೊಂಡಿದೆ. ಕಾರಣ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಎಲ್ಲಾ ಮಹಿಳಾ ಪಾತ್ರಗಳು ಸ್ವಂತಿಕೆಯ ನೆಲೆಯಿಂದ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮಾದರಿಯಲ್ಲಿ ನಿರೂಪಿತಗೊಂಡಿಲ್ಲ. ಕೆಲವು ಪಾತ್ರಗಳು ವ್ಯವಸ್ಥೆಯನ್ನು ಒಪ್ಪಿದರೆ ಇನ್ನು ಕೆಲವು ಪಾತ್ರಗಳು ವ್ಯವಸ್ಥೆಯನ್ನು ಪ್ರಶ್ನಿಸುತ್ತವೆ. ಮತ್ತೆ ಕೆಲವು ಪಾತ್ರಗಳು ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸುತ್ತವೆ. ಸ್ತ್ರೀಬದುಕಿನ ಸುಧಾರಣಾ ಸಾಧ್ಯತೆಯ ನೆಲೆಗಳನ್ನು ಕಾಣಹೊರಟ ಕವಿ ರಾಮಾಯಣದ ಎಲ್ಲಾ ಮಹಿಳಾ ಪಾತ್ರಗಳನ್ನು ಪ್ರತಿಭಟನಾತ್ಮಕ ಮಾದರಿಯ ನೆಲೆಯಲ್ಲಿ ನಿರೂಪಿಸಬಹುದಿತ್ತು. ಆದರೆ ಕವಿ ವಾಸ್ತವಕ್ಕೆ ತೀರಾ ಸಮೀಪದಲ್ಲಿದ್ದಾರೆ. ಹಾಗಾಗಿ ದಿಢೀರನೆ ಸುಧಾರಣೆ ತಂದುಬಿಡುವ ತುರಾತುರಿಯ ಉದ್ದೇಶ ಇಲ್ಲಿ ಕವಿಗೆ ಇಲ್ಲದಿರುವುದು ಸ್ಪಷ್ಟವಾಗುತ್ತದೆ. ಯಾವುದೇ ಸಮಾಜ ಸುಧಾರಣಾ ಕಾರ್ಯವಾಗಲಿ, ಉದ್ದೇಶವಾಗಲಿ ಒಮ್ಮೆಲೇ ಫಲಕಾರಿಯಾಗುವುದಿಲ್ಲ ಎಂಬ ಅರಿವು ಕವಿಗೆ ಇದೆ. ಮಾತ್ರವಲ್ಲ ಇದರೊಂದಿಗೆ ವ್ಯವಸ್ಥೆಯನ್ನು ಒಪ್ಪುವ, ಪ್ರಶ್ನಿಸುವ ಮತ್ತು ಪ್ರತಿಭಟಿಸುವ ಜನಸಮುದಾಯ ಸಮಾಜದಲ್ಲಿ

ಇದ್ದೇ ಇರುತ್ತದೆ ಎಂಬುದನ್ನು ಸ್ಪಷ್ಟಪಡಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇತ್ತು. ಈ ಕಾರಣದಿಂದಾಗಿಯೇ ಕವಿ ಈ ಕಾವ್ಯದ ವಿಭಿನ್ನ ನೆಲೆಗಳನ್ನು ಪರಿಚಯಿಸಿದ್ದಾರೆ.

ಸ್ತ್ರೀಚಾರಿತ್ರ್ಯ ಮತ್ತು ಪುರುಷಚಾರಿತ್ರ್ಯದ ಪ್ರಶ್ನೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಎದುರಾಗುತ್ತದೆ. ಇಲ್ಲಿ ಚಾರಿತ್ರ್ಯದ ಪ್ರಶ್ನೆ ಕೇವಲ ಮಹಿಳಾ ಪಾತ್ರಗಳಿಗೆ ಮಾತ್ರ ಎದುರಾಗುವುದಿಲ್ಲ. ಇಲ್ಲಿನ ಪುರುಷ ಪಾತ್ರಗಳಿಗೂ ಈ ಅವಕಾಶ ನೀಡಲಾಗಿದೆ. ಚಾರಿತ್ರ್ಯ ಎನ್ನುವುದು ಪ್ರತಿಯೊಬ್ಬ ಮನುಷ್ಯನ ಬದುಕಿಗೂ ಅನ್ವಯಿಸುವಂಥದ್ದು. ದೈಹಿಕ ಚಾರಿತ್ರ್ಯದೊಂದಿಗೆ ಮಾನಸಿಕ ಚಾರಿತ್ರ್ಯವೂ ಇಲ್ಲಿ ಬಹುಮುಖ್ಯ. ಈ ಅರಿವು ಮಾನವಸಮುದಾಯಕ್ಕೆ ಇರಬೇಕು ಎಂಬುದನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಸ್ಪಷ್ಟಪಡಿಸಿದ್ದಾರೆ. ಚಾರಿತ್ರ್ಯದ, ಪಾತಿವ್ರತ್ಯದ ಅಗತ್ಯತೆ ಮಹಿಳಾಸಮುದಾಯಕ್ಕೆ ಸೀಮಿತವಾದುದು ಎಂಬ ಪೂರ್ವಗ್ರಹ ಪೀಡಿತ ಕಲ್ಪನೆಯನ್ನು ಮಹಾನ್ವೇಷಣಂನ ಕವಿ ಒಡೆದಿದ್ದಾರೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮೂಲಕ ಕವಿ ಸಾಮುದಾಯಿಕ ಪ್ರಜ್ಞೆಯನ್ನು ಅನಾವರಣಗೊಳಿಸಿದ್ದಾರೆ. ಮಹಾನ್ವೇಷಣಂ ಮಹಾಕಾವ್ಯದ ಪಾತ್ರಗಳಲ್ಲಿ ಈ ಪ್ರಜ್ಞೆ ಅಭಿವ್ಯಕ್ತಗೊಂಡಿದೆ. ಈ ಕಾವ್ಯದ ಬಹುತೇಕ ಮಹಿಳಾಸಮುದಾಯ ಸಮುದಾಯಸಂಸ್ಕೃತಿಯನ್ನು ಉಳಿಸಿಕೊಂಡು ಬರುವಲ್ಲಿ ಯಶಸ್ವಿಯಾಗಿದೆ ಎಂದೇ ಹೇಳಬೇಕು. ರಕ್ಕಸರ ಕಪಿಮುಷ್ಠಿಗೆ ಸಿಲುಕಿದ ಮಹಿಳಾಸಮುದಾಯ ನಲುಗುವ ಚಿತ್ರಣ ಇಲ್ಲಿದೆ. ಹೀಗೆ ದೌರ್ಜನ್ಯದಿಂದ ಗರ್ಭವತಿಯರೂ, ಅನಾಥರೂ ಆದ ಮಹಿಳಾಸಮುದಾಯದ ಕುರಿತು ರಾಮನಿಗೆ ಅನಾದರ ಭಾವವಿಲ್ಲ. ಇಂಥ ಪರಿಸ್ಥಿತಿಗೆ ಒಳಗಾಗಿ ಸಮಾಜದ ಕೆಂಗಣ್ಣ ನೋಟದಿಂದ ತಪ್ಪಿಸಿಕೊಳ್ಳಲಾರದ ಮಹಿಳಾಸಮುದಾಯದ ಕುರಿತು ರಾಮನಿಗೆ ವಿಶೇಷ ಕಾಳಜಿ ಇದೆ. ಕೌಶಿಕ ಮತ್ತು ರಾಮನ ಸಂಭಾಷಣೆಯಲ್ಲಿ ಕೌಶಿಕ ಇಂಥ ಮಹಿಳೆಯರ ರಕ್ಷಣೆ ಮಾಡುವವರು ಯಾರು? ಅವರಿಗೆ ರಕ್ಷಣೆ ಬೇಕಲ್ಲವೇ? ಎಂದು ಪ್ರಶ್ನಿಸುತ್ತಾನೆ. ಆದರೆ ರಾಮ ಶೋಷಣೆಗೆ ಒಳಗಾದ ಮಹಿಳಾಸಮುದಾಯದ ಕುರಿತು ಅವರು ಸಬಲೆಯರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಮಾತ್ರವಲ್ಲ ಅವರಿಗೆ ಭೂಮಿಯೇ ಹಾಸಿಗೆ, ಆಕಾಶವೇ ಹೊದಿಕೆ ಎನ್ನುತ್ತಾನೆ. ಅಂತೆಯೇ ಅವರಿಗೆ ಪುನರ್ವಸತಿ ಕಲ್ಪಿಸುವ ವ್ಯವಸ್ಥೆಯನ್ನು ಮಾಡುತ್ತಾನೆ. ರಕ್ಕಸಸಮುದಾಯದಿಂದ ಶೋಷಣೆಗೆ ಒಳಗಾದ ಮಹಿಳಾಸಮುದಾಯದ ಕುರಿತು ಮಹಾನ್ವೇಷಣಂ ಮಹಾಕಾವ್ಯದ ರಾಮನಿಗೆ ಗೌರವ ಮತ್ತು ಆದರದ ಭಾವವಿದೆ. ಕೇವಲ ಅನುಕಂಪದ ನೆಲೆಯಲ್ಲಿ ಈ ಗೌರವಾದರಗಳು ರಾಮನ ನೆಲೆಯಿಂದ ಅಭಿವ್ಯಕ್ತಗೊಂಡಿಲ್ಲ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ರಾಮ ಶೋಷಣೆಗೆ

ಒಳಗಾದ ಮಹಿಳಾಸಮುದಾಯದ ಕುರಿತು ವಿಶೇಷ ಕಾಳಜಿ ತಳೆದಿರುವುದು ಸ್ಪಷ್ಟವಾಗುತ್ತದೆ. ಈ ವಿಚಾರಕ್ಕೆ ಸಂಬಂಧಿಸಿದಂತೆ ರಾಮನ ನೆಲೆಯಿಂದ ಮುಖ್ಯವಾಗಿ ಕೆಲವು ವಿಚಾರಗಳನ್ನು ಗ್ರಹಿಸಬಹುದು.

೧. ಶೋಷಣೆಗೆ ಒಳಗಾದ ಮಹಿಳಾಸಮುದಾಯವನ್ನು ದುರ್ಬಲತೆಯ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ.

೨. ರಾಮ ರಾಜಮನೆತನದ ಪ್ರತಿನಿಧಿ. ಈತ ತನ್ನ ಅಭಿಪ್ರಾಯ ವ್ಯಕ್ತಪಡಿಸುವಾಗಲೂ ಸಮಸ್ತ ಸ್ತ್ರೀಸಮುದಾಯದ ಕುರಿತು ಉದಾರ ಭಾವವನ್ನು ಉಳಿಸಿಕೊಂಡಿದ್ದಾನೆ.

೩. ಶೋಷಣೆಗೆ ಒಳಗಾದ ಮಹಿಳಾಸಮುದಾಯವನ್ನು ಕೇವಲ ಅನುಕಂಪದ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ.

೪. ಮಹಿಳಾಸಮುದಾಯಕ್ಕೆ ಅದರದ್ದೇ ಆದ ವಿಶಿಷ್ಟ ಶಕ್ತಿ, ಸಾಮರ್ಥ್ಯಗಳಿವೆ. ಈ ಶಕ್ತಿ ಸಾಮರ್ಥ್ಯ ಇನ್ನಷ್ಟು ಪುಷ್ಟಿಪಡೆದು ಕೇಂದ್ರಕ್ಕೆ ಬರುವಂತಾಗಬೇಕು ಎಂಬುದು ಕವಿಯ ಆಶಯ.

೫. ರಾಮನ ನೆಲೆಯಿಂದಲೇ ಮಹಿಳಾಸಮುದಾಯವನ್ನು ಸಬಲತೆಯ ನೆಲೆಯಲ್ಲಿ ಗುರುತಿಸುವ ಉದ್ದೇಶ ಕವಿಗೆ ಇತ್ತು.

ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ತೀರಾ ದೈನ್ಯತೆಯ ನೆಲೆಯಲ್ಲಿ, ಅನುಕಂಪದ ನೆಲೆಯಲ್ಲಿ ಶೋಷಣೆಗೆ ಒಳಗಾದ ಸಮುದಾಯದ ಬದುಕನ್ನು ಕಟ್ಟಿಕೊಡುವ ಕೆಲಸ ಮಾಡಿಲ್ಲ. ಸ್ತ್ರೀಯರ ಅಂತರಂಗದ ಚೈತನ್ಯಶಕ್ತಿಯನ್ನು ಕೇಂದ್ರಕ್ಕೆ ತಂದು ನಿರೂಪಿಸುವ ಉದ್ದೇಶ ಇಲ್ಲಿ ಕವಿಗೆ ಇದೆ. ಹಾಗಾಗಿ ರಾಮನ ನೆಲೆಯಿಂದಲೇ ಮಹಿಳೆಯರನ್ನು ಸಬಲೆಯರು ಎಂದು ಕವಿ ಹೇಳಿಸಿದ್ದಾರೆ.

ರಕ್ಕಸಸಮುದಾಯ ಮಾತ್ರ ಮಹಿಳಾಸಮುದಾಯದ ಮೇಲೆ ಆಕ್ರಮಣ ಮಾಡುತ್ತವೆ ಎಂಬ ಪೂರ್ವಗ್ರಹವನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಒಡೆದಿದ್ದಾರೆ. ದೇವತೆಗಳೆಲ್ಲಾ ಒಳ್ಳೆಯವರು, ರಕ್ಕಸರೆಲ್ಲಾ ಕೆಟ್ಟವರು ಎಂಬ ತಪ್ಪುಕಲ್ಪನೆಯನ್ನು ಇಲ್ಲಿ ಒಡೆಯಲಾಗಿದೆ. ದೇವಸಮುದಾಯ ಜನಸಮುದಾಯದ ಮೇಲೆ ಆಕ್ರಮಣ ಮಾಡುವ ಮತ್ತು ಶೋಷಿಸುವ ವಿಚಾರಗಳ ಕುರಿತು ಕವಿ ಪ್ರಸ್ತಾಪಿಸಿದ್ದಾರೆ. ಗೌತಮ, ಅಹಲ್ಯೆ ಮತ್ತು ಇಂದ್ರರ ಪ್ರಸಂಗವೇ ಇದಕ್ಕೆ ಸಾಕ್ಷಿ. ಈ ಸಂದರ್ಭಕ್ಕೆ ಸಂಬಂಧಿಸಿದಂತೆ ಗೌತಮ ಮತ್ತು ಅಹಲ್ಯೆಯರ ಸಹಭಾಗಿತ್ವ ಕಂಡರೂ ವಾಸ್ತವವಾಗಿ ಇಂಥ ಕುಟಿಲ ಯೋಚನೆ ಮೊದಲು ಮೊಳೆತದ್ದು ಇಂದ್ರನಲ್ಲಿಯೇ. ಹಾಗಾಗಿ ಇಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕವಿ ದೇವಸಮುದಾಯದಿಂದ ಮಹಿಳಾಸಮುದಾಯದ ಮೇಲೆ ಆಗುವ ಶೋಷಣೆಯ ನೆಲೆಗಳನ್ನು ಗುರುತಿಸಿದ್ದಾರೆ. ಸಮುದಾಯಸಂಸ್ಕೃತಿಯಲ್ಲಿ ಮುಖ್ಯವಾಗಿ ಅಪರಾಧಿಗೆ ಶಿಕ್ಷೆ ಮತ್ತು ದಂಡ ವಿಧಿಸುವ

ಪರಿಪಾಠವಿದೆ. ಇದನ್ನು ಬಹುತೇಕ ಶಿಷ್ಟ ರಾಮಾಯಣ ಪರಂಪರೆಗಳು ಸಾಬೀತುಪಡಿಸಿವೆ. ಆದರೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಈ ಸೀಮಿತ ಚಿಂತನೆಯನ್ನು ಒಡೆದಿದ್ದಾರೆ. ಅಹಲ್ಯೆ ಮತ್ತು ಇಂದ್ರರ ಪ್ರಸಂಗಕ್ಕೆ ಸಂಬಂಧಿಸಿದಂತೆ ಇಲ್ಲಿ ಗೌತಮ ಮಹರ್ಷಿ ಅಹಲ್ಯೆಯನ್ನು ಶಪಿಸುವುದಿಲ್ಲ. ತಾನು ಆಶ್ರಮದಿಂದ ದೂರ ನಡೆಯುತ್ತಾನೆ. ಅಹಲ್ಯೆ ಸ್ವಯಂಇಚ್ಛೆಯಿಂದ ತಪಸ್ವಿನಿಯಾಗುತ್ತಾಳೆ. ತಮ್ಮ ತಪ್ಪಿಗೆ ತಾವೇ ಶಿಕ್ಷೆ ವಿಧಿಸಿಕೊಳ್ಳುವ ಮಾದರಿಯಲ್ಲಿ ಇಲ್ಲಿ ಅಹಲ್ಯೆಯ ಪಾತ್ರ ನಿರೂಪಿತವಾಗಿದೆ. ಸುಶಿಕ್ಷಿತ ಜನಸಮುದಾಯದ ನೆಲೆಯಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕವಿ ರಾಮಾಯಣದ ಪಾತ್ರಗಳನ್ನು ನಿರೂಪಿಸಿದ್ದಾರೆ. ಹೀಗೆ ಒಂದು ಸಮುದಾಯದಿಂದ ಇನ್ನೊಂದು ಸಮುದಾಯಕ್ಕೆ ಸಂಸ್ಕೃತಿ ಭಿನ್ನವಾಗುತ್ತದೆ ಎಂಬುದನ್ನು ಹೇಳುವ ಪ್ರಜ್ಞೆ ಕವಿಯಲ್ಲಿ ಇದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಸ್ತ್ರೀ ಪಾತ್ರಗಳ ನಿರೂಪಣೆಯಲ್ಲಿ ಮಹಿಳಾಪರ ಚಿಂತನೆಯನ್ನು ತಾಳಿದ್ದಾರೆ. ಸ್ತ್ರೀ ಇಲ್ಲದಿದ್ದರೆ ಪುರುಷನ ಬದುಕು ಅಪೂರ್ಣ ಎನ್ನುವುದನ್ನು ಹೇಳುವ ಉದ್ದೇಶ ಇಲ್ಲಿ ಕವಿಗೆ ಇದೆ. ಈ ಮಹಾಕಾವ್ಯದ ಮಹಿಳಾಸಮುದಾಯಕ್ಕೆ ತನ್ನದೇ ಆದ ಅನನ್ಯತೆ ಇದೆ. ಅಧ್ಯಯನದ ಅನುಕೂಲಕ್ಕಾಗಿ ಈ ಕಾವ್ಯದ ಸ್ತ್ರೀಲೋಕವನ್ನು ಸಾಂಪ್ರದಾಯಿಕ, ಪ್ರತಿಭಟನಾತ್ಮಕ ಮತ್ತು ಸ್ವತಂತ್ರ ಮಾದರಿ ಪಾತ್ರಗಳಾಗಿ ಗುರುತಿಸಿಕೊಳ್ಳಲಾಗಿದೆ. ಈ ಮಾದರಿ ಪಾತ್ರಗಳು ಆಯಾಯ ವ್ಯಾಪ್ತಿಯೊಳಗೆ ನಿಂತುಬಿಡುತ್ತವೆ ಎಂದು ಹೇಳಲಾಗದು. ಅಗತ್ಯಕ್ಕೆ ಅನುಸಾರಿಯಾಗಿ ನಿರ್ದಿಷ್ಟ ಚೌಕಟ್ಟನ್ನು ಮೀರಿ ಪ್ರತಿಕ್ರಿಯಿಸುತ್ತವೆ. ಸಾಂಪ್ರದಾಯಿಕ, ಪ್ರತಿಭಟನಾತ್ಮಕ ಮತ್ತು ಸ್ವತಂತ್ರ ನೆಲೆಯ ಪಾತ್ರಗಳಿಗೆ ಇಲ್ಲಿ ಬದುಕಿನ ಪ್ರಶ್ನೆ ಬಹುಮುಖ್ಯವಾಗಿದೆ. ಪುರುಷಪ್ರಭುತ್ವದ ದಾಳವಾಗಿ ಮಹಿಳಾಲೋಕವನ್ನು ಕಟ್ಟುವ ಸಂಕುಚಿತ ಉದ್ದೇಶ ಕವಿ ಮೊಯಿಲಿಯವರಿಗೆ ಇಲ್ಲ. ಹಾಗಾಗಿ ಶಿಷ್ಟ ಮತ್ತು ಮೌಖಿಕ ರಾಮಾಯಣ ಕಟ್ಟಿದ ರಾಮಾಯಣದ ಸ್ತ್ರೀಸಮುದಾಯದ ಬದುಕಿಗೂ ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರ ಕಟ್ಟಿದ ಮಹಿಳಾಸಮುದಾಯದ ಬದುಕಿಗೂ ಅಂತರವಿದೆ.

ಕವಿ ಮೊಯಿಲಿಯವರು ನಿರ್ವಚಿಸಿದ ರಾಮಾಯಣದ ಮಹಿಳಾಜಗತ್ತು ಪ್ರಸ್ತುತ ಮಹಿಳಾಜಗತ್ತು ಒಂದೇ ಎನ್ನಬಹುದು. ಸ್ತ್ರೀಸಮುದಾಯದ ಬದುಕನ್ನು ಕೇಂದ್ರಕ್ಕೆ ತರುವ ಮತ್ತು ಅವರ ಸ್ಥಿತಿಗತಿಯ ಸುಧಾರಣೆಯ ಆಶಯ ಬಿಂಬಿಸುವ ಮಹಿಳಾಚಳುವಳಿಗಳು, ಸ್ತ್ರೀವಾದಿ ಚಿಂತನೆಗಳು ರೂಪುತಳೆದದ್ದು ಎಂಭತ್ತರ ದಶಕದಲ್ಲಿ. ಹಾಗಾಗಿ ಕವಿ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಪ್ರಸ್ತುತ ಮಹಿಳಾ ಸ್ಥಿತಿಗತಿಯ ಅನಾವರಣವಿದೆ. ವ್ಯವಸ್ಥೆಯನ್ನು ಒಪ್ಪಿಬದುಕುವ, ಪ್ರಶ್ನಿಸುವ ಮತ್ತು ಪ್ರತಿಭಟಿಸುವ

ಶಕ್ತಿ ಪ್ರಸ್ತುತ ಮಹಿಳಾಸಮುದಾಯಕ್ಕೆ ಇದೆ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಹಿನ್ನೆಲೆಯಲ್ಲಿ ಪ್ರಸ್ತುತ ಮಹಿಳಾಲೋಕದ ಪಡಿ ಅಚ್ಚನ್ನು ಗುರುತಿಸಲು ಸಾಧ್ಯ. ಕವಿ ಇಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಲೋಕವನ್ನು ಕೇವಲ ಪಾತ್ರಗಳ ನೆಲೆಯಲ್ಲಿ ನಿರೂಪಿಸುವ ಸೀಮಿತ ಉದ್ದೇಶವನ್ನು ಹೊಂದಿಲ್ಲ. ಸಮಸ್ತ ಸ್ತ್ರೀಸಮುದಾಯದ ಕಥನವನ್ನು ನಿರ್ವಚಿಸುವ ವಿಶಾಲ ದೃಷ್ಟಿಕೋನವನ್ನು ಹೊಂದಿದ್ದಾರೆ. ಈ ವಿಶಾಲ ದೃಷ್ಟಿಕೋನದ ಪರಿಣಾಮವೇ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಜಗತ್ತು. ಇಲ್ಲಿನ ಮಹಿಳಾಜಗತ್ತನ್ನು ಕಥನದ ನೆಲೆಯಲ್ಲಿ ಶೋಧಿಸುವ ಉದ್ದೇಶ ಇರುವುದರಿಂದ ಈ ಅಧ್ಯಾಯವನ್ನು 'ಶ್ರೀರಾಮಾಯಣ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಸ್ತ್ರೀಕಥನ' ಎಂದು ಗುರುತಿಸಿಕೊಳ್ಳಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ಉತ್ತಮ ಸಂದೇಶವನ್ನು ನೀಡುತ್ತವೆ. ಸಂಸ್ಕಾರಯುತ ಬಾಳ್ವೆಯನ್ನು ಅಪೇಕ್ಷಿಸುತ್ತದೆ. ಮಹಿಳಾ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿ ಪೂಜ್ಯಭಾವ ತಳೆದಿರುವುದು ಸ್ಪಷ್ಟವಾಗುತ್ತದೆ. ಸಮಕಾಲೀನ ಸಂದರ್ಭದ ಹೆಣ್ಣಿನ ತಲ್ಲಣ, ತುಮುಲ ಭಾವನೆಗಳನ್ನು ಬಿಂಬಿಸುವಲ್ಲಿ ಕವಿ ಆಸಕ್ತರು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ಪ್ರೀತಿಯೊಂದಿಗೆ ಬದುಕಿನ ಕುರಿತ ಉತ್ಸಾಹವನ್ನು ಅನಾವರಣಗೊಳಿಸುತ್ತವೆ.

ಯದ್ಧದ ಪರಿಕಲ್ಪನೆಗೆ ಸಂಬಂಧಿಸಿದಂತೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಹೊಸತನವನ್ನು ಕಂಡಿದ್ದಾರೆ. ಮಾನಸಿಕ ದ್ವಂದ್ವಗಳ ನೆಲೆಯಿಂದ ನಡೆಯುವ ತಾಕಲಾಟವನ್ನು ಮಹಾನ್ವೇಷಣಂ ಮಹಾಕಾವ್ಯದ ಹಿನ್ನೆಲೆಯಲ್ಲಿ ಯುದ್ಧ ಎಂದು ಪರಿಗ್ರಹಿಸಬಹುದಾಗಿದೆ. ವ್ಯಕ್ತಿ ವ್ಯಕ್ತಿಗಳ ನಡುವಣ ನಡೆಯುವ ಭೌತಿಕ ಯುದ್ಧಕ್ಕಿಂತ ವ್ಯಕ್ತಿಯ ಮಾನಸಿಕ ಶಕ್ತಿಯ ಮೇಲೆ ಆಕ್ರಮಣ ಮಾಡುವ ಮಾನಸಿಕ ತಾಕಲಾಟ, ದುರಾಲೋಚನೆ ಮತ್ತು ದ್ವಂದ್ವಗಳನ್ನು ಯುದ್ಧ ಎಂಬುದಾಗಿ ಪರಿಗ್ರಹಿಸಬಹುದಾಗಿದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕೆಲವು ಮಹಿಳಾ ಪಾತ್ರಗಳು ಮಾನಸಿಕ ದ್ವಂದ್ವಕ್ಕೆ ಒಳಗಾಗಿವೆ. ಈ ದ್ವಂದ್ವವನ್ನು ಯುದ್ಧದ ನೆಲೆಯಲ್ಲಿ ತಾಕಲಾಟಗಳು ಎಂಬುದಾಗಿ ಪರಿಗ್ರಹಿಸಿದರೆ ಈ ಯುದ್ಧ ವಿಜಯವನ್ನು ತಂದುಕೊಟ್ಟಿದೆ ಎಂದು ಹೇಳಬೇಕು. ಏಕೆಂದರೆ ಸರಿ-ತಪ್ಪು, ನ್ಯಾಯ-ಅನ್ಯಾಯ, ಧರ್ಮ-ಅಧರ್ಮ, ಅಹಿಂಸೆ-ಹಿಂಸೆಯ ಪ್ರಜ್ಞೆ ಉಳ್ಳ ಮಹಾನ್ವೇಷಣಂ ಮಹಾಕಾವ್ಯದ ಪಾತ್ರಗಳು ಸರಿಯಾದ, ನ್ಯಾಯಬದ್ಧವಾದ, ಧರ್ಮಬದ್ಧವಾದ, ಅಹಿಂಸಾತ್ಮಕವಾದ ವಿಚಾರಗಳ ಪರವೇ ತೀರ್ಮಾನ ಕೈಗೊಂಡಿವೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳಿಗೆ ಸಮಾಜ ವಿಶ್ಲೇಷಣೆಯ ಶಕ್ತಿ ಇದೆ.

ವ್ಯಕ್ತಿ ವ್ಯಕ್ತಿಗಳ ನಡುವಣ ನಡೆಯುವ ಯುದ್ಧ ಮತ್ತು ಸಂಘರ್ಷವನ್ನು ಕವಿ ಜಾಗೃತಪ್ರಜ್ಞೆಯಿಂದ ನಿರೂಪಿಸಿದ್ದಾರೆ. ಪರಸ್ಪರ ನಡೆಯುವ ಭೀಕರ ಯುದ್ಧ ಪರಿಣಾಮಗಳು ಸಮಸ್ತ ಮಾನವ ಸಂಕುಲಗಳ ಮೇಲೆ ದುಷ್ಪರಿಣಾಮವನ್ನು ಬೀರುವುದು ಎಂಬ ಪ್ರಜ್ಞೆ ಕವಿಯಲ್ಲಿದೆ. ಹಾಗಾಗಿ ಯುದ್ಧ ವಿಜಯವನ್ನು ಭೀಕರವಾಗಿ ಚಿತ್ರಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ. ವೀರರಸ ಪ್ರಧಾನಕ್ಕೆ ಕಾವ್ಯವನ್ನು ಸೀಮಿತಗೊಳಿಸುವ ಉದ್ದೇಶ ಕವಿಗೆ ಇಲ್ಲ. ಯುದ್ಧನೀತಿಯನ್ನು ಕವಿ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಅಳವಡಿಸಿರುವುದು ಗಮನಾರ್ಹ. ರಾಜನಾದವ ಪ್ರಜಾಸಮುದಾಯದ ಕುರಿತು ಕಳಕಳಿ ಉಳ್ಳವನಾಗಿರಬೇಕು. ಅದರಲ್ಲೂ ಮಹಿಳಾಸಮುದಾಯದ ಕುರಿತು ಆತನಿಗೆ ವಿಶೇಷ ಕಾಳಜಿ ಇರಬೇಕು ಎಂಬುದು ಕವಿಯ ಆಶಯ. ಹಾಗಾಗಿ ಯುದ್ಧ ಎನ್ನುವುದು ಮಹಿಳಾಸಮುದಾಯಕ್ಕೆ ಘಾಸಿಯಾಗಬಾರದು ಮತ್ತು ಅವರ ಬದುಕಿಗೆ ಕುತ್ತನ್ನು ತಂದೊದಗಬಾರದು ಎಂಬುದು ಇಲ್ಲಿ ಕವಿಯ ಆಶಯ. ಯುದ್ಧ ನಡೆಯುವಾಗ ಸ್ತ್ರೀಯರ ಮಾನಧನಗಳನ್ನು ರಕ್ಷಿಸಬೇಕು. ಹಸುಳೆಗಳ ನಾಶ ಆಗಬಾರದು. ಅಕ್ರಮಣಶೀಲ ಪ್ರವೃತ್ತಿ ನಾಶ ಆಗಬೇಕು ಎಂಬ ಆಶಯವನ್ನು ಕವಿ ವ್ಯಕ್ತಪಡಿಸಿದ್ದಾರೆ. ಯುದ್ಧ ಎನ್ನುವುದು ರಾಜನ ಸಾಧನೆಯನ್ನು ವಿಸ್ತರಿಸುವ ಮತ್ತು ವೈಭವೀಕರಿಸುವ ವಿಧಾನ ಎಂಬ ಪೂರ್ವಗ್ರಹವನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಒಡೆದಿದ್ದಾರೆ. ಯುದ್ಧದಿಂದ ಮಾನವಕುಲ ನಾಶ ಹೊಂದುವುದು ಮಾತ್ರವಲ್ಲ ಇದರೊಂದಿಗೆ ಬೆಳೆದು ಬಂದ ಸಂಸ್ಕೃತಿ ಮತ್ತು ಸಂಸ್ಕಾರಯುತ ಬದುಕೂ ನಾಶವಾಗುವುದು ಎಂಬ ಭಾವವನ್ನು ಕವಿ ವ್ಯಕ್ತಪಡಿಸಿದ್ದಾರೆ. ಈ ನಿಟ್ಟಿನಲ್ಲಿ ಯುದ್ಧ ಮತ್ತು ಹಿಂಸೆ ಮಾನವನ ನಾಶಕ್ಕೆ ಕಾರಣ ಎಂಬ ಆಶಯ ಮಹಾನ್ವೇಷಣಂ ಮಹಾಕಾವ್ಯದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿದೆ.

ಸ್ತ್ರೀಸಮುದಾಯಕ್ಕೆ ದಕ್ಕಬೇಕಾದ ಗೌರವ, ಸ್ತ್ರೀಸಂವೇದನೆ, ಸ್ತ್ರೀಸಮಾನತಾಭಾವ, ಸ್ತ್ರೀಸಮುದಾಯಕ್ಕೆ ದಕ್ಕಬೇಕಾದ ಅವಕಾಶಗಳು ಮತ್ತು ಸೌಲಭ್ಯಗಳ ಕುರಿತು ಮಹಾನ್ವೇಷಣಂ ಮಹಾಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಸ್ತ್ರೀಪುರುಷರ ನಡುವಣ ತಾರತಮ್ಯ ನೀಗಬೇಕು ಎಂಬುದು ಕವಿಯ ಆಶಯ. ಈ ಆಶಯ ರಾಮನ ಪಾತ್ರದ ಮೂಲಕ ಅಭಿವ್ಯಕ್ತಗೊಂಡಿದೆ. ಜನರ ಪ್ರತಿನಿಧಿಯಾದ ರಾಮನಲ್ಲಿ ಮೊದಲು ಈ ಭಾವ ಬೆಳೆಯಬೇಕು. ಹೀಗೆ ಬೆಳೆದಲ್ಲಿ ಸಮಾಜ ಸುಧಾರಣೆ ಖಂಡಿತಾ ಸಾಧ್ಯ ಎಂಬ ಆಶಯ ಇಲ್ಲಿ ಕವಿಯದ್ದು. ಹಾಗಾಗಿ ಲಿಂಗ ಅಸಮಾನತೆಯನ್ನು ನೀಗುವ ಶಕ್ತಿಯಾಗಿ ಕವಿ ಇಲ್ಲಿ ರಾಮನನ್ನು ನಿರೂಪಿಸಿದ್ದಾರೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ರಾಮಾಯಣದ ಮಹಿಳಾ ಪಾತ್ರಗಳನ್ನು ಮಾತ್ರ ಸ್ತ್ರೀಸಂವೇದನೆಯ ನೆಲೆಯಲ್ಲಿ ನೋಡುವ ಉದ್ದೇಶ ಕವಿಗೆ ಇಲ್ಲ.

ಮಹಿಳಾ ಪಾತ್ರಗಳೊಂದಿಗೆ ಪ್ರಕೃತಿಯನ್ನೂ ಸ್ತ್ರೀಸಂವೇದನೆಯ ನೆಲೆಯಲ್ಲಿ ನೋಡುವ ತುಡಿತ ಕವಿಗೆ ಇರುವುದು ಸ್ಪಷ್ಟವಾಗುತ್ತದೆ. ಪ್ರಕೃತಿಯನ್ನು ಮಾತೆಯಾಗಿ ಕಂಡ ಕವಿ ಮಾತೃತ್ವದ ನೆಲೆಯಲ್ಲಿಯೇ ಪ್ರಕೃತಿ ವೈಭವವನ್ನು ನಿರೂಪಿಸಿದ್ದಾರೆ. ಪ್ರಕೃತಿ ಮಾತೆಯನ್ನು ನಂದನವನವನ್ನಾಗಿಸುತ್ತಾ ಮಾನವಕುಲ ಈ ಪ್ರಕೃತಿಯ ಸವಿಯನ್ನುಂಡು ಬೆಳಗುವ ಚೇತನಶಕ್ತಿ ಎಂಬಂತೆ ನಿರೂಪಿಸಿದ್ದಾರೆ. ಇಲ್ಲಿ ಕವಿ ಮನಸ್ಸಿನ ನಿರ್ಮಲತೆ ಮತ್ತು ಪ್ರಕೃತಿಯನ್ನು ಸಂವೇದನಾಶೀಲ ನೆಲೆಯಲ್ಲಿ ಕಂಡ ಬಗೆ ವ್ಯಕ್ತವಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಬಹುತೇಕ ಮಹಿಳಾ ಪಾತ್ರಗಳು ಬದುಕನ್ನು ತಪಸ್ಸನ್ನಾಗಿ ಸ್ವೀಕರಿಸಿದೆ. ಈ ಹಂತದಲ್ಲಿ ಎದುರಾಗುವ ಏರುಪೇರನ್ನು ಸಮಚಿತ್ತದಿಂದ ಸ್ವೀಕರಿಸುವ ಶಕ್ತಿಯನ್ನು ಪಡೆದುಕೊಂಡಿವೆ. ಅಗತ್ಯವಾದುದನ್ನು ಸ್ವೀಕರಿಸುತ್ತಾ ಅನಗತ್ಯವಾದುದನ್ನು ನಿರಾಕರಿಸುತ್ತಾ ಸರಿ-ತಪ್ಪುಗಳನ್ನು ತೀರ್ಮಾನಿಸುವ ಮಟ್ಟಕ್ಕೆ ಬೆಳೆದಿವೆ. ಇಲ್ಲಿನ ಪ್ರತಿಯೊಂದು ಮಹಿಳಾ ಪಾತ್ರಗಳಿಗೂ ಅದರದ್ದೇ ಆದ ನಿರ್ದಿಷ್ಟ ಗುರಿ, ಉದ್ದೇಶ ಮತ್ತು ಸಾಧನೆಯ ತುಡಿತವಿದೆ. ಹಾಗಾಗಿ ತಮ್ಮ ಧ್ಯೇಯೋದ್ದೇಶಗಳ ಸಾಫಲ್ಯಕ್ಕಾಗಿ ಇಲ್ಲಿನ ಮಹಿಳಾ ಜಗತ್ತು ತಪಸನ್ನಾಚರಿಸುತ್ತವೆ. ಹೀಗೆ ರಾಮಾಯಣದ ಮಹಿಳಾ ಜಗತ್ತನ್ನು ತಪಸ್ಸಿನ ನೆಲೆಯಿಂದ ನಿರೂಪಿಸುವ ಕವಿಯೂ ಒಬ್ಬ ತಪಸ್ವಿ ಎನ್ನಬೇಕು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಪ್ರೌಢತೆಯ ನೆಲೆಯಲ್ಲಿ ಕಾವ್ಯದ ಮಹಿಳಾ ಲೋಕವನ್ನು ಸೃಜಿಸಿದ್ದಾರೆ. ಈ ಮಹಾಕಾವ್ಯದ ಬಹುತೇಕ ಮಹಿಳಾ ಪಾತ್ರಗಳು ಪುರುಷ ಪಾತ್ರಗಳನ್ನು ತಿದ್ದುವ ಕೆಲಸ ಮಾಡಿವೆ. ಇದು ಕವಿಯ ವಿನೂತನ ಪರಿಕಲ್ಪನೆ. ಪುರುಷಸಮುದಾಯವನ್ನು ತಿದ್ದುವ ಮಟ್ಟಕ್ಕೆ ಮಹಿಳಾ ಪಾತ್ರಗಳನ್ನು ಬೆಳೆಸಿ ಪೋಷಿಸಿದ ಕವಿ ಕಾವ್ಯದ ಮಹಿಳಾ ಜಗತ್ತನ್ನು ಶ್ರೇಷ್ಠ ಮಟ್ಟದಲ್ಲಿ ನಿರ್ವಚಿಸಿದ್ದಾರೆ. ವಿವೇಚನಾಶಕ್ತಿಯ ನೆಲೆಯಲ್ಲಿ ರಾಮಾಯಣದ ಮಹಿಳಾಪಾತ್ರಗಳನ್ನು ನಿರೂಪಿಸುತ್ತಾ ಅವರ ಚಿಂತನೆಗಳನ್ನು ಪುರುಷಸಮುದಾಯ ಸ್ವೀಕರಿಸುವ ಮಾದರಿಯಲ್ಲಿ ಕಾವ್ಯ ರಚಿಸಿದ್ದಾರೆ. ಅಂತಃಪುರದ ರಾಣಿಯರ ಬದುಕನ್ನು ಮನೋಜ್ಞವಾಗಿ ನಿರೂಪಿಸುವುದು ಮಾತ್ರವಲ್ಲ ಇದರೊಂದಿಗೆ ಕೆಳಸ್ತರದ ಮಹಿಳೆಯರ ಬದುಕನ್ನು ಕಾವ್ಯದಲ್ಲಿ ಅಳವಡಿಸಿದ್ದಾರೆ. ಅಂತಃಪುರದ ರಾಣಿಯರ ಶ್ರೀಮಂತಿಕೆಯ ಬದುಕನ್ನು ನಿರೂಪಿಸುವುದರಲ್ಲೇ ಕವಿಯ ಆಸಕ್ತಿ ನಿಂತುಬಿಡುವುದಿಲ್ಲ. ಇದನ್ನು ಮೀರಿ ನಿತ್ಯ ನೋವು ಅನುಭವಿಸುವ ಜನಸಾಮಾನ್ಯ ಮಹಿಳೆಯ ಬದುಕೂ ಇಲ್ಲಿ ಕವಿಗೆ ಮುಖ್ಯವಾಗುತ್ತದೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತನ್ನು ಕವಿ ಮಾರ್ಮಿಕವಾಗಿ, ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ.

## ಆಕರ ಸೂಚಿ

೧. ವೀರಪ್ಪ ಮೊಯಿಲಿ ಎಂ. – ೨೦೦೧
ಶ್ರೀರಾಮಾಯಣ ಮಹಾನ್ವೇಷಣಂ
ಪ್ರಸ್ಥಾನ – ೩೦ : ಪ್ರಥಮ ಸೋಪಾನ
ಮಹೇಶ್ವರಿ ಪ್ರಕಾಶನ, ಬೆಂಗಳೂರು

೨. ವೀರಪ್ಪ ಮೊಯಿಲಿ ಎಂ. – ೨೦೦೪
ಶ್ರೀರಾಮಾಯಣ ಮಹಾನ್ವೇಷಣಂ
ಪ್ರಸ್ಥಾನ – ೧೪೯ : ಚತುರ್ಥ ಸೋಪಾನ
ಮಹೇಶ್ವರಿ ಪ್ರಕಾಶನ, ಬೆಂಗಳೂರು

೩. ವೀರಪ್ಪ ಮೊಯಿಲಿ ಎಂ. ೨೦೦೨
ಶ್ರೀರಾಮಾಯಣ ಮಹಾನ್ವೇಷಣಂ
ಪ್ರಸ್ಥಾನ – ೪೭ : ದ್ವಿತೀಯ ಸೋಪಾನ
ಮಹೇಶ್ವರಿ ಪ್ರಕಾಶನ, ಬೆಂಗಳೂರು

೪. ವೀರಪ್ಪ ಮೊಯಿಲಿ ಎಂ. – ೨೦೦೫
ಶ್ರೀರಾಮಾಯಣ ಮಹಾನ್ವೇಷಣಂ
ಪ್ರಸ್ಥಾನ – ೧೯೪ : ಪಂಚಮ ಸೋಪಾನ
ಮಹೇಶ್ವರಿ ಪ್ರಕಾಶನ, ಬೆಂಗಳೂರು

೫. ವೀರಪ್ಪ ಮೊಯಿಲಿ ಎಂ. – ೨೦೦೫
ಶ್ರೀರಾಮಾಯಣ ಮಹಾನ್ವೇಷಣಂ
ಪ್ರಸ್ಥಾನ – ೨೨೦ : ಪಂಚಮ ಸೋಪಾನ
ಮಹೇಶ್ವರಿ ಪ್ರಕಾಶನ, ಬೆಂಗಳೂರು

# ಅಧ್ಯಾಯ ೬.

# ಮಹಾನ್ವೇಷಣಂ ಮತ್ತು ಕನ್ನಡ ರಾಮಾಯಣ ಕಾವ್ಯಗಳ ಮುಖಾಮುಖಿ

**೬.೧. : ಮೌಖಿಕ ಪರಂಪರೆ**

೬.೧.೧ : ಸೀತೆ

೬.೧.೨ : ಶೂರ್ಪನಖಿ

೬.೧.೩ : ಮಂಡೋದರಿ

೬.೧.೪ : ಮಂಥರೆ

**೬.೨. : ಲಿಖಿತ ಪರಂಪರೆ**

೬.೨.೧ : ಸೀತೆ

೬.೨.೨ : ಶೂರ್ಪನಖಿ

೬.೨.೩ : ಮಂಡೋದರಿ

೬.೨.೪ : ಮಂಥರೆ

೬.೨.೫ : ಅಹಲ್ಯೆ

೬.೨.೬ : ಊರ್ಮಿಳೆ

೬.೨.೭ : ತಾರೆ

# ಅಧ್ಯಾಯ ೬

# ಮಹಾನ್ವೇಷಣಂ ಮತ್ತು ಕನ್ನಡ ರಾಮಾಯಣ ಕಾವ್ಯಗಳ ಮುಖಾಮುಖಿ

## ೬.೧ ಮೌಖಿಕ ಪರಂಪರೆ

ವಾಲ್ಮೀಕಿ ರಾಮಾಯಣ ಸಂಸ್ಕೃತದ ಮೊದಲ ಮಹಾಕಾವ್ಯವಾಗಿದೆ. ಇದಕ್ಕೂ ಪೂರ್ವದಲ್ಲಿ ಮೌಖಿಕ ರಾಮಾಯಣ ಅಸ್ತಿತ್ವದಲ್ಲಿ ಇತ್ತು. ಮೌಖಿಕ ರಾಮಾಯಣ ಪರಂಪರೆ ಲಿಖಿತ ರೂಪದಲ್ಲಿ ದಾಖಲಾಗಿಲ್ಲ. ಹಾಗಾಗಿ ಜನಪ್ರಿಯತೆಯಿಂದ ಬಹುದೂರ ಉಳಿಯಿತು ಎನ್ನಬೇಕು. ಮೌಖಿಕ ರಾಮಾಯಣಗಳಲ್ಲಿ ಕಲಾತ್ಮಕತೆ ತೀರಾ ವಿರಳ. ನಿತ್ಯಬದುಕಿನ ಕಷ್ಟ ಕಾರ್ಪಣ್ಯಗಳೇ ಇಲ್ಲಿನ ಕಥಾವಸ್ತು. ಇಲ್ಲಿ ಕಲ್ಪನೆಗಳಿಗೆ, ವೈಭವಕ್ಕೆ ಸ್ಥಾನ ಕಲ್ಪಿಸಿಲ್ಲ, ವಾಸ್ತವ ಬದುಕನ್ನು ಕಟ್ಟುವ ಪ್ರಯತ್ನ ಇದೆ. ಇಂಥ ಪಾತ್ರಗಳನ್ನು ಹೀಗೆಯೇ ನಿರೂಪಿಸಬೇಕು ಎಂಬ ಪೂರ್ವನಿರ್ಧರಿತ ಮನಸ್ಥಿತಿ ಜನಪದರಲ್ಲಿ ಇರಲಿಲ್ಲ. ಜನಪದರು ಯಾವೊಂದು ತಾತ್ವಿಕ ನಿಲುವಿಗೆ ಬದ್ಧರಾದವರಲ್ಲ. ವಸ್ತುವಿಷಯಗಳ ನಿರೂಪಣೆಯಲ್ಲಿ ಜನಪದರಿಗೆ ಯಾವುದೇ ಹಿಂಜರಿಕೆ ಇಲ್ಲ. ಮೌಖಿಕ ರಾಮಾಯಣಗಳ ಕಥಾನಿರೂಪಣೆ ಒಂದೇ ತೆರನಾಗಿ ಇಲ್ಲ, ಕೆಲವು ರಾಮಾಯಣಗಳಲ್ಲಿ ಪ್ರಧಾನವಾದ ಮಹಿಳಾ ಪಾತ್ರಗಳು ಇನ್ನು ಕೆಲವು ರಾಮಾಯಣಗಳಲ್ಲಿ ಪ್ರಧಾನವಾಗಿಲ್ಲ. ಹಾಗಾಗಿ ಒಂದೊಂದು ಮೌಖಿಕ ರಾಮಾಯಣ ಒಂದೊಂದು ಬಗೆಯಲ್ಲಿ ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಟ್ಟಿದೆ. ಜನಪದರು ಬದುಕನ್ನು ನೋಡುವ ಮತ್ತು ಗ್ರಹಿಸುವ ದೃಷ್ಟಿ ವಿಶಿಷ್ಟವಾದುದು. ಪ್ರಭುತ್ವಪರಂಪರೆಯ ದೌರ್ಜನ್ಯ, ಮಹಿಳೆಯರ ಸ್ಥಿತಿಗತಿ, ಯಜಮಾನ ಸಂಸ್ಕೃತಿಯಿಂದ ಮಹಿಳೆಯರ ಮೇಲಾಗುವ ದಬ್ಬಾಳಿಕೆ ಮೌಖಿಕ ಮಹಾಕಾವ್ಯಗಳಲ್ಲಿ ಅಭಿವ್ಯಕ್ತಗೊಂಡಿದೆ. ಹೀಗೆ ಮೌಖಿಕ ರಾಮಾಯಣಗಳು ವಸ್ತುಸ್ಥಿತಿಯ ನಿರೂಪಣೆಯೊಂದಿಗೆ ಸಾಮಾಜಿಕ ಕೇಡನ್ನು ವಿವೇಚಿಸುತ್ತವೆ.

ರಾಮಾಯಣದ ಕಥೆ ಮೊದಲು ಜನ್ಮತಾಳಿದ್ದು ಮೌಖಿಕ ಸಂಪ್ರದಾಯದಲ್ಲೇ. ತದನಂತರ ದೇಶವ್ಯಾಪಿಯಾಗಿ ಬಹುತೇಕ ಪಾಠಾಂತರಗಳಾಗಿ, ರೂಪಾಂತರಗಳಾಗಿ ತನ್ನದೇ ಆದ ಪಡಿ ಅಚ್ಚನ್ನು ಮೂಡಿಸಿತು. ಇದರ ಪರಿಣಾಮವಾಗಿ ರಾಮಾಯಣ ರಾಷ್ಟ್ರೀಯ ಮಟ್ಟದಲ್ಲಿ ಅಗ್ರಸ್ಥಾನವನ್ನು ಪಡೆದು ಸಾಂಸ್ಕೃತಿಕ ಪ್ರತಿನಿಧಿತ್ವಕ್ಕೆ ಕಾರಣವಾಯಿತು. ಮೌಖಿಕ ರಾಮಾಯಣದಿಂದ ರೂಪಾಂತರ ಹೊಂದಿದ ಬಹುತೇಕ ರಾಮಾಯಣಗಳಲ್ಲಿ ಪ್ರಾದೇಶಿಕ ಭಿನ್ನತೆಗಳನ್ನು ಕಾಣಲು ಸಾಧ್ಯ. ಮೌಖಿಕ ಸಂಪ್ರದಾಯದ ರಾಮಾಯಣಗಳು ಒಂದೇ ತೆರನಾಗಿಲ್ಲ. ಒಂದೊಂದು ಸಂಪ್ರದಾಯ ಒಂದೊಂದು ಮಾದರಿಯಲ್ಲಿ ರಾಮಾಯಣದ

ಕಥೆಯನ್ನು ಕಟ್ಟಿವೆ. ಈ ಕಟ್ಟುವಿಕೆಗೆ ಸಂಬಂಧಿಸಿದಂತೆ ಕೆಲವು ಸಾಮ್ಯ ಮತ್ತು ಭಿನ್ನತೆಗಳನ್ನು ಕಾಣಲು ಸಾಧ್ಯವಿದೆ.

ಮೌಖಿಕ ರಾಮಾಯಣ ಪರಂಪರೆ ಮಹಿಳಾಸಮುದಾಯದ ಬದುಕನ್ನು ತೀರಾ ಸಮೀಪದಿಂದ ಕಂಡಿದೆ. ಈ ಸಂಪ್ರದಾಯದವರು ರಾಮಾಯಣದ ಮಹಿಳಾ ಲೋಕವನ್ನು ವೈಭವೀಕರಣದ ನೆಲೆಯಲ್ಲಿ, ಸಿರಿವಂತಿಕೆಯ ನೆಲೆಯಲ್ಲಿ ಕಾಣುವ ಉದ್ದೇಶವನ್ನು ಹೊಂದಿಲ್ಲ. ಮಾನವಸಹಜ ಭಾವನೆ, ಕಾಮನೆಗಳನ್ನು ರಾಮಾಯಣದ ಪಾತ್ರಮುಖೇನ ನಿರೂಪಿಸುವಲ್ಲಿ ಈ ಸಂಪ್ರದಾಯವರಿಗೆ ಯಾವುದೇ ಹಿಂಜರಿಕೆ ಇಲ್ಲ. ರಾಜಾಶ್ರಯದ ಹಂಗಿಗೆ ಒಳಪಡದೆ, ಯಾರ ನಿಯಂತ್ರಣಕ್ಕೂ ಒಳಗಾಗದೆ ಹೇಳಬೇಕಾದುದನ್ನು ನಿರಾಳವಾಗಿ ನಿರೂಪಿಸಿದ ಸಾಹಿತ್ಯವೇ ಮೌಖಿಕ ರಾಮಾಯಣ ಪರಂಪರೆ. ಮಹಿಳಾಸಮುದಾಯದ ಹತಾಶೆ, ತಲ್ಲಣ, ನೋವು, ವೇದನೆ, ಖೇದವನ್ನು ಸಂವೇದನೆಯ ನೆಲೆಯಿಂದ ಪರಿಗ್ರಹಿಸಿ ಮೌಖಿಕ ಸಂಪ್ರದಾಯದವರು ರಾಮಾಯಣವನ್ನು ರಚಿಸಿದ್ದಾರೆ.

ಮೌಖಿಕ ರಾಮಾಯಣ ಸಂಪ್ರದಾಯದಲ್ಲಿ ಬುಡಕಟ್ಟು ಜನಾಂಗದ ಬದುಕು, ಸಾಂಸ್ಕೃತಿಕ ಅನನ್ಯತೆ ಅಭಿವ್ಯಕ್ತಗೊಂಡಿದೆ. ಆಹಾರ ಸಂಗ್ರಹಣೆಯಿಂದ ತೊಡಗಿ ಬೇಟೆ, ಪಶುಸಂಗೋಪನೆ, ಕೃಷಿ ಮುಂತಾದ ವಿಚಾರಗಳನ್ನು ಮೌಖಿಕ ಸಾಹಿತ್ಯ ಪರಂಪರೆ ಅನಾವರಣಗೊಳಿಸುತ್ತದೆ. ಹೊಸತರ ಅನ್ವೇಷಣೆಯಲ್ಲಿ ತೊಡಗಿದ ಮನುಷ್ಯನ ಸಾಂಸ್ಕೃತಿಕ ಮತ್ತು ಆರ್ಥಿಕ ಘರ್ಷಣೆ ಈ ಮಹಾಕಾವ್ಯಗಳ ಮೂಲಕ ಅಭಿವ್ಯಕ್ತಗೊಂಡಿದೆ. ಮೌಖಿಕ ರಾಮಾಯಣವು ಒಂದು ಸ್ಥಳೀಯ ಕಥೆ. ಸ್ಥಳೀಯ ಬದುಕಿನ ಚಿತ್ರಣವನ್ನು ಅನಾವರಣ ಮಾಡುವ ಮೌಖಿಕ ರಾಮಾಯಣ ಪರಂಪರೆಯ ಮೇಲೆ ಆಯಾಯ ಕಾಲದ ಸ್ಥಳೀಯ ಪ್ರಭಾವವನ್ನು ಗುರುತಿಸಲು ಸಾಧ್ಯ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ನಿಲುವಿಗೂ ಮೌಖಿಕ ರಾಮಾಯಣಗಳ ನಿಲುವಿಗೂ ವ್ಯತಾಸವಿದೆ. ಕೆಲವು ಸಂದರ್ಭಗಳಲ್ಲಿ ಸಾಮ್ಯವೂ ಕಾಣಿಸಿದೆ. ಹೀಗೆ ರಾಮಾಯಣದ ಮಹಿಳಾ ಪಾತ್ರಗಳ ನಿರೂಪಣೆಗೆ ಸಂಬಂಧಿಸಿದಂತೆ ಈ ಕಾವ್ಯದೊಂದಿಗೆ ಮೌಖಿಕ ರಾಮಾಯಣಗಳನ್ನು ಮುಖಾಮುಖಿಯಾಗಿಸಿ ಸಾಮ್ಯ ಮತ್ತು ಭಿನ್ನತೆಗಳನ್ನು ಗುರುತಿಸಲಾಗಿದೆ. ಮೌಖಿಕ ರಾಮಾಯಣಗಳಲ್ಲಿ ಮಾನ್ಯತೆ ಪಡೆಯದ ಸ್ತ್ರೀಪಾತ್ರಗಳು ಈ ಕಾವ್ಯದಲ್ಲಿ ಮಾನ್ಯತೆ ಪಡೆದಿವೆ. ಇಂಥ ಸ್ತ್ರೀಪಾತ್ರಗಳ ಅನನ್ಯತೆಯನ್ನು ಗುರುತಿಸುವುದು ನನ್ನ ಅಧ್ಯಯನದ ಪ್ರಧಾನ ಉದ್ದೇಶ. ಹಾಗಾಗಿ ಮೌಖಿಕ ರಾಮಾಯಣ ಪರಂಪರೆಗಳಾದ 'ಗೊಂಡರ ರಾಮಾಯಣ', 'ಹೊನ್ನಾಜಮ್ಮ ಹಾಡಿದ ರಾಮಾಯಣ',

'ಸಾವಿತ್ರಮ್ಮ ಹಾಡಿದ ಸನತ್ಕುಮಾರನ ಕಥೆ', 'ಕಂಸಾಳೆ ರಾಮಾಯಣ', ತಂಬೂರಿ ಸಂಪ್ರದಾಯದ 'ಸಂಪೂರ್ಣ ರಾಮಾಯಣ'ಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಈ ಮೌಖಿಕ ರಾಮಾಯಣಗಳ ಮಹಿಳಾ ಪಾತ್ರಗಳನ್ನು ಮಹಾನ್ವೇಷಣಂ ಮಹಾಕಾವ್ಯದೊಂದಿಗೆ ಮುಖಾಮುಖಿಯಾಗಿಸಿ ತೌಲನಿಕವಾಗಿ ಅಭ್ಯಸಿಸಲಾಗಿದೆ. ಮೌಖಿಕ ರಾಮಾಯಣದಲ್ಲಿ ಕಾಣಿಸಿರುವ ಮಹಿಳಾ ಪಾತ್ರಗಳ ವೈಶಿಷ್ಟ್ಯತೆಗಳನ್ನು ಗುರುತಿಸುತ್ತಾ ಮರೆಯಾದ ಪಾತ್ರಗಳಿಗೆ ಕಾರಣ ಶೋಧಿಸುವ ನೆಲೆಯಲ್ಲಿ ಅಧ್ಯಯನ ಸಾಗಿದೆ.

ಮೌಖಿಕ ರಾಮಾಯಣ ನಿರ್ವಚಿಸಿದ ಮಹಿಳಾ ಪಾತ್ರಗಳು ಓದುಗರಿಗೆ ಸ್ತ್ರೀಪರ ಕಾಳಜಿ ಮೂಡಿಸುತ್ತವೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳ ನಿರ್ವಚನದಲ್ಲಿ ಸ್ತ್ರೀಸಂವೇದನಾಶೀಲತೆ ವ್ಯಕ್ತವಾಗಿದೆ. ಮೌಖಿಕ ರಾಮಾಯಣದ ಮಹಿಳಾ ಪಾತ್ರಗಳು ಅನುಕಂಪ, ದೈನ್ಯತೆಯನ್ನು ಮೂಡಿಸುವ ನೆಲೆಯಲ್ಲಿ ಭಾವಗಳನ್ನು ವ್ಯಕ್ತಪಡಿಸುತ್ತವೆ. ಮಹಾನ್ವೇಷಣಂ ಮಹಾಕಾವ್ಯ ಸ್ತ್ರೀಯರ ಹಕ್ಕು, ಸಾಮರ್ಥ್ಯ, ಸಾಧನೆಯ ಸಾಧ್ಯತೆಗಳನ್ನು ಶೋಧಿಸುವ ನೆಲೆಯಲ್ಲಿ ಸ್ತ್ರೀಪರ ಕಾಳಜಿ ವಹಿಸಿದೆ. ಈ ಕಾಳಜಿ ಕಾವ್ಯದುದ್ದಕ್ಕೂ ಪ್ರವಹಿಸಿದೆ. ಈ ಮೂಲಕ ಕವಿ ಸ್ತ್ರೀಸಂವೇದನಾಶೀಲತೆಯನ್ನು ಕಾವ್ಯದ ಕೊನೆಯವರೆಗೂ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ ಎಂದೇ ಹೇಳಬೇಕು. ಈ ಕಾವ್ಯದಂತೆ ಮೌಖಿಕ ರಾಮಾಯಣ ಪರಂಪರೆಯಲ್ಲೂ ಮಹಿಳಾ ಸ್ಥಿತಿಗತಿಯ ಅನಾವರಣವಿದೆ. ಆದರೆ ಮೌಖಿಕ ರಾಮಾಯಣಗಳು ಮಹಿಳಾ ಬದುಕಿನ ಬವಣೆಯನ್ನು ನಿರ್ವಚಿಸುವುದರಲ್ಲೇ ನಿಂತುಬಿಟ್ಟಿವೆ. ಆದರೆ ಮಹಾನ್ವೇಷಣಂ ಮಹಾಕಾವ್ಯ ಮಹಿಳಾ ಬದುಕಿನ ಬವಣೆಗೆ ಕಾರಣ ಶೋಧಿಸುತ್ತಾ ಪರಿವರ್ತನೆಯನ್ನು ಅಪೇಕ್ಷಿಸಿದೆ. ಈ ಅಪೇಕ್ಷೆಯ ಹಿಂದೆ ಸ್ವಸ್ಥ ಸಮಾಜ ನಿರ್ಮಾಣದ ಉದಾತ್ತ ಆಶಯವಿದೆ. ತೌಲನಿಕ ಅಧ್ಯಯನದಲ್ಲಿ ಈ ಕಾವ್ಯದೊಂದಿಗೆ ಮೌಖಿಕ ರಾಮಾಯಣಗಳ ಸೀತೆ, ಶೂರ್ಪನಖಿ, ಮಂಡೋದರಿ ಮತ್ತು ಮಂಥರೆಯ ಪಾತ್ರಗಳನ್ನು ಮುಖಾಮುಖಿಯಾಗಿಸಿ ಅಭ್ಯಸಿಸಲಾಗಿದೆ.

**೬.೧.೧ ಸೀತೆ**

ಮೌಖಿಕ ರಾಮಾಯಣ ಪರಂಪರೆ ಸೀತೆಯ ಪಾತ್ರಕ್ಕೆ ಅಧಿಕ ಮಹತ್ವ ನೀಡಿದೆ. ಬಹುತೇಕ ಮೌಖಿಕ ರಾಮಾಯಣಗಳಲ್ಲಿ ಸೀತೆಯೇ ಕಥೆಯ ಕೇಂದ್ರಬಿಂದು. ಆಕೆಯನ್ನು ಕೇಂದ್ರಿಕರಿಸಿ ರಾಮಾಯಣದ ಇತರ ಪಾತ್ರಗಳು ಪ್ರತಿಕ್ರಿಯಿಸುತ್ತವೆ. ಸೀತೆಯ ಜನನ, ಸ್ವಯಂವರ, ಸೀತಾಪರಣ, ಅಗ್ನಿಪರೀಕ್ಷೆ ಮತ್ತು ಸೀತಾಪರಿತ್ಯಾಗಕ್ಕೆ ಸಂಬಂಧಿಸಿದಂತೆ ಮೌಖಿಕ ರಾಮಾಯಣಗಳು ವಿಭಿನ್ನ ಮನೋಧರ್ಮದ ನೆಲೆಯಲ್ಲಿ ಸೀತೆಯ ಬದುಕನ್ನು ಕಟ್ಟಿಕೊಟ್ಟಿವೆ. ಮೌಖಿಕ ರಾಮಾಯಣ ಪರಂಪರೆ ಸೀತೆಯ ಬದುಕನ್ನು ದೈನ್ಯತೆಯ ನೆಲೆಯಲ್ಲಿ ಕಟ್ಟಿಕೊಟ್ಟಿದೆ.

ಹೀಗೆ ನಿರೂಪಿಸುವಲ್ಲಿ ಜನಪದರಿಗೆ ಆಸಕ್ತಿ ಇದೆ. ಸಾಮಾನ್ಯ ಸ್ತ್ರೀಯೊಬ್ಬಳ ಬದುಕಿನ ಬವಣೆಯನ್ನು ಜನಪದರು ಸೀತೆಯ ನೆಲೆಯಲ್ಲಿ ನಿರೂಪಿಸಿದ್ದಾರೆ. ಪುರುಷಪ್ರಧಾನ ಸಾಮಾಜಿಕವ್ಯವಸ್ಥೆ ಹೆಣ್ಣಿನ ವಾಕ್‌ಶಕ್ತಿಯೊಂದಿಗೆ ಸ್ವಾತಂತ್ರ್ಯವನ್ನು ಕಸಿದಿದೆ. ಸ್ತ್ರೀಸಮುದಾಯವನ್ನು ಮೂಕತೆಯ ನೆಲೆಯಲ್ಲಿ ನಿರೂಪಿಸುವಲ್ಲಿ ಜನಪದಮನಸ್ಸು ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ. ಹಕ್ಕು, ಸ್ವಾತಂತ್ರ್ಯ, ಅವಕಾಶ, ಸಾಮರ್ಥ್ಯವನ್ನು ಪುರುಷನ ನೆಲೆಯಲ್ಲಿ ಅಭಿವ್ಯಕ್ತಿಸುವಲ್ಲಿ ಮೌಖಿಕ ರಾಮಾಯಣ ಪರಂಪರೆ ಅಧಿಕ ಆಸಕ್ತಿ ವಹಿಸಿದೆ. ಮೌಖಿಕ ಸಂಪ್ರದಾಯದವರಿಗೆ ಸೀತೆ ದೂರದವಳಲ್ಲ. ಜನಪದರ ಭಾವಕೋಶದ ವ್ಯಾಪ್ತಿಗೆ ಒಳಪಡುವವಳು. ಹಾಗಾಗಿ ಸೀತೆಯ ಬದುಕನ್ನು ಜನಪದ ಮಹಿಳೆಯ ಬದುಕಾಗಿಯೇ ಕಾಣಲಾಗಿದೆ. ಜನಪದ ಹೆಣ್ಣುಮಗಳೊಬ್ಬಳ ಬದುಕನ್ನು ಅಭ್ಯಾಸ ಮಾಡುವ ಉದ್ದೇಶ ಮೌಖಿಕ ಸಂಪ್ರದಾಯದವರಿಗೆ ಇತ್ತು. ಹಾಗಾಗಿ ಜನಪದರಿಗೆ ಸೀತೆ ರಾಣಿಯಾಗಿ ಕಾಣಿಸಿಲ್ಲ. ನಿತ್ಯಬದುಕಿನ ಹೆಣ್ಣಿನ ಜಂಜಾಟದ ಸ್ಥಿತಿ, ನರಳುವಿಕೆ ಮೌಖಿಕ ರಾಮಾಯಣದ ಸೀತೆಯ ಪಾತ್ರಮುಖೇನ ಅಭಿವ್ಯಕ್ತಗೊಂಡಿದೆ. ಪುರುಷಪ್ರಭುತ್ವ ಸ್ತ್ರೀಯರನ್ನು ಅಸಹಾಯಕತೆಯ ನೆಲೆಯಲ್ಲಿ ಸ್ವೀಕರಿಸಿದೆ. ಹೀಗಿರುವಾಗ ಸ್ತ್ರೀಯರ ಸಾಧನೆಯ ಸಾಧ್ಯತೆಗಳನ್ನು ಶೋಧಿಸುವ ಉದ್ದೇಶ ಮೌಖಿಕ ಸಂಪ್ರದಾಯದವರಿಗೆ ಇಲ್ಲ ಎಂದೇ ಹೇಳಬೇಕು.

ಪುರುಷ ಪ್ರಧಾನ, ಮಹಿಳೆ ಅಧೀನ ಎಂಬ ಸಿದ್ಧಾಂತಕ್ಕೆ ಮಣಿದವರು ಮೌಖಿಕ ಸಂಪ್ರದಾಯದವರು. ಈ ಮಣಿಯುವಿಕೆ ಯಜಮಾನ ಸಂಸ್ಕೃತಿಯನ್ನು ಪ್ರೋತ್ಸಾಹಿಸುತ್ತಾ ಮುಂದೆ ಸಾಗಿದೆ. ಈ ಸಾಗುವಿಕೆ ಸ್ತ್ರೀಸಮುದಾಯದ ವೈಯಕ್ತಿಕ ಹಿತಾಸಕ್ತಿಗಳನ್ನು ಕಡೆಗಣಿಸಿದೆ. ಈ ನಿರ್ಲಕ್ಷಭಾವ ಸಮಗ್ರ ಸ್ತ್ರೀಸಮುದಾಯದ ಮೇಲೆ ಪರಿಣಾಮ ಬೀರಿದೆ. ಈ ನಿರ್ಲಕ್ಷವನ್ನು ಅರಿಯುವ ಪ್ರಜ್ಞೆ ಮೌಖಿಕ ರಾಮಾಯಣದ ಮಹಿಳಾ ಪಾತ್ರಗಳಿಗೆ ಇಲ್ಲ. ಹಾಗಾಗಿ ಪುರುಷಪ್ರಧಾನ ಸಮಾಜ ಒಡ್ಡುವ ಅಡ್ಡಿ ಆತಂಕಗಳಿಗೆ ಮೌಖಿಕ ಸಂಪ್ರದಾಯದ ಮಹಿಳಾ ಪಾತ್ರಗಳು ಬದ್ಧವಾಗಿವೆ. ಆಜ್ಞೆಯನ್ನು ರೂಪಿಸುವ, ಅನುಷ್ಠಾನಕ್ಕೆ ತರುವ ಅವಕಾಶವನ್ನು ಮೌಖಿಕ ರಾಮಾಯಣ ಪರಂಪರೆ ಪುರುಷ ಪಾತ್ರಗಳಿಗೆ ನೀಡಿದೆ. ಈ ಆಜ್ಞೆಯನ್ನು ಕಾಯೇನವಾಚಾಮನಸಾ ಪಾಲಿಸುವ ಪಾತ್ರಗಳಾಗಿ ಇಲ್ಲಿನ ಸ್ತ್ರೀಪಾತ್ರಗಳನ್ನು ನಿರೂಪಿಸಲಾಗಿದೆ. ಹೀಗೆ ಏಕಪಕ್ಷೀಯ ನೆಲೆಯಿಂದ ಬದುಕನ್ನು ರೂಪಿಸುವಲ್ಲಿ ಜನಪದರಿಗೆ ಹಿಂಜರಿಕೆಯಾಗಲಿ, ಮುಜುಗರವಾಗಲಿ ಇಲ್ಲ.

ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ ಬುಡಕಟ್ಟು ಜನಾಂಗ ಗೊಂಡರದ್ದು. 'ಗೊಂಡರ ರಾಮಾಯಣ' ತನ್ನದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದೆ. ಶಿಷ್ಟ ರಾಮಾಯಣದ ಕಥಾಭಿತ್ತಿಗೂ 'ಗೊಂಡರ ರಾಮಾಯಣ'ದ ಕಥಾವಸ್ತುವಿಗೂ ಅಂತರವಿದೆ.

ಇಲ್ಲಿ ಆಡಂಬರದ ಪ್ರಜ್ಞೆ ಇಲ್ಲ. ಖೇದವಿದೆ. ಪ್ರತಿಭಟನೆ ಇದೆ. ಯಾವುದೇ ಪಾತ್ರಗಳನ್ನು ಪ್ರಧಾನ, ಅಪ್ರಧಾನ ಎಂದು ಗುರುತಿಸುವಂತಿಲ್ಲ. ಇಲ್ಲಿ ಸೀತೆಯೇ ಕೇಂದ್ರಬಿಂದು. ಸೀತೆಯನ್ನು ಕೇಂದ್ರೀಕರಿಸಿ ರಾಮಾಯಣದ ಇತರ ಪಾತ್ರಗಳು ಪ್ರತಿಕ್ರಿಯಿಸುತ್ತವೆ. ಸೀತೆಯ ವೈಯಕ್ತಿಕ ನೆಲೆಯ ಅಭಿಪ್ರಾಯ, ತೀರ್ಮಾನ, ಅಭಿಲಾಷೆಗಳಿಗೆ ಇಲ್ಲಿ ಆದ್ಯತೆ ಇದೆ. ಜನಪದರು ಇಲ್ಲಿ ಸೀತೆಯನ್ನು ರಾಜಕುವರಿಯಾಗಿ ಅಭ್ಯಾಸಮಾಡಿಲ್ಲ. ಮಣ್ಣಿನ ಮಗಳಾದ ಸೀತೆ ಶ್ರಮಸಂಸ್ಕೃತಿಯ ಪ್ರತಿನಿಧಿ. ಶ್ರಮ ಸಂಸ್ಕೃತಿಯೊಂದಿಗೆ ಬೆಸೆಯುವ ಸೇತುವಾಗಿ ಇಲ್ಲಿ ಸೀತೆ ಕಾಣಿಸಿದ್ದಾಳೆ. ಜನಸಾಮಾನ್ಯ ಮಹಿಳೆಯಾಗಿ ಸೀತೆಯನ್ನು ನಿರೂಪಿಸುವಲ್ಲಿ ಜನಪದರಿಗೆ ಮುಜುಗರವಿಲ್ಲ. ಹಾಗಾಗಿ ಕೃತಕ ಆಡಂಬರಗಳಿಂದ ಇಲ್ಲಿ ಸೀತೆಯನ್ನು ಬಹುದೂರ ಉಳಿಸಲಾಗಿದೆ.

ರಾಜರ ವೈಭೋಗದ ಬದುಕಿಗಿಂತ ಜನಸಾಮಾನ್ಯರ ಬೆವರಿನ ಬದುಕು ಜನಪದರಿಗೆ ಪ್ರಧಾನವಾಯಿತು. ಹಾಗಾಗಿ ಸೀತೆ ಇಲ್ಲಿ ಜನಪದ ಹೆಣ್ಣುಮಗಳಾಗಿ ಕಾಣಿಸಿಕೊಳ್ಳುತ್ತಾಳೆ. ಜನಪದರ ಸೀತೆ ವಿಮರ್ಶಕರ ಮನಸ್ಸಿಗೆ ತೀರಾ ಸಮೀಪದಲ್ಲಿದ್ದಾಳೆ. ಇಲ್ಲಿ ಸೀತೆಯ ವಿವಾಹಪೂರ್ವದ ಬದುಕಿನ ಸ್ಥಿತಿಗೂ ವಿವಾಹೋತ್ತರ ಬದುಕಿನ ಸ್ಥಿತಿಗೂ ಬಹುತೇಕ ವ್ಯತ್ಯಾಸ ಇಲ್ಲ. ಜನಸಾಮಾನ್ಯ ವರ್ಗದ ಹೆಣ್ಣೊಬ್ಬಳನ್ನು ಶ್ರೀಮಂತ ಕುಟಂಬಕ್ಕೆ ಸೇರಿಸುವ ಒತ್ತಾಸೆ, ಉದ್ದೇಶ, ಮಹತ್ವಾಕಾಂಕ್ಷೆ 'ಗೊಂಡರ ರಾಮಾಯಣ'ಕ್ಕೆ ಇಲ್ಲ. ರೈತಾಪಿ ವರ್ಗದ ಬದುಕನ್ನು ಸೀತೆಯ ಪಾತ್ರಮುಖೇನ ಪರಿಗ್ರಹಿಸಲಾಗಿದೆ. ಸ್ವಂತಿಕೆಯ ನೆಲೆಯಿಂದ ತೀರ್ಮಾನ ಕೈಗೊಳ್ಳುವಲ್ಲಿ ಇಲ್ಲಿನ ಸೀತೆಗೆ ಹಿಂಜರಿಕೆ ಇಲ್ಲ.

ಸೀತಾ ಸ್ವಯಂವರಕ್ಕೆ ಮುಂಚೆ ಲಕ್ಷ್ಮಣನಿಂದ ಚಮತ್ಕಾರ ನಡೆಯುತ್ತದೆ. ಬಾಯಿಂದ ನೀರು ಹಾಕಿ ಮೂಗಿನಿಂದ ಹೊರತರುವ ಈ ಚಮತ್ಕಾರ ನೋಡಲು ಸೀತೆ ಮುಂದಾಗುತ್ತಾಳೆ. ಹೀಗೆ ವಾಸ್ತವಕ್ಕೆ ಸಮೀಪವಾಗಿ ಸೀತೆಯ ಬದುಕನ್ನು ನಿರೂಪಿಸುವಲ್ಲಿ ಮೌಖಿಕ ಸಂಪ್ರದಾಯದವರಿಗೆ ಉತ್ಸುಕತೆ ಇದೆ. ಮಾನವಸಹಜ ಅಪೇಕ್ಷೆಯನ್ನು ಅಡಗಿಸುವ ಕೆಲಸ ಇಲ್ಲಿ ನಡೆದಿಲ್ಲ. ಸಹಜ ಸ್ತ್ರೀಯೊಬ್ಬಳ ಮನೋಭಿಲಾಷೆ ಇಲ್ಲಿ ಅಭಿವ್ಯಕ್ತಗೊಂಡಿದೆ. ಸೀತೆಯನ್ನು ಮನೋರಂಜನೆಯಿಂದ ದೂರ ಇರಿಸಿ ಸಹಜಭಾವವನ್ನು ಕಸಿಯುವ ಉದ್ದೇಶ ಮೌಖಿಕ ರಾಮಾಯಣಕ್ಕೆ ಇಲ್ಲ. ಇಲ್ಲಿ ಗ್ರಾಮೀಣ ಪ್ರದೇಶದ ಮುಗ್ಧ ಹೆಣ್ಣುಮಗಳ ನೈಜಬದುಕು ಅನಾವರಣಗೊಂಡಿದೆ.

ಜಿಂಕೆಯ ಚರ್ಮದಿಂದ ಕುಪ್ಪಸ ಅಪೇಕ್ಷಿಸುವ ಸೀತೆಯಲ್ಲಿ ಜನಪದ ಹೆಣ್ಣು ಮಗಳ ಬಯಕೆ, ಆಸಕ್ತಿ ಅಭಿವ್ಯಕ್ತಿಗೊಂಡಿದೆ. ರಾಮನ ಉಪದೇಶದ ಮಾತುಗಳನ್ನು ಮೀರುವ

ಮಟ್ಟದಲ್ಲಿ ಸೀತೆಯ ಅಪೇಕ್ಷೆ ವ್ಯಕ್ತಗೊಂಡಿದೆ. 'ಗೊಂಡರ ರಾಮಾಯಣ' ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಬೆಂಬಲಿಸುತ್ತದೆ. ಮಾಯಾಜಿಂಕೆ ಎಂಬುದಾಗಿ ತಿಳಿದು ರಾಮ ಸೀತೆಯ ಅಪೇಕ್ಷೆಯನ್ನು ಪೂರೈಸುವಲ್ಲಿ ಮುಂದಾಗುತ್ತಾನೆ. ಸೀತೆಯ ಅಪೇಕ್ಷೆಗೆ ಇಲ್ಲಿ ರಾಮನಿಂದ ತಡೆ ಇಲ್ಲ. ತನ್ನಿಷ್ಟ ಪೂರೈಸದ ನೀನು ವ್ಯರ್ಥ ಎಂಬಂತೆ ಮೂದಲಿಸಿದ ಸೀತೆಯ ಮಾತಿನ ಕುರಿತು ಇಲ್ಲಿನ ರಾಮನಿಗೆ ಆಕ್ರೋಶವಿಲ್ಲ. ಮಹಿಳೆಯರ ಅಭಿಪ್ರಾಯಸ್ವಾತಂತ್ರ್ಯ ಮತ್ತು ವೈಯಕ್ತಿಕ ನೆಲೆಯ ಅಪೇಕ್ಷೆಗಳಿಗೆ ಇಲ್ಲಿ ಆದ್ಯತೆ ಇದೆ. ತನ್ನ ಅಪೇಕ್ಷೆಯನ್ನು ನಿರಾತಂಕವಾಗಿ ವ್ಯಕ್ತಪಡಿಸುವಲ್ಲಿ ಇಲ್ಲಿ ಸೀತೆಗೆ ಯಾವುದೇ ಹಿಂಜರಿಕೆ ಇಲ್ಲ. ಇಲ್ಲಿ ಸೀತೆಯ ಅಪೇಕ್ಷೆಯೊಂದಿಗೆ ಪ್ರತಿಭಟನಾ ಸ್ವರೂಪ ವ್ಯಕ್ತವಾಗುತ್ತದೆ.

ಸ್ತ್ರೀಸಮುದಾಯದ ಕುರಿತು ಪುರುಷಪ್ರಧಾನ ಸಮಾಜದ ಅಪೇಕ್ಷೆಗಳು ಗರಿಷ್ಠ ಪ್ರಮಾಣದಲ್ಲಿ ಇವೆ. ಅಂತೆಯೇ 'ಗೊಂಡರ ರಾಮಾಯಣ'ದ ಸೀತೆಯ ಪಾತ್ರ ಹೊಸ ಚಿಂತನೆಯನ್ನು ಎದುರಿಡುತ್ತದೆ. ಮೌಖಿಕ ಮಹಿಳಾಪರಂಪರೆ ಪುರುಷಸಮುದಾಯದಿಂದ ಕೆಲವು ಮೌಲ್ಯಗಳನ್ನು ಅಪೇಕ್ಷಿಸುತ್ತದೆ. ಮೌಖಿಕ ಪರಂಪರೆ ನಿರ್ದಿಷ್ಟ ಮಾದರಿಯಲ್ಲಿ ಪುರುಷರ ಬದುಕನ್ನು ಕಟ್ಟಿದೆ. ಈ ಸಿದ್ಧಮಾದರಿ ಪುರುಷಸಮುದಾಯದಿಂದ ನಿರ್ದಿಷ್ಟ ಶಕ್ತಿಸಾಮರ್ಥ್ಯವನ್ನು ಅಪೇಕ್ಷಿಸಿದೆ. ಹಾಗಾಗಿ ಜಿಂಕೆಯನ್ನು ರಾಮ ಹೊಡೆಯಲೇಬೇಕು ಎಂಬುದು ಮೌಖಿಕ ರಾಮಾಯಣದ ಸೀತೆಯ ಉದ್ದೇಶ. ಪತಿಯಾದವನು ಪತ್ನಿಯ ಅಪೇಕ್ಷೆಗಳನ್ನು ಈಡೇರಿಸುವಲ್ಲಿ ಸಶಕ್ತನಾಗಬೇಕು ಎಂಬುದು ಮೌಖಿಕ ಸಂಪ್ರದಾಯದವರ ಅಭಿಲಾಷೆ. ಈ ಸಂದರ್ಭಕ್ಕೆ ಅನುಗುಣವಾಗಿ ಮುಖ್ಯವಾಗಿ ಎರಡು ವಿಚಾರಗಳು ವ್ಯಕ್ತವಾಗುತ್ತವೆ.

೧. ಸೀತೆಯ ಅಭಿಪ್ರಾಯ, ಆಸೆ ತೀರ್ಮಾನಗಳಿಗೆ ಇಲ್ಲಿ ಅಧಿಕ ಮಹತ್ವ ಇದೆ. ಸೀತೆಯ ಸ್ಪಷ್ಟ ನಿಲುವುಗಳು ಮಾತೃಪ್ರಧಾನ ಕುಟುಂಬವ್ಯವಸ್ಥೆಯ ಮೌಲ್ಯಗಳನ್ನು ಪ್ರೋತ್ಸಾಹಿಸುತ್ತವೆ.
೨. ಪತಿಯಾದವನು ಸತಿಯ ಅಪೇಕ್ಷೆಯನ್ನು ಪೂರೈಸುವಲ್ಲಿ ಸಶಕ್ತನಾಗಿರಬೇಕು ಎಂಬುದು ಬುಡಕಟ್ಟು ಜನಾಂಗದ ಆಶಯ.

ಮಾಯಾಜಿಂಕೆಯನ್ನು ತಂದುಕೊಡುವಲ್ಲಿ ಉತ್ಸುಕನಾದ ರಾಮ ಕೊನೆಗೆ ಸೀತೆಯ ವಿಚಾರದಲ್ಲಿ ಕ್ರೂರಿಯಾಗುತ್ತಾನೆ. ಮಡಿವಾಳ ಮಾಚಯ್ಯನ ಮಾತಿಗೆ ಬೆಲೆತೆತ್ತು ಸೀತೆಯನ್ನು ಕಾಡಿಗೆ ಅಟ್ಟುತ್ತಾನೆ. ಹೆಣ್ಣಿನ ಅಂತರಂಗ ಭಾವವನ್ನು ಗ್ರಹಿಸುವಲ್ಲಿ ಜನಪದ ಮನಸ್ಸು ವಿಫಲವಾಗಿದೆ ಎಂದೇ ಹೇಳಬೇಕು. ಈ ವಿಚಾರದಲ್ಲಿ ಜನಪದ ಮನಸ್ಸು ಪುರುಷನಿಷ್ಠ ಚಿಂತನೆಗೆ ಬದ್ಧವಾಗಿದೆ. ಸರಿ–ತಪ್ಪುಗಳ ವಿಮರ್ಶೆಗೆ ಇಲ್ಲಿ ಅವಕಾಶವೇ ಇಲ್ಲವಾಗಿದೆ. ಪುರುಷನ ಏಕಪಕ್ಷೀಯ ತೀರ್ಪಿಗೆ ಹೆಣ್ಣು ಬದ್ಧಳಾಗಬೇಕಾದ ದಾರುಣ ಪರಿಸ್ಥಿತಿಯ

ವಿವರವಿದೆ. ಸೀತೆಯನ್ನು ಈ ವಿಚಾರದಲ್ಲಿ ಅಭಿಪ್ರಾಯ ಸ್ವಾತಂತ್ರ್ಯದಿಂದ ಬಹುದೂರ ಉಳಿಸಲಾಗಿದೆ. ಬಾಹ್ಯನೋಟಕ್ಕೆ ರಾಮನ ತೀರ್ಪು ಪ್ರಜಾಪರ ಸಂಹಿತೆಯಾಗಿ ಕಂಡರೂ ವಾಸ್ತವದಲ್ಲಿ ಹೆಣ್ಣಿಗಾದ ಅನ್ಯಾಯ ಎಂದೇ ಹೇಳಬೇಕು.

ಸೀತೆಯ ಅಂತರಂಗಶಕ್ತಿ ಮತ್ತು ಸಂವೇದನೆಯನ್ನು ಅರ್ಥೈಸಲಾಗದ ರಾಮ ಸೀತೆಯ ತಲೆ ಕಡಿಯುವಂತೆ ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ. ಈ ವಿಚಾರದಲ್ಲಿ ಸೀತೆಯನ್ನು ಹೀನಾಯವಾಗಿ ನಡೆಸಿಕೊಳ್ಳಲಾಗಿದೆ. ಮೌಖಿಕ ಪರಂಪರೆಯವರು ಪೂರ್ವಗ್ರಹಗಳಿಂದ ರಾಮಾಯಣ ರಚಿಸದೆ ಹೋದರೂ ಪುರುಷಪ್ರಾಬಲ್ಯವನ್ನು ಪ್ರೋತ್ಸಾಹಿಸಿದ್ದಾರೆ. ಅಧಿಕಾರಶಾಹಿವರ್ಗದ ತೀರ್ಪನ್ನು, ಪ್ರಭುತ್ವಪರಂಪರೆಯ ದಬ್ಬಾಳಿಕೆಯನ್ನು ಒಡೆಯುವಲ್ಲಿ ಮೌಖಿಕ ಪರಂಪರೆಯವರು ವಿಫಲರಾಗಿದ್ದಾರೆ ಎಂದೇ ಹೇಳಬೇಕು. ಪುರುಷರಿಂದ ತಿರಸ್ಕೃತರಾದ ಮಹಿಳೆಯರನ್ನು ಕಾಡಿಗೆ ಬಿಡುವ ಪದ್ಧತಿ ಇತ್ತು ಎಂಬುದು ಮೌಖಿಕ ರಾಮಾಯಣದಲ್ಲಿ ವ್ಯಕ್ತ. ಸೀತೆಯನ್ನು ಪ್ರಶ್ನೆಗೆ ಒಳಗುಪಡಿಸದ ರಾಮನ ಏಕಪಕ್ಷೀಯ ತೀರ್ಮಾನದ ಕುರಿತು ವಿವೇಚಿಸಬೇಕಿದೆ. 'ಗೊಂಡರ ರಾಮಾಯಣ'ದ ಸೀತೆ ತನಗಾದ ಅನ್ಯಾಯಕ್ಕೆ ಪ್ರತಿಭಟನೆ ವ್ಯಕ್ತಪಡಿಸುವುದಿಲ್ಲ. ಪುರುಷಪ್ರಭುತ್ವದ ತೀರ್ಪನ್ನು ಪ್ರಶ್ನಿಸದ, ಆರೋಪವನ್ನು ಪರಿಗ್ರಹಿಸದ ದುರ್ಬಲ ವ್ಯಕ್ತಿತ್ವವಾಗಿ ಇಲ್ಲಿ ಸೀತೆ ಕಾಣಿಸಿದ್ದಾಳೆ. ಜನಪದರು ಕೃಷಿಸಂಪ್ರದಾಯವನ್ನು ನೆಚ್ಚಿಕೊಂಡಿದ್ದರಿಂದ ಕಾವ್ಯದ ಕೊನೆಗೆ ಸೀತೆಯನ್ನು ಮಣ್ಣಿಗೇ ಸೇರಿಸಿಬಿಟ್ಟಿದ್ದಾರೆ. ಬದುಕಲ್ಲಿ ಎದುರಾಗುವ ಸನ್ನಿವೇಶವನ್ನು ದಿಟ್ಟತನದಿಂದ ಎದುರಿಸುವ ಪ್ರಬಲ ವ್ಯಕ್ತಿತ್ವವಾಗಿ ಮೌಖಿಕ ಸಂಪ್ರದಾಯದವರು ಸೀತೆಯನ್ನು ಸ್ವೀಕರಿಸಿಲ್ಲ. ಪುರುಷಪರ ಸಾಮಾಜಿಕ ವ್ಯವಸ್ಥೆ ಸ್ತ್ರೀಸಮುದಾಯಕ್ಕೆ ಒಂದಲ್ಲ ಒಂದು ಬಗೆಯ ಅಡ್ಡಿ ಆತಂಕಗಳನ್ನು ಒಡ್ಡುತ್ತಾ ಬಂದಿದೆ. ಸವಾಲಿಗೆ ಪ್ರತಿಸವಾಲು ಹಾಕುವ, ಪುರುಷಪ್ರಧಾನ ಸಮಾಜದ ಪೂರ್ವಗ್ರಹಗಳನ್ನು ಹತ್ತಿಕ್ಕುವ ಅವಕಾಶಗಳಿಂದ ಮಹಿಳೆಯರನ್ನು ಬಹುದೂರ ಉಳಿಸಲಾಗಿದೆ.

'ಹೊನ್ನಾಜಮ್ಮ ಹಾಡಿದ ಜನಪದ ರಾಮಾಯಣ'ದ ಕೇಂದ್ರ ಬಿಂದು ರಾಮ. ಇಲ್ಲಿ ರಾಮನನ್ನು ಪ್ರಭುತ್ವಶಕ್ತಿಯ ಪ್ರತಿನಿಧಿಯಾಗಿ ನಿರೂಪಿಸಲಾಗಿದೆ. ಸ್ತ್ರೀಸಮುದಾಯಕ್ಕೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಚಿಂತನೆಯನ್ನು ಗಟ್ಟಿಗೊಳಿಸಲಾಗಿದೆ. ಸೀತೆಯನ್ನು ಆಜ್ಞಾಪಾಲಕಿಯಾಗಿ ನಿರೂಪಿಸಿ ಅವಳ ಸಹಜ ವ್ಯಕ್ತಿತ್ವವನ್ನು ಕಸಿಯಲಾಗಿದೆ. ಸ್ವಂತಿಕೆ ಇಲ್ಲದ ದುರ್ಬಲ ವ್ಯಕ್ತಿತ್ವವಾಗಿ ನಿರೂಪಿಸುತ್ತಾ ಸೀತೆಯನ್ನು ದುರ್ಬಲಳನ್ನಾಗಿಸಲಾಗಿದೆ. ಸತಿಯ ಪಾತಿವ್ರತ್ಯವನ್ನು ಪತಿ ಪರೀಕ್ಷಿಸುವ ಪದ್ಧತಿಯನ್ನು ಇಲ್ಲಿ ಪುಷ್ಟೀಕರಿಸಲಾಗಿದೆ. ಹೀಗೆ ಇಲ್ಲಿ ಮೌಖಿಕ ಸಂಪ್ರದಾಯದ ಮನಸ್ಸು ಯಜಮಾನ ಸಂಸ್ಕೃತಿಯ ಪರ ಕೆಲಸ

ಮಾಡಿರುವುದು ಸ್ಪಷ್ಟ. ಸತಿಯ ಪಾತಿವ್ರತ್ಯ ಪರೀಕ್ಷೆಗೆ ಆದ್ಯತೆ ನೀಡಿದ ಮೌಖಿಕ ರಾಮಾಯಣ ಪರಂಪರೆಗೆ ಪತಿಯ ಪಾತಿವ್ರತ್ಯದ ಪರೀಕ್ಷೆ ಮುಖ್ಯವಾಗಿಲ್ಲ.

'ಹೊನ್ನಾಜಮ್ಮ ಹಾಡಿದ ಜನಪದ ರಾಮಾಯಣ'ದಲ್ಲಿ ಬದುಕಿನ ದಾರುಣ ಸನ್ನಿವೇಶವನ್ನು ಅನುಕಂಪದ ನೆಲೆಯಲ್ಲಿ ಬಿತ್ತರಿಸಲಾಗಿದೆ. ಹೀಗೆ ಸೀತೆಯ ಬದುಕಿನ ಬವಣೆಯನ್ನು ತಿಳಿಸುವುದೇ ಮೌಖಿಕ ಸಂಪ್ರದಾಯದವರ ಮೂಲ ಉದ್ದೇಶವಾಯಿತು. ಪರಿಣಾಮ ಬಹುತೇಕ ಮಹಿಳಾ ಪಾತ್ರಗಳನ್ನು ಬದಿಗೆ ತಳ್ಳಲಾಯಿತು. ಸೀತೆಯನ್ನು ಬಹುವಿಧದ ಪರೀಕ್ಷೆಗೆ ಒಳಗುಪಡಿಸುವುದು ರಾಮನೊಬ್ಬನ ಉದ್ದೇಶವಲ್ಲ. ಹೀಗೆ ನಿರೂಪಿಸುವಲ್ಲಿ ಮೌಖಿಕ ಪರಂಪರೆಯ ಮನಸ್ಸು ಪುರುಷಪರ ನಿಲುವನ್ನು ತಳೆದಿದೆ ಎಂಬುದು ಸ್ಪಷ್ಟ. ಇದು ಆ ಕಾಲದ ಜನಪದ ಮೌಲ್ಯ. ಪ್ರಭುತ್ವಪರಂಪರೆಯ ತೀರ್ಪನ್ನು ಸ್ವೀಕರಿಸುವಲ್ಲಿ ಮೌಖಿಕ ಪರಂಪರೆಯ ಮನಸ್ಸು ತೆರೆದಿತ್ತು. ಆದ್ದರಿಂದ ಅವರಿಗೆ ರಾಮನ ತೀರ್ಪು ಮುಖ್ಯವಾಯಿತೇ ವಿನಾ ಸೀತೆಯ ಬದುಕಲ್ಲ. ಪಾತಿವ್ರತ್ಯದ ಆರೋಪ, ನಿರ್ಬಂಧಗಳು ಸ್ತ್ರೀಸಮುದಾಯಕ್ಕೆ ಮೀಸಲಾಗಿತ್ತು. ಪುರುಷಪ್ರಧಾನ ಸಾಮಾಜಿಕವ್ಯವಸ್ಥೆಯ ಇತಿಮಿತಿಗಳನ್ನು ಸಮಸ್ತ ಸ್ತ್ರೀಸಮುದಾಯ ಮೀರುವಂತಿರಲಿಲ್ಲ. ಮೀರಿದಲ್ಲಿ ಘೋರಶಿಕ್ಷೆಗೆ ಒಳಗಾಗುವ ಪ್ರಮೇಯ ಎದುರಾಗುತಿತ್ತು. ಹಾಗಾಗಿ ಸೀತೆಯ ತುಡಿತ, ಒಳತೋಟಿಯನ್ನು ಅರಿಯುವಲ್ಲಿ ಜನಪದ ಮನಸ್ಸು ವಿಫಲವಾಗಿದೆ ಎಂದೇ ಹೇಳಬೇಕು. ವೈಯಕ್ತಿಕ ನೆಲೆಯ ಅಭಿಪ್ರಾಯ, ಅವಕಾಶಗಳನ್ನು ಇಲ್ಲಿ ಮೌಖಿಕ ಸಾಹಿತ್ಯ ಪರಂಪರೆ ಪುರುಷರಿಗಾಗಿಯೇ ಮೀಸಲಿರಿಸಿದೆ.

'ಹೊನ್ನಾಜಮ್ಮ ಹಾಡಿದ ಜನಪದ ರಾಮಾಯಣ'ದಲ್ಲಿ ರಾಮಸೀತೆಗೆ ಸಂಬಂಧಿಸಿದಂತೆ ಎರಡು ಮುಖ್ಯ ವಿಚಾರಗಳನ್ನು ಪರಿಗ್ರಹಿಸಬೇಕಿದೆ.

೧. ರಾಮ ಪೂರ್ವಾಪರ ಯೋಚಿಸದೆ ಸೀತೆಯನ್ನು ದಾರುಣ ಪರೀಕ್ಷೆಗೆ ಒಳಗು ಮಾಡಿದ. ಈ ಮೂಲಕ ಸೀತೆಯ ಪಾತಿವ್ರತ್ಯವನ್ನು ರಾಮ ಶಂಕಿಸಿದಂತಾಗಲಿಲ್ಲವೇ?

೨. ಜನಾಪವಾದದ ಭೀತಿಗೆ ಒಳಗಾದ ರಾಮನಿಗೆ ಸೀತೆಯ ಪಾತಿವ್ರತ್ಯವನ್ನು ಸಾಬೀತುಪಡಿಸುವ ಉದ್ದೇಶ ಇತ್ತೇ?

ವಾಸ್ತವವಾಗಿ ರಾಮ ಸೀತೆಯ ಕುರಿತು ಸಂಶಯ ತಾಳಿಲ್ಲ ಎಂದಾದಲ್ಲಿ ಪರೀಕ್ಷಿಸುವ ಅಗತ್ಯತೆ ಏನಿತ್ತು? ಎಂಬುದು ಇಲ್ಲಿ ಚರ್ಚಿತವಾಗಬೇಕಾದ ವಿಚಾರ. ಲೋಕದ ಜನರ ಮೆಚ್ಚುಗೆಗಾಗಿ ರಾಮ ಈ ನಿರ್ಧಾರ ಕೈಗೊಂಡಿದ್ದಲ್ಲಿ ಈ ಕುರಿತು ವಿಮರ್ಶಿಸಬೇಕಾಗುತ್ತದೆ. ತನ್ನ ಪ್ರತಿಷ್ಠೆಯನ್ನು ಉಳಿಸಿಕೊಳ್ಳುವ ರಾಮನಿಗೆ ಸೀತೆಯ ಬದುಕು ಮುಖ್ಯವಾಗಲಿಲ್ಲ. ಪ್ರಭುತ್ವಪರಂಪರೆಯ ತೀರ್ಪಿಗೆ ಬದ್ಧಳಾದ ಸೀತೆಯ ಮೂಕತೆ ಇಲ್ಲಿದೆ. ಮೌಖಿಕ ಸಾಹಿತ್ಯ ರಾಮನನ್ನು ಸಾಧಕನನ್ನಾಗಿ ನಿರೂಪಿಸುವ ತುಡಿತದಲ್ಲಿ ಸೀತೆಯ ಬದುಕನ್ನು ಅಲಕ್ಷಿಸಿದೆ. ರಾಮನ ತೀರ್ಪನ್ನು ಪ್ರೋತ್ಸಾಹಿಸುತ್ತಾ ರಾಮನನ್ನು ಸಾಧಕನನ್ನಾಗಿಯೇ ನಿರೂಪಿಸಿದೆ.

ಸೀತೆಯ ಬದುಕನ್ನು ಕಟ್ಟುವಲ್ಲಿ ಮೌಖಿಕ ಪರಂಪರೆಯವರಿಗೆ ಯಾವುದೇ ಕಾಳಜಿ ಇಲ್ಲ. ರಾಮನನ್ನು ಶಕ್ತಿಯ ಪ್ರತಿನಿಧಿಯಾಗಿ ನಿರೂಪಿಸಿದ ಮೌಖಿಕ ರಾಮಾಯಣ ಪರಂಪರೆ ಸ್ತ್ರೀಸಮುದಾಯವನ್ನು ಅಲಕ್ಷಿಸಿದೆ. ಸ್ವತಃ ಮಗಳನ್ನು ಜನಕನಿಂದ ಬಯಸಿದ ರಾವಣನನ್ನು ಇಲ್ಲಿ ದುಷ್ಟನನ್ನಾಗಿ ಚಿತ್ರಿಸಲಾಗಿದೆ. ಇಲ್ಲಿ ರಾವಣನಿಗೆ ಜನಕ ಬುದ್ಧಿವಾದದ ಮಾತುಗಳನ್ನು ಆಡುತ್ತಾನೆ. ಈ ಹಿನ್ನೆಲೆಯಲ್ಲಿ ಮಾನವಸಂಬಂಧಗಳನ್ನು ನೈತಿಕ ನೆಲೆಯಲ್ಲಿ ಉಳಿಸುವ ಪ್ರಯತ್ನ ಮೌಖಿಕ ರಾಮಾಯಣದ್ದು.

ಸಾವಿತ್ರಮ್ಮ ಹಾಡಿದ 'ಸನತ್ಕುಮಾರನ ಕಥೆ'ಯಲ್ಲಿ ಸೀತೆ ಕೇಂದ್ರದಲ್ಲಿಲ್ಲ. ಇಲ್ಲಿ ಸೀತೆಯ ಬದುಕನ್ನು ಕಟ್ಟಿಕೊಡುವ ಉದ್ದೇಶ ಮೌಖಿಕ ಪರಂಪರೆಯವರಿಗೆ ಇಲ್ಲ. ಎಲ್ಲಿಯೂ ಏನನ್ನೂ ಪ್ರಶ್ನಿಸದ ಸೀತೆ ಮೂಕಿಯಾಗಿ ವನವಾಸದ ಬದುಕನ್ನು ಕಳೆಯುತ್ತಾಳೆ. ವ್ಯವಸ್ಥೆಯನ್ನು ಒಪ್ಪಿಬದುಕುವ ಸಾಂಪ್ರದಾಯಿಕ ಮಾದರಿ ಪಾತ್ರವಾಗಿ ಇಲ್ಲಿ ಸೀತೆ ಕಾಣಿಸಿದ್ದಾಳೆ. ಸೀತೆಯ ಮಾತಿಗಿಂತ ಮೂಕತೆಗೆ ಇಲ್ಲಿ ಆದ್ಯತೆ ಇದೆ. ಸ್ವತಂತ್ರ ಅಭಿಪ್ರಾಯವಿಲ್ಲದ, ಅಸ್ತಿತ್ವರಹಿತ ನೀರಸ ವ್ಯಕ್ತಿತ್ವವಾಗಿ ಸೀತೆಯನ್ನು ಇಲ್ಲಿ ನಿರೂಪಿಸಲಾಗಿದೆ.

'ಕಂಸಾಳೆ ರಾಮಾಯಣ' ಸಾಂಪ್ರದಾಯಿಕ ಮಾದರಿಯಲ್ಲಿ ಸೀತೆಯ ಬದುಕನ್ನು ಕಟ್ಟಿಕೊಟ್ಟಿದೆ. ಲಿಖಿತ ರೂಪದಲ್ಲಿ ದಾಖಲಾಗದೆ ಹೋದರೂ ಇಂದಿಗೂ ಕಂಸಾಳೆ ಸಂಪ್ರದಾಯದವರು ಕಂಸಾಳೆ ರಾಮಾಯಣವನ್ನು ಹಾಡುತ್ತಾರೆ. ಕಂಸಾಳೆ ಮಹದೇವಯ್ಯ ಹಾಡಿದ ಜನಪದ ರಾಮಾಯಣದ ಭಾಗವನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿದೆ. ರಾಮಸೀತೆಯರನ್ನು ಬೆಸೆಯುವ ಸೇತುವಾಗಿ ಇಲ್ಲಿ ಲವಕುಶರು ಕಾಣಿಸಿದ್ದಾರೆ. ಮಡಿವಾಳ ಮಾಚಯ್ಯನ ಮಾತಿಗೆ ಬೆಲೆತೆತ್ತ ರಾಮ ಸೀತೆಯನ್ನು ಕಾಡಿಗೆ ಅಟ್ಟಿ ಶಿರಚ್ಛೇದನ ಮಾಡುವಂತೆ ಆಜ್ಞಾಪಿಸುತ್ತಾನೆ. ಈ ಕಾರ್ಯಮಾಡಲು ಅಸಹಾಯಕನಾದ ಲಕ್ಷ್ಮಣ ಬನ್ನಿಮರದ ರಕ್ತವನ್ನು ರಾಮನಿಗೆ ತೋರಿಸುತ್ತಾನೆ. ರಾಮನನ್ನು ಅಗಲಿದ ಸೀತೆಯ ಯಾತನೆಯ ಬದುಕನ್ನು ನಿರೂಪಿಸುವ ಉದ್ದೇಶ ಮೌಖಿಕ ರಾಮಾಯಣಕ್ಕೆ ಇದೆ. ಆದರೆ ಸೀತೆಯನ್ನು ದಾರುಣ ಪರಿಸ್ಥಿತಿಗೆ ಒಳಗುಪಡಿಸಿದ ಪ್ರಭುತ್ವ ಪರಂಪರೆಯ ಕ್ರೌರ್ಯದ ಅರಿವು ಮೌಖಿಕ ಸಂಪ್ರದಾಯವರಿಗೆ ಇಲ್ಲ. ಸೀತೆಯ ಪರಿತಾಪವನ್ನು ವಿಸ್ತರಿಸುವುದರಲ್ಲಿಯೇ ಜನಪದರು ಸಂತೋಷ ಕಂಡಿರಬೇಕು. ಪುರುಷಸಮುದಾಯದ ಶೋಷಣೆ, ಕಿರುಕುಳ, ದೌರ್ಜನ್ಯಕ್ಕೆ ಎಷ್ಟರಮಟ್ಟಿಗೆ ಮಹಿಳೆಯರನ್ನು ಒಡ್ಡಲು ಸಾಧ್ಯವೋ ಅಷ್ಟರ ಮಟ್ಟಿಗೆ ಒಡ್ಡಲಾಗಿದೆ. 'ಕಂಸಾಳೆ ರಾಮಾಯಣ' ಸೀತೆಯಿಂದ ಗರಿಷ್ಠಮಟ್ಟದ ಸಹನೆ, ತ್ಯಾಗ, ಕ್ಷಮೆ, ಮೌನ ಮತ್ತು ಕಣ್ಣೀರನ್ನು ಅಪೇಕ್ಷಿಸಿದೆ. ಹೀಗೆ ಅನುಕಂಪದ ನೆಲೆಯಲ್ಲಿ ಸೀತೆಯ ಬದುಕನ್ನು ನಿರೂಪಿಸುವ ತುಡಿತದಲ್ಲಿ ಮೌಖಿಕ ಪರಂಪರೆಯವರು ಸೀತೆಯ ಅಂತರಂಗ ಸಂವೇದನೆಯನ್ನು

ಸಂಪೂರ್ಣ ಮರೆತರು ಎನ್ನಬೇಕು. ಪರಪುರುಷನ ಅಧೀನದಲ್ಲಿ ಇದ್ದ ಮಹಿಳೆಯರು ನಿರಪರಾಧಿಗಳಾದರೂ ಕ್ಲಿಷ್ಟಕರ ಪರೀಕ್ಷೆ ಎದುರಿಸಬೇಕಿತ್ತು ಎಂಬುದು ಇಲ್ಲಿ ಸೀತೆಯ ಪಾತ್ರಮುಖೇನ ಅಭಿವ್ಯಕ್ತಗೊಂಡಿದೆ. ಪರಪುರುಷನ ಅಧೀನದಲ್ಲಿ ಇದ್ದ ಮಹಿಳೆಯರನ್ನು ವಿಚಾರಣೆಗೆ ಒಳಗುಪಡಿಸುವ ಪ್ರಮೇಯವೇ ಇರಲಿಲ್ಲ. ಅವರ ಅಭಿಪ್ರಾಯವನ್ನು ಲೆಕ್ಕಿಸದೆ ಪತಿತೆ ಎಂದೇ ಆರೋಪಿಸಲಾಗುತಿತ್ತು. ಹೀಗೆ ಈ ಮಾದರಿಯಲ್ಲಿ ಮೌಖಿಕ ರಾಮಾಯಣ ಪರಂಪರೆ ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಟ್ಟಿದೆ.

'ಕಂಸಾಳೆ ರಾಮಾಯಣ'ದ ಸೀತೆಯ ಪಾತ್ರವನ್ನು ಭಿನ್ನ ನೆಲೆಗಳಲ್ಲಿ ಪರಾಮರ್ಶಿಸಬೇಕಿದೆ. ಪ್ರಜಾಪಾಲನೆಗೆ ಬದ್ಧನಾಗಿರುವುದು ರಾಜನ ರಾಜಕೀಯ ಮತ್ತು ಸಾಮಾಜಿಕ ಜವಾಬ್ದಾರಿ. ಪತ್ನಿಯ ಸುಖ ದುಃಖಗಳಲ್ಲಿ ಪಾಲ್ಗೊಂಡು ಸಾಂತ್ವನ ನೀಡುವುದು ಕೌಟುಂಬಿಕ ಜವಾಬ್ದಾರಿ. ಇಲ್ಲಿ ಸೀತೆಯ ವಿಚಾರದಲ್ಲಿ ರಾಮ ಕೌಟುಂಬಿಕ ಜವಾಬ್ದಾರಿಯಿಂದ ನುಣುಚಿಕೊಂಡಂತೆ ಕಂಡಿದೆ. ಸೀತೆಯನ್ನು ವಿಚಾರಣೆಗೆ ಒಳಪಡಿಸದ ರಾಮ ಇಲ್ಲಿ ಪಲಾಯನ ಮಾಡಿರುವುದು ಸ್ಪಷ್ಟವಾಗುತ್ತದೆ. ವಸ್ತುಸ್ಥಿತಿಯನ್ನು ಅರ್ಥೈಸಲಾಗದ, ಕಣ್ಣುಮುಚ್ಚಿ ತೀರ್ಪುನೀಡುವ ದುರ್ಬಲ ವ್ಯಕ್ತಿತ್ವವಾಗಿ ರಾಮ ಇಲ್ಲಿ ಕಾಣಿಸಿದ್ದಾನೆ. ಹಾಗಾಗಿ ರಾಮನ ಏಕಪಕ್ಷೀಯ ನಿಲುವಿಗೆ ಅನುಗುಣವಾಗಿ ಮೂರು ಮುಖ್ಯ ವಿಚಾರಗಳು ಸ್ಪಷ್ಟವಾಗುತ್ತವೆ.

೧. ತನ್ನ ಸಾಚಾ ವ್ಯಕ್ತಿತ್ವವನ್ನು ಜಗತ್ತಿಗೆ ಪರಿಚಯಿಸುವ ಉದ್ದೇಶ ರಾಮನಿಗೆ ಇತ್ತು. ಇದರೊಂದಿಗೆ ಪ್ರಜಾಸಮುದಾಯದ ಅಭಿಪ್ರಾಯಗಳನ್ನು ಬೆಂಬಲಿಸುವ ಉದ್ದೇಶವೂ ಇತ್ತು.

೨. ಸೀತೆಯ ಅಭಿಪ್ರಾಯವನ್ನು ಅಪೇಕ್ಷಿಸದೆ ರಾಮನು ಕೈಗೊಂಡ ಏಕಪಕ್ಷೀಯ ತೀರ್ಮಾನ ಸೀತೆಯ ಕುರಿತ ತಾತ್ಸಾರವನ್ನು ಸೂಚಿಸುತ್ತದೆ.

೩. ಇದು ಕೇವಲ ಸೀತೆಯ ಕುರಿತ ತಾತ್ಸಾರವಲ್ಲ. ಸಮಸ್ತ ಸ್ತ್ರೀಸಮುದಾಯದ ಕುರಿತು ತಳೆದ ತಾತ್ಸಾರಭಾವ ಎಂದೇ ಹೇಳಬೇಕು.

ಕಂಸಾಳೆ ಸಂಪ್ರದಾಯಕ್ಕೆ ಅನುಗುಣವಾಗಿ ಮೌಖಿಕ ಸಂಪ್ರದಾಯದವರ ಚಿಂತನೆ ಮತ್ತು ಜೀವನಕ್ರಮ ವ್ಯಕ್ತವಾಗುತ್ತದೆ. ಆ ಕಾಲದ ಜನಪದಸಂಸ್ಕೃತಿಯಲ್ಲಿ ಪುರುಷನಿಗೆ ಅಗ್ರಸ್ಥಾನವಿತ್ತು. ಮಹಿಳೆಯರನ್ನು ಹೀನಾಯವಾಗಿ ನಡೆಸಿಕೊಳ್ಳಲಾಗಿತ್ತು. ಸಾಮಾಜಿಕ ಅವಕಾಶಗಳಿಂದ ದೂರ ಉಳಿಸಲಾಗಿತ್ತು. ಮಹಿಳೆಯರನ್ನು ಸಮಾಜದ ಒಂದು ಭಾಗವಾಗಿ ಪರಿಗಣಿಸಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

'ಸಂಪೂರ್ಣ ರಾಮಾಯಣ' ಎಂಬ ಹೆಸರಿನಿಂದ ಕರೆಯಿಸಿಕೊಂಡ ತಂಬೂರಿ ಸಂಪ್ರದಾಯದ ರಾಮಾಯಣ ಪುರುಷ ಕೇಂದ್ರಿತ ಚಿಂತನೆಗಳನ್ನು ಪ್ರೋತ್ಸಾಹಿಸಿದೆ.

ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಡುವ ಉದ್ದೇಶ 'ಸಂಪೂರ್ಣ ರಾಮಾಯಣ'ಕ್ಕೆ ಇಲ್ಲ. ಬೆರಳೆಣಿಕೆಯಷ್ಟು ಮಹಿಳಾ ಪಾತ್ರಗಳು .ತಂಬೂರಿ ಸಂಪ್ರದಾಯದ ರಾಮಾಯಣದಲ್ಲಿವೆ. ಸೀತೆಯ ಕುರಿತು ಹೆಚ್ಚಿನ ವಿವರಗಳು ಇಲ್ಲಿ ಕಾಣಸಿಗುವುದಿಲ್ಲ. ತಂಬೂರಿ ಸಂಪ್ರದಾಯದ ಸೀತೆಗೆ ವಾಕ್‌ಸ್ವಾತಂತ್ರ್ಯವೇ ಇಲ್ಲ. ಆಕೆಯನ್ನು ಇಲ್ಲಿ ಮೂಕಿಯನ್ನಾಗಿಯೇ ಚಿತ್ರಿಸಲಾಗಿದೆ. ವ್ಯವಸ್ಥೆಯನ್ನು ಒಪ್ಪುವ ಸಾಂಪ್ರದಾಯಿಕ ಮಾದರಿಯಲ್ಲಿ ಸೀತೆಯ ಬದುಕನ್ನು ಕಟ್ಟಲಾಗಿದೆ. ಸೀತೆ ಇಲ್ಲಿ ಸ್ವಂತಿಕೆಯ ನೆಲೆಯಿಂದ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ. ಹಾಗಾಗಿ ತಂಬೂರಿ ಸಂಪ್ರದಾಯದವರಿಗೆ ಸೀತೆ ಅಮುಖ್ಯಳಾದಳು ಎಂದೇ ಹೇಳಬೇಕು. ರಾಮಾಯಣದ ಕಥೆಯನ್ನು ಸುಖಾಂತ್ಯಗೊಳಿಸುವ ಉದ್ದೇಶ ಮೌಖಿಕ ಸಂಪ್ರದಾಯದವರಿಗೆ ಇಲ್ಲ. ಹಾಗಾಗಿ ಇಲ್ಲಿ ಕಾವ್ಯದ ಕೊನೆಗೆ ರಾಮಸೀತೆಯರನ್ನು ಸೇರಿಸಲಾಗಿದೆ. ರಾಮನೊಂದಿಗೆ ಸೀತೆಯನ್ನು ಸೇರಿಸುವ ಮೂಲಕ ಕಥೆ ಸುಖಾಂತ್ಯ ಕಾಣುವುದು ಎಂಬ ಪರಿಕಲ್ಪನೆ ಮೌಖಿಕ ರಾಮಾಯಣ ಪರಂಪರೆಯವರದ್ದು. ಹಾಗಾಗಿ ಸೀತೆಯ ಹತಾಶಸ್ಥಿತಿ, ಖೇದ, ನೋವಿನ ಅರಿವು ಇಲ್ಲಿ ಅಭಿವ್ಯಕ್ತಗೊಂಡಿಲ್ಲ ಎಂದೇ ಹೇಳಬೇಕು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆಯ ಪಾತ್ರನಿರೂಪಣೆಗೆ ಸಂಬಂಧಿಸಿದಂತೆ ಕವಿಯ ವಿಶೇಷ ಕಾಳಜಿ ವ್ಯಕ್ತವಾಗುತ್ತದೆ. ಈ ಕಾಳಜಿ ಮೌಖಿಕ ರಾಮಾಯಣದಲ್ಲಿ ಇಲ್ಲ. ಹಾಗಾಗಿ ಈ ಕಾವ್ಯದ ಸೀತೆ ಮೌಖಿಕ ರಾಮಾಯಣದ ಸೀತೆಗಿಂತ ಉನ್ನತ ಸ್ಥಿತಿಯಲ್ಲಿದ್ದಾಳೆ. ಮೌಖಿಕ ರಾಮಾಯಣ ಪರಂಪರೆ ಸೀತೆಯ ಪಾತ್ರನಿರೂಪಣೆಗೆ ಸಂಬಂಧಿಸಿದಂತೆ ಉದಾರತೆ ತಾಳಿಲ್ಲ. ಸೀತೆಯ ಬದುಕನ್ನು ಅಲಕ್ಷ್ಯಕ್ಕೆ ಗುರಿಪಡಿಸಿದೆ. ಪುರುಷಸಮುದಾಯದ ಕುರಿತು ತಳೆದ ಉತ್ಸಾಹ ಮಹಿಳಾಬದುಕಿನ ನಿರೂಪಣೆಯಲ್ಲಿ ತಳೆದಿಲ್ಲ. ಪ್ರಭುತ್ವಪರಂಪರೆಯ ಕ್ರೌರ್ಯ, ದಬ್ಬಾಳಿಕೆ ಮೌಖಿಕ ರಾಮಾಯಣದಲ್ಲಿ ಅಭಿವ್ಯಕ್ತಗೊಂಡಿದೆ. ಪುರುಷಪರಂಪರೆ ಒಡ್ಡುವ ಸವಾಲುಗಳನ್ನು ಎದುರಿಸಲಾಗದೆ ಮಹಿಳಾಜಗತ್ತು ನಲುಗುವ ಚಿತ್ರಣವಿದೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕವಿಯ ವಾಸ್ತವಪ್ರಜ್ಞೆ ಕೆಲಸಮಾಡಿದೆ. ಸೀತೆಯನ್ನು ಹೀನಾಯವಾಗಿ ನಡೆಸಿಕೊಂಡ ಬಗೆ ಇಲ್ಲಿಲ್ಲ. ರಾಮನಿಗೆ ಸೀತೆಯ ಮೇಲಿದ್ದ ಗೌರವ ಭಾವವನ್ನು ಕವಿ ಮಹಾಕಾವ್ಯದ ಆರಂಭದಿಂದ ತೊಡಗಿ ಕೊನೆಯವರೆಗೂ ಉಳಿಸಿಕೊಂಡಿದ್ದಾರೆ. ಸತಿಯಿಂದ ಪತಿ ಅಪೇಕ್ಷಿಸುವ ಸಹಾಯ, ಸಾಂತ್ವನ ಮತ್ತು ವಿಶ್ವಾಸ ಪತಿಯಿಂದ ಸತಿಗೂ ದೊರಕಬೇಕು ಎಂಬ ಆಶಯ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಮೌಖಿಕ ರಾಮಾಯಣದ ಸೀತೆ ಮಾನಸಿಕವಾಗಿ ದುರ್ಬಲಳು. ಮಹಾನ್ವೇಷಣಂ ಮಹಾಕಾವ್ಯದ ಸೀತೆ ಪ್ರಬುದ್ಧೆ, ಬುದ್ಧಿ ಚಾತುರ್ಯ ಉಳ್ಳವಳು. ಸಾಮಾಜಿಕ ಅನಾದರಕ್ಕೆ ಒಳಗಾದ ಮಹಿಳಾ ಪಾತ್ರಗಳನ್ನು ಕೇಂದ್ರಕ್ಕೆ ತರುವ ಉದ್ದೇಶ ಈ ಕಾವ್ಯಕ್ಕೆ ಇದೆ. ಈ ಪ್ರಯತ್ನದ ಫಲವಾಗಿಯೇ ಮಹಾನ್ವೇಷಣಂ

ಕಾವ್ಯದ ಸೀತೆ ಸಮಕಾಲೀನ ಸಂದರ್ಭದ ಪ್ರತಿನಿಧಿಯಾಗಿ ಕಾಣಿಸಿದ್ದಾಳೆ. ಬದುಕಲ್ಲಿ ಎದುರಾದ ಏರುಪೇರನ್ನು ದಿಟ್ಟತನದಿಂದ ಎದುರಿಸಿದ್ದಾಳೆ. ವ್ಯವಸ್ಥೆಯ ದೋಷವನ್ನು ಪರಿಗ್ರಹಿಸುವ ಮಟ್ಟಕ್ಕೆ ಇಲ್ಲಿನ ಸೀತೆಯ ಪಾತ್ರ ಬೆಳೆದಿದೆ. ಇಲ್ಲಿ ಸ್ವಯಂ ನಿರ್ಧಾರ ಕೈಗೊಳ್ಳುವ ಅವಕಾಶ ಸೀತೆಗೆ ಇದೆ.

ಮೌಖಿಕ ರಾಮಾಯಣದ ಸೀತೆಯ ಬದುಕು ನಿರ್ದಿಷ್ಟ ವ್ಯಾಪ್ತಿಯೊಳಗೆ ನಿಂತು ಬಿಡುತ್ತದೆ. ಮಹಾನ್ವೇಷಣಂ ಮಹಾಕಾವ್ಯದ ಸೀತೆ ವಿಶಾಲ ದೃಷ್ಟಿಕೋನದಿಂದ ಬೆಳೆಯುತ್ತಾಳೆ. ಶ್ರಮಸಂಸ್ಕೃತಿಗೆ ಸಂಬಂಧಿಸಿದಂತೆ 'ಗೊಂಡರ ರಾಮಾಯಣ'ದ ಸೀತೆಗೂ ಮಹಾನ್ವೇಷಣಂ ಮಹಾಕಾವ್ಯದ ಸೀತೆಗೂ ಸಾಮ್ಯ ಇದೆ. 'ಗೊಂಡರ ರಾಮಾಯಣ'ದ ಸೀತೆ ಮಣ್ಣಿನಮಗಳು. ಶ್ರಮಸಂಸ್ಕೃತಿಯ ಪ್ರತೀಕ. ಮಹಾನ್ವೇಷಣಂ ಮಹಾಕಾವ್ಯದ ಸೀತೆಯಲ್ಲೂ ಈ ಸ್ವರೂಪವಿದೆ. 'ಗೊಂಡರ ರಾಮಾಯಣ'ದ ಸೀತೆ ಶ್ರಮಿಕ ಪರಂಪರೆಯಿಂದ ಬಂದವಳು. ಮಹಾನ್ವೇಷಣಂ ಮಹಾಕಾವ್ಯದ ಸೀತೆ ರಾಜವಂಶಜಳಾದರೂ ಶ್ರಮಿಕಸಮುದಾಯದ ಕುರಿತು ಕಳಕಳಿ ಉಳ್ಳವಳು. ಶ್ರಮಿಕವರ್ಗ, ದೀನದಲಿತ, ಮಹಿಳಾಸಮುದಾಯದ ಪರ ಕಾಳಜಿ ಉಳ್ಳವಳು. ಅವಳ ವನವಾಸದ ಸಂದರ್ಭದಲ್ಲಿ ಈ ವಿಚಾರ ವ್ಯಕ್ತವಾಗುತ್ತದೆ. ನೆಲದ ಮಣ್ಣಿನ ವಾಸನೆಯೊಂದಿಗೆ ಇಲ್ಲಿ ಸೀತೆಯ ಬದುಕನ್ನು ಬೆಸೆಯಲಾಗಿದೆ. ಹಾಗಾಗಿ ಸೀತೆಯ ಸತ್ವಯುತ ಶಕ್ತಿಗಳ ಸಾಮ್ಯ ಈ ಎರಡೂ ರಾಮಾಯಣಗಳಲ್ಲೂ ಕಾಣಿಸಿದೆ.

ಜಿಂಕೆಯ ಚರ್ಮದಿಂದ ಕುಪ್ಪಸ ಬಯಸುವ ಸೀತೆ 'ಗೊಂಡರ ರಾಮಾಯಣ'ದಲ್ಲಿ ಸಹಜ ಸ್ತ್ರೀ. ಮಹಾನ್ವೇಷಣಂ ಮಹಾಕಾವ್ಯದ ಸೀತೆ ರಾಜಪರಂಪರೆಯಿಂದ ಬಂದವಳಾದರೂ ಸರಳ ಬದುಕನ್ನು ಅಪೇಕ್ಷಿಸುವ ಸಹಜ ಸ್ತ್ರೀ. ಈ ಸಹಜ ಸರಳ ಸ್ವಭಾವ ಮಹಾನ್ವೇಷಣಂ ಮಹಾಕಾವ್ಯದ ಸೀತೆಯಲ್ಲಿ ಅಭಿವ್ಯಕ್ತವಾಗಿದೆ. ಸಹಜ ಅಪೇಕ್ಷೆಯನ್ನು ರಾಮನ ಎದುರು ವ್ಯಕ್ತಪಡಿಸುವಲ್ಲಿ 'ಗೊಂಡರ ರಾಮಾಯಣ'ದ ಸೀತೆಗೂ ಮಹಾನ್ವೇಷಣಂ ಮಹಾಕಾವ್ಯದ ಸೀತೆಗೂ ಸಾಮ್ಯ ಇದೆ. ಮಹಾನ್ವೇಷಣಂ ಮಹಾಕಾವ್ಯದ ಸೀತೆ ರಾಮನೊಂದಿಗೆ ವನವಾಸದ ಬದುಕನ್ನು ಅಪೇಕ್ಷಿಸುತ್ತಾಳೆ. ರಾಮನಿಂದ ಈ ಅಪೇಕ್ಷೆ ಪೂರ್ಣಗೊಳ್ಳುತ್ತದೆ. ಆಡಂಬರದ ಬದುಕಿಗಿಂತ ದೂರ ಉಳಿಯುವ ಸೀತೆಯ ಬದುಕು ನಮಗೆ ಈ ಎರಡೂ ರಾಮಾಯಣಗಳಲ್ಲಿ ಕಾಣಸಿಗುತ್ತದೆ. ಈ ವಿಚಾರಗಳನ್ನು ಹೊರತುಪಡಿಸಿ ಮತ್ತಾವ ವಿಚಾರದಲ್ಲೂ ಸಾಮ್ಯ ಕಾಣಸಿಗುವುದಿಲ್ಲ. 'ಗೊಂಡರ ರಾಮಾಯಣ'ದ ಸೀತೆಗೆ ಆರಂಭದ ಹಂತದಲ್ಲಿ ಅಪೇಕ್ಷೆ, ಅಭಿಪ್ರಾಯ, ಅವಕಾಶಗಳನ್ನು ಒದಗಿಸಲಾಗಿದ್ದು ಮಹಾಕಾವ್ಯದ ಕೊನೆಯಲ್ಲಿ ಸೀತೆಯ ಪಾತ್ರ ಸೋತಿದೆ. ಆದರೆ ಮಹಾನ್ವೇಷಣಂ ಮಹಾಕಾವ್ಯದ ಸೀತೆಯ ಪಾತ್ರ ಎಲ್ಲಿಯೂ ಸೋಲುವುದಿಲ್ಲ. ಪುರುಷಪ್ರಭುತ್ವದೊಂದಿಗೆ ಹೊಂದಾಣಿಕೆ

ಮಾಡಿಕೊಳ್ಳುವುದಿಲ್ಲ. ಮಹಾಕಾವ್ಯದ ಆರಂಭದಿಂದ ತೊಡಗಿ ಕೊನೆಯವರೆಗೆ ತನ್ನ ಅಸ್ತಿತ್ವ, ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ಹೆಣಗಾಡುತ್ತದೆ. ಸೀತೆಯನ್ನು ಕಾಡಿಗೆ ಅಟ್ಟಿದ ರಾಮ ಮೌಖಿಕ ರಾಮಾಯಣದಲ್ಲಿ ಪ್ರಜಾಪಾಲಕನಾಗಿ ಕಾಣಿಸುತ್ತಾನೆ. ಮಹಾನ್ವೇಷಣಂನ ಕವಿ ಈ ಸಿದ್ಧಾಂತವನ್ನು ಒಡೆದಿದ್ದಾರೆ.

ಸ್ವಯಂ ಅಗ್ನಿಪ್ರವೇಶವನ್ನು ಅಪೇಕ್ಷಿಸಿದ ಸೀತೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಕಾಣಿಸಿದ್ದಾಳೆ. ಇಲ್ಲಿ ರಾಮನಿಗೆ ಸೀತೆಯ ಪಾತಿವ್ರತ್ಯವನ್ನು ಸಾಬೀತುಪಡಿಸುವ ಉದ್ದೇಶ ಇಲ್ಲ. ಹಾಗಾಗಿ ಇಲ್ಲಿನ ಸೀತೆ ಪುರುಷಪ್ರಭುತ್ವ ಒಡ್ಡುವ ಪರೀಕ್ಷೆಗಳಿಗೆ ಒಳಗಾಗುವುದಿಲ್ಲ. ಮೌಖಿಕ ರಾಮಾಯಣ ಪರಂಪರೆ ಸೀತೆಯ ಬದುಕಿನ ದಾರುಣ ಸ್ಥಿತಿಯನ್ನು ಅನಾವರಣಗೊಳಿಸಿದೆ. ಹೀಗೆ ಸೀತೆಯ ಬವಣೆಯನ್ನು ತಿಳಸುವುದೇ ಜನಪದರ ಮೂಲ ಉದ್ದೇಶವಾಯಿತು. ಪರಿಣಾಮ ಮೌಖಿಕ ರಾಮಾಯಣ ಪರಂಪರೆ ಬಹುತೇಕ ಮಹಿಳಾ ಪಾತ್ರಗಳನ್ನು ಬದಿಗೆ ತಳ್ಳಿವೆ. ಸೀತೆಯನ್ನು ಬಹುವಿಧದ ಪರೀಕ್ಷೆಗೆ ಒಳಪಡಿಸುವ ಉದ್ದೇಶ ಮೌಖಿಕ ರಾಮಾಯಣಕ್ಕೆ ಇದೆ. ಈ ನಿರೂಪಣೆಯ ಹಿಂದೆ ಮೌಖಿಕ ಪರಂಪರೆ ಪುರುಷಪರ ಧೋರಣೆ ತಳೆದಿರುವುದು ಸ್ಪಷ್ಟವಾಗುತ್ತದೆ. ಪ್ರಭುತ್ವಪರಂಪರೆಯ ತೀರ್ಪು ಮೌಖಿಕ ಸಂಪ್ರದಾಯದವರಿಗೆ ಬಹುಮುಖ್ಯವಾಯಿತು. ಹೀಗೆ ಜನಪದ ಸಂಪ್ರದಾಯ ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಟ್ಟಿದೆ.

ಪಾತಿವ್ರತ್ಯದ ಆರೋಪ, ಪರೀಕ್ಷೆ, ನಿರ್ಬಂಧಗಳು ಮೌಖಿಕ ಸಂಪ್ರದಾಯದಲ್ಲಿ ಸ್ತ್ರೀಸಮುದಾಯಕ್ಕೆ ಮೀಸಲಾಗಿತ್ತು. ಪುರುಷಪ್ರಧಾನ ವ್ಯವಸ್ಥೆಯ ಸಾಮಾಜಿಕ ಇತಿಮಿತಿಗಳನ್ನು ಸಮಸ್ತ ಸ್ತ್ರೀಸಮುದಾಯ ಮೀರುವಂತಿರಲಿಲ್ಲ. ಮೀರಿದಲ್ಲಿ ಘೋರಶಿಕ್ಷೆಗೆ ಒಳಗಾಗುವ ಪ್ರಮೇಯ ಎದುರಾಗುತ್ತಿತ್ತು ಎಂಬುದು ಸ್ಪಷ್ಟ ಆದ್ದರಿಂದ ಸೀತೆಯ ತುಡಿತ, ಒಳತೋಟಿಯನ್ನು ಗ್ರಹಿಸುವಲ್ಲಿ ಮೌಖಿಕ ಪರಂಪರೆಯ ಮನಸ್ಸು ವಿಫಲವಾಗಿದೆ ಎಂದೇ ಹೇಳಬೇಕು. ವೈಯಕ್ತಿಕ ನೆಲೆಯ ಅವಕಾಶಗಳನ್ನು ಮೌಖಿಕ ಸಾಹಿತ್ಯ ಪುರುಷರಿಗಾಗಿಯೇ ಮೀಸಲಿರಿಸಿದೆ. ಮೌಖಿಕ ರಾಮಾಯಣ ಪತಿಯಿಂದ ಸತಿ ಪರೀಕ್ಷೆಗೆ ಒಳಗಾಗುವುದನ್ನು ಪ್ರೋತ್ಸಾಹಿಸುತ್ತದೆ. ಮಹಾನ್ವೇಷಣಂ ಮಹಾಕಾವ್ಯ ವ್ಯಕ್ತಿಸ್ವಾತಂತ್ರ್ಯದ ಅಗತ್ಯತೆಯನ್ನು ಗಟ್ಟಿಗೊಳಿಸುತ್ತದೆ. ಮೌಖಿಕ ರಾಮಾಯಣದ ಸೀತೆಯ ಬದುಕು ದುಸ್ತರವಾಗಿದೆ. ಮಹಾನ್ವೇಷಣಂ ಮಹಾಕಾವ್ಯ ಕಲ್ಪನೆ, ಪವಾಡ, ಪ್ರಭುಶಕ್ತಿಯ ದಬ್ಬಾಳಿಕೆಯನ್ನು ಮೀರಿನಿಂತಿದೆ. ಈ ಮಹಾಕಾವ್ಯದ ಸೀತೆಗೆ ಗರಿಷ್ಠ ಪ್ರಮಾಣದಲ್ಲಿ ವಾಕ್‌ಸ್ವಾತಂತ್ರ್ಯ ಕಲ್ಪಿಸಲಾಗಿದೆ. ಇಲ್ಲಿನ ಸೀತೆಯಲ್ಲಿ ಬದುಕನ್ನು ವಿಮರ್ಶಿಸುವ ಬುದ್ಧಿಶಕ್ತಿ ಇದೆ. ಸರಿ–ತಪ್ಪುಗಳನ್ನು ಪರಾಮರ್ಶಿಸುವ ಶಕ್ತಿ ಇದೆ. ಹಾಗಾಗಿ ಅಭಿಪ್ರಾಯ, ಅವಕಾಶ ಅಸ್ತಿತ್ವದ ನೆಲೆಯಿಂದ ಈ ಮಹಾಕಾವ್ಯದ ಸೀತೆಯ ಪಾತ್ರ

ಗುರುತಿಸಿಕೊಂಡಿದೆ. ಮೌಖಿಕ ರಾಮಯಣದ ಸೀತೆಯ ಪಾತ್ರಕ್ಕೆ ಅಸಹಾಯಕತೆ, ದುರ್ಬಲತೆ, ಪಲಾಯನವಾದದ ಆರೋಪವಿದೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಈ ಆರೋಪವನ್ನು ಒಡೆಯಲಾಗಿದೆ. ಪ್ರಬುದ್ಧೆಯಾಗಿ ಸಾಮಾನ್ಯ ಹೆಣ್ಣೊಬ್ಬಳು ಬದುಕನ್ನು ಕಂಡುಕೊಳ್ಳುವ ಬಗೆ ಈ ಮಹಾಕಾವ್ಯದ ಸೀತೆಯ ಪಾತ್ರಮುಖೇನ ಅಭಿವ್ಯಕ್ತಗೊಂಡಿದೆ. ಮಹಾನ್ವೇಷಣಂ ಮಹಾಕಾವ್ಯದ ಸೀತೆ ವನವಾಸಕ್ಕೆ ತೆರಳುವುದರಿಂದ ತೊಡಗಿ ಅಗ್ನಿಪ್ರವೇಶ ಮಾಡುವವರೆಗೂ ಸ್ವಂತಿಕೆಯ ನೆಲೆಯಿಂದಲೇ ಗುರುತಿಸಿಕೊಂಡಿದ್ದಾಳೆ. ಅಗತ್ಯವಿದ್ದಲ್ಲಿ ವ್ಯವಸ್ಥೆಯ ದೋಷವನ್ನು ಪರಿಗ್ರಹಿಸುತ್ತಾ ಪ್ರತಿಭಟಿಸುತ್ತಾಳೆ. ಇಲ್ಲಿ ಸೀತೆ ತನಗಾದ ಅಪಚಾರಕ್ಕೆ ಪ್ರತಿಕ್ರಿಯಿಸುವ ರೀತಿಯೇ ಪ್ರತಿಭಟಾನತ್ಮಕ ಸ್ವರೂಪದ್ದು. ಮಹಾನ್ವೇಷಣಂ ಮಹಾಕಾವ್ಯದ ಸೀತೆಯ ಮಾತಲ್ಲಿ ಮೌಲ್ಯ ಇದೆ, ನೈಜತೆ ಇದೆ, ಅಪೇಕ್ಷೆ ಇದೆ, ಸ್ಪಷ್ಟತೆ ಇದೆ.

ಮೌಖಿಕ ರಾಮಯಣದ ಸೀತೆಯ ಪಾತ್ರ ಸಾಂಪ್ರದಾಯಿಕ ಚಿಂತನೆಗೆ ಬದ್ಧವಾಗಿದೆ. ತನಗಾದ ಅನ್ಯಾಯವನ್ನು ಅಪಚಾರ ಎಂದು ಪರಿಗ್ರಹಿಸುವ ಮಟ್ಟಕ್ಕೆ ಸೀತೆಯ ಪಾತ್ರ ಬೆಳೆದಿಲ್ಲ. ವಾಲ್ಮೀಕಿ ಆಶ್ರಮದಲ್ಲಿ ಬೆಳೆದ ಲವಕುಶರು ತಮ್ಮ ಶಕ್ತಿ ಸಾಮರ್ಥ್ಯದಿಂದ ರಾಮನನ್ನು ಸೋಲಿಸುತ್ತಾರೆ. ಸೀತೆ ಇದನ್ನು ಲವಕುಶರ ಸಾಮರ್ಥ್ಯ ಎಂಬುದಾಗಿ ಪರಿಗಣಿಸುವುದಿಲ್ಲ. ತಂದೆಯನ್ನು ಕೊಂದವರು ತಾಯಿಯನ್ನೂ ಕೊಂದುಬಿಡಿ ಎಂದು ಹೇಳುತ್ತಾಳೆ. ಇಲ್ಲಿ ರಾಮನನ್ನು ಸೀತೆ ಕ್ಷಮಿಸಿರುವುದು ಸ್ಪಷ್ಟವಾಗುತ್ತದೆ. ಪುರುಷಪ್ರಭುತ್ವದ ದಬ್ಬಾಳಿಕೆಯನ್ನು ಸೀತೆ ಸಹಜವಾಗಿಯೇ ಸ್ವೀಕರಿಸಿದ್ದಾಳೆ. ರಾಮನ ನೆಲೆಯಿಂದ ಆತನ ತೀರ್ಪು ಸರಿ ಎಂಬುದು ಸೀತೆಯ ಅಭಿಪ್ರಾಯ. ಹಾಗಾಗಿ ರಾಮನ ತೀರ್ಪು ಏಕಪಕ್ಷೀಯ ನೆಲೆಯದ್ದು ಎಂಬ ಪ್ರಜ್ಞೆ ಸೀತೆಯಲ್ಲಿ ಇತ್ತೇ? ಎಂಬುದು ಮುಖ್ಯ ಪ್ರಶ್ನೆ.

ತನಗಾದ ಅನ್ಯಾಯವನ್ನು ಪರಿಗಣಿಸದ ಸೀತೆ ರಾಮನ ಉದ್ಧಾರವನ್ನೇ ಬಯಸುತ್ತಾಳೆ. ಮಕ್ಕಳು ತಂದೆಯ ಎದುರಾಳಿಗಳಾಗಬಾರದು ಎಂಬುದು ಮೌಖಿಕ ಸಂಪ್ರದಾಯದವರ ಆಶಯ. ಸತಿಯಾದವಳು ಪತಿಯ ಪರವಾಗಿ ನಡೆಯಬೇಕು ಎಂಬುದನ್ನು ಮೌಖಿಕ ರಾಮಾಯಣ ಪರಂಪರೆ ನಿರೂಪಿಸಿದೆ. ಆದರೆ ಪತಿಯಾದವ ಸತಿಯನ್ನು ಆದರಿಸಬೇಕು ಎಂಬ ಮೌಲ್ಯವನ್ನು ಮೌಖಿಕ ರಾಮಾಯಣ ಎಲ್ಲಿಯೂ ಪ್ರತಿಪಾದಿಸುವುದಿಲ್ಲ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಕವಿ ಬದುಕಿನ ಪ್ರಶ್ನೆ ಎತ್ತಿದ್ದಾರೆ. ಇಲ್ಲಿ ಪ್ರತಿಯೊಬ್ಬರಿಗೂ ಬದುಕು ಮುಖ್ಯ. ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯವನ್ನು ಯಾರೂ ಹತ್ತಿಕ್ಕುವಂತಿಲ್ಲ. ಈ ಅವಕಾಶ ಎಲ್ಲರಿಗೂ ದಕ್ಕುವಂತಾಗಬೇಕು. ಹೀಗೆ ದಕ್ಕುವಲ್ಲಿ ಉಚ್ಚ-ನೀಚ, ಸ್ತ್ರೀ-ಪುರುಷ, ಬಡವ-ಶ್ರೀಮಂತ ಎಂಬ ಭೇದ ಇರುವುದಿಲ್ಲ ಎಂಬ ತತ್ತ್ವ ಪ್ರತಿಪಾದನೆ ಇದೆ. ಮಹಿಳಾಸಮುದಾಯದ ಅತಂತ್ರಸ್ಥಿತಿ ಮೌಖಿಕ ರಾಮಾಯಣಗಳಲ್ಲಿ

ಅಭಿವ್ಯಕ್ತಗೊಂಡಿದೆ. ಪ್ರಭುತ್ವ ಧೋರಣೆ ಸ್ತ್ರೀಸಮುದಾಯಕ್ಕೆ ಮಾರಕವಾಗುವ ಬಗೆ ಇದೆ. ಪ್ರಭುತ್ವ ಪರಂಪರೆಯ ಶಕ್ತಿರಾಜಕಾರಣದ ಎದುರು ಸ್ತ್ರೀಸಮುದಾಯ ಕುಸಿದು ಹೋಗುವ ವಿವರವಿದೆ. ಸ್ತ್ರೀವಾದಿ ದೃಷ್ಟಿಕೋನದಿಂದ ಅಭ್ಯಾಸ ಮಾಡಿದಾಗ ಮೌಖಿಕ ಪರಂಪರೆಯ ಮಹಿಳಾಸಮುದಾಯದ ಬದುಕಿನ ವಾಸ್ತವಸ್ಥಿತಿ ಅನಾವರಣಗೊಳ್ಳುತ್ತದೆ. ಮೌಖಿಕ ರಾಮಾಯಣ ಪರಂಪರೆ ಪುರುಷಪರ ಚಿಂತನೆಗಳನ್ನು ಪ್ರೋತ್ಸಾಹಿಸುತ್ತಾ ಮಹಿಳಾಸ್ವಾತಂತ್ರ್ಯವನ್ನು ಹತ್ತಿಕ್ಕಿದೆ. ಆಕೆಯನ್ನು ಅಸ್ತಿತ್ವರಹಿತಳನ್ನಾಗಿ ನಿರೂಪಿಸಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ವಾಸ್ತವಪ್ರಜ್ಞೆ ಇದೆ. ಮಾನವತ್ವದ ನೆಲೆಯಲ್ಲಿ ಕವಿ ಕಾವ್ಯ ರಚಿಸಿದ್ದಾರೆ. ಸೀತೆಗೂ ರಾವಣನಿಗೂ ಯಾವುದೇ ಪೂರ್ವಸಂಬಂಧ ಕಲ್ಪಿಸಿಲ್ಲ. ಮೌಖಿಕ ರಾಮಾಯಣ ಪರಂಪರೆಯಲ್ಲಿ ಸೀತೆ ಸಹಜ ಸ್ತ್ರೀ. ಆದರೂ ರಾಮನಿಗೆ ದಕ್ಕಿದ ಸ್ಥಾನಮಾನ, ಗೌರವ ಇಲ್ಲಿ ಸೀತೆಗೆ ದಕ್ಕಿಲ್ಲ. ಹಾಗಾಗಿ ವಾಸ್ತವವಾಗಿ ಮೌಖಿಕ ಸಂಪ್ರದಾಯದ ಮನಸ್ಸು ಪುರುಷಪರ ಧೋರಣೆಗೆ ಬದ್ಧವಾಗಿದೆ ಎಂದೇ ಹೇಳಬೇಕು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿಗೆ ಸೀತೆಯ ಕುರಿತು ಕಾಳಜಿ ಇದೆ. ಸೀತೆಯ ಬದುಕನ್ನು ನಿರೂಪಿಸುವಲ್ಲಿ ಕವಿ ಕಿಂಚಿತ್ತೂ ಲೋಪವಾಗದಂತೆ ಎಚ್ಚರವಹಿಸಿದ್ದಾರೆ. ಮೌಖಿಕ ರಾಮಾಯಣ ಪರಂಪರೆ ಸೀತೆಯ ಕುರಿತು ಕಟ್ಟಿರುವ ಚಿತ್ರಣವನ್ನು ಮಹಾನ್ವೇಷಣಂ ಮಹಾಕಾವ್ಯದಲ್ಲಿ ಒಡೆಯಲಾಗಿದೆ. ಸೀತೆಯನ್ನು ಮಾನವೀಯತೆಯ ನೆಲೆಯಲ್ಲಿ ನಿರ್ವಚಿಸಲಾಗಿದೆ. ಹೀಗೆ ಸೀತೆಯ ಪಾತ್ರನಿರೂಪಣೆಯಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕವಿ ಪೂರ್ವಗ್ರಹಗಳನ್ನು ತಳೆದಿಲ್ಲ.

### ೬.೧.೨ ಶೂರ್ಪನಖಿ

ಮೌಖಿಕ ರಾಮಾಯಣ ಪರಂಪರೆ ಶೂರ್ಪನಖಿಯ ಒಳತೋಟಿಯನ್ನು ಗ್ರಹಿಸಿಲ್ಲ. ಅವಳ ಅಂತರಂಗದ ಸಂವೇದನೆಯನ್ನು ಮರೆಮಾಚಿದೆ. ಎಲ್ಲ ಮೌಖಿಕ ರಾಮಾಯಣಗಳು ಶೂರ್ಪನಖಿಯ ಪಾತ್ರವನ್ನು ನಿರೂಪಿಸಿಲ್ಲ. 'ಗೊಂಡರ ರಾಮಾಯಣ' ಮತ್ತು 'ಸನತ್ಕುಮಾರನ ಕಥೆ'ಯಲ್ಲಿ ಶೂರ್ಪನಖಿಯ ಬದುಕಿನ ನಿರೂಪಣೆ ಇದೆ. ಈ ನಿರೂಪಣೆ ಉದಾರತೆಯ ನೆಲೆಯಲ್ಲಿ ಸಾಗಿಲ್ಲ. 'ಗೊಂಡರ ರಾಮಾಯಣ'ದಲ್ಲಿ ರಾಮಲಕ್ಷ್ಮಣರ ಸಂಗಾತಿತನವನ್ನು ಬಯಸಿಬಂದ ಶೂರ್ಪನಖಿಯ ಮೊಲೆ, ಮೂಗನ್ನು ಕತ್ತರಿಸಲಾಗುತ್ತದೆ. 'ಗೊಂಡರ ರಾಮಾಯಣ' ಶೂರ್ಪನಖಿಯ ಪಾತ್ರನಿರೂಪಣೆಯಲ್ಲಿ ಯಾವುದೇ ಉದಾರತೆಯನ್ನು ತಾಳಿಲ್ಲ. ರಕ್ಕಸಿಯ ನೆಲೆಯಲ್ಲಿ ಆಕೆಯನ್ನು ನಿರ್ವಚಿಸುತ್ತಾ ತಾಮಸ ಗುಣಗಳನ್ನೇ ಆರೋಪಿಸಿದೆ. ಪರಪುರಷರ ಸಂಗ ಬಯಸಿಬಂದ ಮಹಿಳೆಯರಿಗೆ ಜನಪದರು ನೀಡುವ ಶಿಕ್ಷೆ ಕಠಿಣತಮದ್ದು ಎಂಬುದು ಇಲ್ಲಿ ಸ್ಪಷ್ಟವಾಗಿದೆ.

'ಸನತ್ಕುಮಾರನ ಕಥೆ'ಯಲ್ಲಿ ರಾಮಾಯಣದ ಕಥಾನಾಯಕಿಯೇ ಶೂರ್ಪನಖಿ. ಪತಿ ಮತ್ತು ಸುತನನ್ನು ಕಳೆದುಕೊಂಡ ಶೂರ್ಪನಖಿ ಇಲ್ಲಿ ತನಗಾದ ಅನ್ಯಾಯಕ್ಕೆ ಪ್ರತೀಕಾರ ತೀರಿಸಿಕೊಳ್ಳುತ್ತಾಳೆ. ಇಲ್ಲಿ ಶೂರ್ಪನಖಿಯನ್ನು ರಾಕ್ಷಸ ಪ್ರವೃತ್ತಿಯ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಮೌಖಿಕ ಸಂಪ್ರದಾಯದವರಿಗೆ ಇಲ್ಲ. ಅವಳ ಅಂತರಂಗದ ಶೋಕವನ್ನು ಮಾನವ ಸಹಜ ವ್ಯಕ್ತಿತ್ವದ ನೆಲೆಯಲ್ಲಿ ನಿರೂಪಿಸಲಾಗಿದೆ. ಹೆಣ್ಣೊಬ್ಬಳ ಅಂತರಂಗದವೇದನೆ, ಹತಾಶೆ ಶೂರ್ಪನಖಿಯ ನೆಲೆಯಿಂದ ಇಲ್ಲಿ ಅಭಿವ್ಯಕ್ತಗೊಂಡಿದೆ.

'ಗೊಂಡರ ರಾಮಾಯಣ'ದ ಶೂರ್ಪನಖಿಯ ಪಾತ್ರನಿರೂಪಣೆಗೂ ಮತ್ತು 'ಸನತ್ಕುಮಾರನ ಕಥೆ'ಯ ಶೂರ್ಪನಖಿಯ ಪಾತ್ರನಿರೂಪಣೆಗೂ ಭಿನ್ನತೆ ಇದೆ. ಸಾವಿತ್ರಮ್ಮ ಹಾಡಿದ 'ಸನತ್ಕುಮಾರನ ಕಥೆ'ಯ ಶೂರ್ಪನಖಿಯ ಪಾತ್ರಕ್ಕೂ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯ ಪಾತ್ರನಿರೂಪಣೆಗೂ ಸಾಮ್ಯ ಇದೆ. 'ಗೊಂಡರ ರಾಮಾಯಣ'ದ ಶೂರ್ಪನಖಿ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಗಿಂತ ಭಿನ್ನಳಾಗಿದ್ದಾಳೆ. ಈ ಮಹಾಕಾವ್ಯದ ಶೂರ್ಪನಖಿ ಸ್ವಯಂ ಆಸಕ್ತಿಯಿಂದ ರಾಮಲಕ್ಷ್ಮಣರ ಬಳಿ ಬರುತ್ತಾಳೆ. ಆದರೆ 'ಗೊಂಡರ ರಾಮಾಯಣ'ದ ಶೂರ್ಪನಖಿ ರಾವಣನ ಆಣತಿಯನ್ನು ಪಾಲಿಸುವವಳಾಗಿ ಕಾಣಿಸುತ್ತಾಳೆ. ರಕ್ಕಸಸಮುದಾಯದ ಪ್ರಭುತ್ವಪರಂಪರೆ ತನ್ನ ಅನುಕೂಲಕ್ಕೆ ತಕ್ಕಂತೆ ಮಹಿಳಾಸಮುದಾಯವನ್ನು ಬಳಸುತ್ತಿತ್ತು ಎಂಬುದು ಈ ಮೂಲಕ ಸ್ಪಷ್ಟವಾಗುತ್ತದೆ. ಮೌಖಿಕ ರಾಮಾಯಣದ ಶೂರ್ಪನಖಿಯಲ್ಲಿ ಆತ್ಮಾಭಿಮಾನ ಇಲ್ಲ. ಹಾಗಾಗಿ ಆಕೆಗೆ ಅಸ್ತಿತ್ವದ ಪ್ರಶ್ನೆ ಮುಖ್ಯವಾಗುವುದಿಲ್ಲ. ಬುದ್ಧಿಕೌಶಲ್ಯ ಇಲ್ಲದ ಮತಿಗೇಡಿಯಾಗಿ ಶೂರ್ಪನಖಿಯನ್ನು ನಿರ್ವಚಿಸಲಾಗಿದೆ. ತನಗಾದ ಅನ್ಯಾಯಕ್ಕೆ ಪ್ರತೀಕಾರ ತೀರಿಸಿಕೊಳ್ಳುವ ಉದ್ದೇಶವಾಗಲಿ, ಮನೋಭಾವವಾಗಲಿ ಇಲ್ಲಿ ಶೂರ್ಪನಖಿಯಿಂದ ವ್ಯಕ್ತಗೊಂಡಿಲ್ಲ.

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯಲ್ಲಿ ಆತ್ಮಾಭಿಮಾನ ಇದೆ. ಪ್ರತಿಷ್ಠೆ ಇದೆ. ಇಲ್ಲಿ ಶೂರ್ಪನಖಿ ಪುರುಷಪರಂಪರೆ ಮತ್ತು ಪ್ರಭುತ್ವಪರಂಪರೆಯಿಂದ ಸ್ಥಾನಮಾನವನ್ನು ಅಪೇಕ್ಷಿಸುತ್ತಾಳೆ. ಪುರುಷಪ್ರಭುತ್ವದ ದಬ್ಬಾಳಿಕೆಗೆ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿ ತನ್ನನ್ನು ಒಡ್ಡುವುದಿಲ್ಲ. ತನಗಾದ ಅನ್ಯಾಯವನ್ನು ಸಮಗ್ರ ಸ್ತ್ರೀಸಂಕುಲಕ್ಕೆ ಆದ ಅನ್ಯಾಯ ಎಂದು ಪರಿಭಾವಿಸುತ್ತಾಳೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿ ಮೌಖಿಕ ರಾಮಾಯಣದ ಶೂರ್ಪನಖಿಗಿಂತ ಅತ್ಯುಚ್ಚ ಸ್ಥಾನದಲ್ಲಿ ನಿಲ್ಲುತ್ತಾಳೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಶೂರ್ಪನಖಿಗೆ ಅಸ್ತಿತ್ವವೊಂದೇ ಪ್ರಧಾನವಲ್ಲ. ಸಮಸ್ತ ಸ್ತ್ರೀಸಮುದಾಯದ ಬದುಕು ಮತ್ತು ಆತ್ಮಗೌರವದ ಪ್ರಶ್ನೆ ಬಹುಮುಖ್ಯವಾಗುತ್ತದೆ. ಮೌಖಿಕ ರಾಮಾಯಣದಲ್ಲಿ ರಾಮಲಕ್ಷ್ಮಣರ ಬಳಿ ಶೂರ್ಪನಖಿಯನ್ನು ಕಳುಹಿಸುವ ಉಪಾಯ ರಾವಣನಿಂದ

ನಡೆಯುತ್ತದೆ. ಇದಕ್ಕೆ ಅನುಗುಣವಾಗಿ ಸೂಳೆ ಸಿಂಗಾರವಾದಂತೆ ಆಗೆಂದು ರಾವಣ ಶೂರ್ಪನಖಿಯ ಬಳಿ ನುಡಿಯುತ್ತಾನೆ. ಇದು ಜನಪದರ ಭಾಷಾಶೈಲಿ ಮತ್ತು ನಿರೂಪಣಾ ತಂತ್ರಕ್ಕೆ ಸಾಕ್ಷಿಯಾಗಿದೆ. ಹಾಗಾಗಿ ಗ್ರಾಮೀಣ ಪರಿಸರದ ಪ್ರಭಾವ ಮೌಖಿಕ ರಾಮಾಯಣಗಳ ಮೇಲಾಗಿದೆ ಎನ್ನಬಹುದು.

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯಲ್ಲಿ ಪ್ರತೀಕಾರವಿದೆ. 'ಸನತ್ಕುಮಾರನ ಕಥೆ'ಯ ಶೂರ್ಪನಖಿಯಲ್ಲೂ ಪ್ರತೀಕಾರವಿದೆ. ಉದ್ದೇಶಗಳು ಮಾತ್ರ ಬೇರೆ ಬೇರೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಶೂರ್ಪನಖಿ ತನಗಾದ ಮುಖಭಂಗಕ್ಕೆ ಪ್ರತೀಕಾರ ತೀರಿಸಿಕೊಳ್ಳುತ್ತಾಳೆ. 'ಸನತ್ಕುಮಾರನ ಕಥೆ'ಯ ಶೂರ್ಪನಖಿ ತನಗಾದ ಅನ್ಯಾಯದ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳುತ್ತಾಳೆ. ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿ ತನಗಾದ ಅನ್ಯಾಯವನ್ನು ಅವಮಾನವೆಂದೇ ಪರಿಗ್ರಹಿಸುತ್ತಾಳೆ. ಶೂರ್ಪನಖಿಯಲ್ಲಿ ಶತಮಾನಗಳ ಹೆಣ್ಣಿನ ಅಳಲು ಅಡಗಿದೆ. ಶತ ಶತಮಾನಗಳಿಂದ ಪುರುಷಪ್ರಧಾನ ಸಮಾಜ ಮಹಿಳೆಯರನ್ನು ಕಟುನಿಷ್ಠುರವಾಗಿ ನಡೆಸಿಕೊಂಡು ಬಂದಿದೆ. ಈ ಪ್ರಜ್ಞೆಯಿಂದ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿ ಪ್ರಬುದ್ಧತೆಯ ನೆಲೆಯಲ್ಲಿ ಕಾಣಿಸಿದ್ದಾಳೆ.

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಗೆ ಪುನರ್‌ವಿವಾಹದ ಅವಕಾಶವನ್ನು ರಾವಣ ಒದಗಿಸಿದ್ದಾನೆ. ವಿದ್ಯುಜ್ಜಿಹ್ವನನ್ನು ಯುದ್ಧದಲ್ಲಿ ಕೊಂದ ಪಶ್ಚಾತ್ತಾಪ ರಾವಣನಲ್ಲಿ ಇತ್ತು. ಮಹಾನ್ವೇಷಣಂ ಮಹಾಕಾವ್ಯದಲ್ಲಿ ಶೂರ್ಪನಖಿ ತನ್ನ ಪತಿಯನ್ನು ಕೊಂದ ರಾವಣನನ್ನು ದ್ವೇಷಿಸುತ್ತಾಳೆ. ಕೊನೆಗೆ ಲಕ್ಷ್ಮಣನಿಂದ ಸನತ್ಕುಮಾರ ಹತನಾದಾಗ ರಾವಣನಿಂದಲೇ ಸಾಂತ್ವನವನ್ನು ಅಪೇಕ್ಷಿಸುತ್ತಾಳೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯಲ್ಲಿ ಮಾನವಸಹಜ ದುಃಖ, ವೇದನೆ, ಹತಾಶೆಗಳೆಲ್ಲವೂ ಅಭಿವ್ಯಕ್ತವಾಗಿದೆ.

ಬಹುತೇಕ ಮೌಖಿಕ ರಾಮಾಯಣಗಳು ಶೂರ್ಪನಖಿಯ ಬದುಕನ್ನು ಕಾಳಜಿಯಿಂದ ಕಂಡಿಲ್ಲ. ಪುರುಷಪ್ರಭುತ್ವವನ್ನು ಬಲಪಡಿಸುವ ತುಡಿತದಲ್ಲಿ ಅವಳ ಸಂವೇದನೆಯನ್ನು ಪರಿಗ್ರಹಿಸಿಲ್ಲ. ರಾವಣ ಮುಖ್ಯನಾದ ಮೌಖಿಕ ಪರಂಪರೆಯವರಿಗೆ ಶೂರ್ಪನಖಿ ಅಮುಖ್ಯಳಾದಳು. ಹಾಗಾಗಿ ಬಹುತೇಕ ಮೌಖಿಕ ರಾಮಾಯಣಗಳು ಶೂರ್ಪನಖಿಯ ಪಾತ್ರನಿರೂಪಣೆಯಲ್ಲಿ ಅಲಕ್ಷ್ಯ ತಾಳಿವೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ಶೂರ್ಪನಖಿಗೆ ರಾಕ್ಷಸ ಗುಣಗಳನ್ನು ಆರೋಪಿಸಿ ನಿರೂಪಿಸುವಲ್ಲಿ ಆಸಕ್ತಿವಹಿಸಿಲ್ಲ. ಹಾಗಾಗಿ ಸಹಜ ಸ್ತ್ರೀಯೊಬ್ಬಳ ಅಂತರಂಗಸಂವೇದನೆಯನ್ನು ಶೂರ್ಪನಖಿಯ ನೆಲೆಯಿಂದ ಇಲ್ಲಿ ಗುರುತಿಸಲು ಸಾಧ್ಯ.

ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಗೆ ವಿಶೇಷ ಸ್ಥಾನವಿದೆ. ವಿದ್ಯುಜ್ಜಿಹ್ವನನ್ನು ಕೊಂದ ಪಶ್ಚಾತ್ತಾಪದಲ್ಲಿ ಶೂರ್ಪನಖಿಯನ್ನು ಜನಸ್ಥಾನದ ಚಕ್ರವರ್ತಿನಿಯನ್ನಾಗಿ ಮಾಡಲಾಗುತ್ತದೆ. ವಿಧವೆ ಎಂಬ ಪರಿಕಲ್ಪನೆಯನ್ನು ಒಡೆದ ಮಹಾನ್ವೇಷಣಂ ಮಹಾಕಾವ್ಯದ ಕವಿ ಇಲ್ಲಿ ಶೂರ್ಪನಖಿಯ ಕುರಿತು ಉದಾರತೆ ತಾಳಿದ್ದಾರೆ. ಮೌಖಿಕ ರಾಮಾಯಣದಲ್ಲಿ ಶೂರ್ಪನಖಿಯ ಮೊಲೆ, ಮೂಗನ್ನು ಕತ್ತರಿಸುವ ಪ್ರಸಂಗವಿದೆ. ಈ ವಿಚಾರದಲ್ಲಿ ಜನಪದರು ಶೂರ್ಪನಖಿಯನ್ನು ಹೀನಾಯವಾಗಿ ನಡೆಸಿಕೊಂಡಿದ್ದಾರೆ. ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಶೂರ್ಪನಖಿಯನ್ನು ಈ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಇಲ್ಲ. ಮೌಖಿಕ ರಾಮಾಯಣ ಪರಂಪರೆಯಲ್ಲಿ ನಿರೂಪಿತವಾದ ಶೂರ್ಪನಖಿಯ ತೇಜೋವಧೆಯ ಪ್ರಸಂಗವನ್ನು ಕವಿ ಇಲ್ಲಿ ತಪ್ಪಿಸಿದ್ದಾರೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಶೂರ್ಪನಖಿಯ ಮೂಗು ಮತ್ತು ಕಿವಿಗಳನ್ನು ಕತ್ತರಿಸುವ ಪ್ರಸಂಗ ನಿರೂಪಿತವಾಗಿದೆ. ಶೂರ್ಪನಖಿಯನ್ನು ರಾಕ್ಷಸಿಯಾಗಿ ನಿರೂಪಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇಲ್ಲ. ಆದರೆ ಆಕೆಯಲ್ಲಿನ ಪಾಶವೀ ಪ್ರವೃತ್ತಿಗಳನ್ನು ಅನಾವರಣ ಮಾಡುವ ಉದ್ದೇಶ ಇದೆ. ಹೀಗೆ ಅನಾವರಣ ಮಾಡುವಲ್ಲಿ ಕವಿ ಶೂರ್ಪನಖಿಯ ವ್ಯಕ್ತಿತ್ವವನ್ನು ಕ್ರೌರ್ಯದ ನೆಲೆಯಲ್ಲಿ ನಿರೂಪಿಸಿಲ್ಲ ಎಂದೇ ಹೇಳಬೇಕು. ಪಾಶವೀ ಪ್ರವೃತ್ತಿಗಳನ್ನು ಮಾನವೀಯ ಪ್ರವೃತ್ತಿಯೆಡೆಗೆ ರೂಪಾಂತರಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇದೆ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಶೂರ್ಪನಖಿ ಮೌಖಿಕ ರಾಮಾಯಣದ ಶೂರ್ಪನಖಿಗಿಂತ ಎತ್ತರದಲ್ಲಿ ನಿಲ್ಲುತ್ತಾಳೆ.

### ೬.೧.೩ ಮಂಡೋದರಿ

ಮೌಖಿಕ ರಾಮಾಯಣ ಪರಂಪರೆಗೆ ಮಂಡೋದರಿಯ ಬದುಕನ್ನು ಕಟ್ಟುವಲ್ಲಿ ವಿಶೇಷ ಕಾಳಜಿ ಇಲ್ಲ. ಹಾಗಾಗಿ ಮೌಖಿಕ ಪರಂಪರೆ ರಾಮಾಯಣದ ಮಂಡೋದರಿಗೆ ವಿಶೇಷ ಸ್ಥಾನ ಕಲ್ಪಿಸಿಲ್ಲ. ರಾವಣನ ಭೀಕರ ಸ್ವಭಾವವನ್ನು ಅನಾವರಣ ಮಾಡುವ ಉದ್ದೇಶ ಜನಪದರಿಗೆ ಮುಖ್ಯವಾಯಿತೇ ವಿನಾ ಮಂಡೋದರಿಯ ಒಳತೋಟಿಯನ್ನು ಗ್ರಹಿಸುವ ಉದ್ದೇಶ ಮುಖ್ಯವಾಗಲಿಲ್ಲ. ರಾವಣನನ್ನು ದುಷ್ಟನೆಂದು ನಿರೂಪಿಸುವ ತುಡಿತದಲ್ಲಿ ಮಂಡೋದರಿಯನ್ನು ರಕ್ಕಸಿಯಾಗಿ ನಿರೂಪಿಸದೇ ಇದದ್ದು ಮೌಖಿಕ ರಾಮಾಯಣ ಪರಂಪರೆಯ ಉದಾತ್ತತೆಯನ್ನು ತೋರಿಸುತ್ತದೆ.

'ಹೊನ್ನಾಜಮ್ಮ ಹಾಡಿದ ಜನಪದ ರಾಮಾಯಣ'ದಲ್ಲಿ ಮಂಡೋದರಿಯ ಪ್ರಸ್ತಾಪವಿದೆ. ಇಲ್ಲಿ ಸೀತೆಯನ್ನು ಮಂಡೋದರಿಯ ಮಗಳಾಗಿ ಕಾಣಲಾಗಿದೆ. ತಾವರೆ ಹೂವನ್ನು ಮೂಸಿದ ಪರಿಣಾಮ ರಾವಣನ ಮಗಳಾಗಿ ಸೀತೆ ಮೂಗಿನಿಂದ ಹೊರಬೀಳುತ್ತಾಳೆ.

ಹೀಗೆ ಮಂಡೋದರಿಗೂ ಸೀತೆಗೂ ಮಾತೃತ್ವದ ನೆಲೆಯಲ್ಲಿ ಸಂಬಂಧ ಕಲ್ಪಿಸಲಾಗಿದೆ. ಮೌಖಿಕ ಪರಂಪರೆ ಮಾನವೀಯ ನೆಲೆಯಲ್ಲಿ ಮಂಡೋದರಿಯ ಬದುಕನ್ನು ಕಟ್ಟಿದೆ. ಮೌಖಿಕ ಸಂಪ್ರದಾಯದ ಮಂಡೋದರಿಯ ಪಾತ್ರ ಸಾಂಪ್ರದಾಯಿಕ ಮಾದರಿಯಲ್ಲಿ ಸಾಗಿದೆ.

ತಂಬೂರಿ ಸಂಪ್ರದಾಯದ ರಾಮಾಯಣದಲ್ಲಿ ಮಂಡೋದರಿಯ ಪ್ರಸ್ತಾಪವಿದೆ. ದಶರಥನ ಮಕ್ಕಳಾದ ರಾಮಲಕ್ಷ್ಮಣರನ್ನು ಪ್ರೀತಿಯಿಂದ ಉಪಚರಿಸಿದ ಮಂಡೋದರಿಗೆ ಅವರ ಮೇಲೆ ಯಾವುದೇ ಕೋಪವಿಲ್ಲ. ರಾವಣನ ಜೀವವಿರುವ ಜಾಗ ಅರಿತ ಮಂಡೋದರಿ ಪತಿಯ ಪ್ರಾಣಭೇದದ ದಿಕ್ಕನ್ನು ರಾಮಲಕ್ಷ್ಮಣರಿಗೆ ಸೂಚಿಸುತ್ತಾಳೆ. ವಾಸ್ತವವಾಗಿ ತಂಬೂರಿ ಸಂಪ್ರದಾಯದ ಮೇಲೆ ಬೇರೆ ಬೇರೆ ಮೌಖಿಕ ರಾಮಾಯಣ ಪರಂಪರೆಗಳ ಪರಿಣಾಮ ಆಗಿದ್ದಿರಬಹುದು ಎನ್ನಿಸುತ್ತದೆ. ನಾವು ನೀವು ಪ್ರೀತಿಯಲ್ಲಿ ಕೂತು ವೀಳ್ಯ ಮೆದ್ದರೆ ಪ್ರೀತಿ ಉಳಿಯುತ್ತದೆ ಎಂಬ ಆಶಯ ಇಲ್ಲಿ ಮಂಡೋದರಿಯಿಂದ ವ್ಯಕ್ತವಾಗಿದೆ. ಹೀಗೆ ಹೇಳುವ ಮೂಲಕ ರಾಮಲಕ್ಷ್ಮಣರ ಕುರಿತು ಮಂಡೋದರಿಯಲ್ಲಿರುವ ಕಾಳಜಿ ವ್ಯಕ್ತವಾಗುತ್ತದೆ. ತಂಬೂರಿ ಸಂಪ್ರದಾಯದ ಮಂಡೋದರಿಯ ವ್ಯಕ್ತಿತ್ವ ವಿಮರ್ಶೆಗೆ ಗುರಿಪಡಿಸುವಂತಿದೆ.

'ಹೊನ್ನಾಜಮ್ಮ ಹಾಡಿದ ಜನಪದ ರಾಮಾಯಣ'ದ ಮಂಡೋದರಿಗೂ, ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಯ ಪಾತ್ರಕ್ಕೂ ಸಾಮ್ಯ ಇದೆ. ಈ ಎರಡೂ ರಾಮಾಯಣಗಳಲ್ಲಿ ಮಂಡೋದರಿಯ ಬದುಕನ್ನು ಸೀತೆಯ ಬದುಕಿನೊಂದಿಗೆ ಬೆಸೆಯಲಾಗಿದೆ. ಮೌಖಿಕ ರಾಮಾಯಣದ ಸೀತೆ ಮಂಡೋದರಿಯ ಮಗಳು. ಮಹಾನ್ವೇಷಣಂ ಮಹಾಕಾವ್ಯದ ಸೀತೆ ವಾಸ್ತವವಾಗಿ ಮಂಡೋದರಿಯ ಮಗಳಲ್ಲ. ಆದರೂ ಇಲ್ಲಿನ ಮಂಡೋದರಿಯಲ್ಲಿ ಮಾತೃಸಂವೇದನೆ ಅಭಿವ್ಯಕ್ತಗೊಂಡಿದೆ. ತಾಯಿಯ ನೆಲೆಯಿಂದಲೇ ಸೀತೆಯ ಕುರಿತು ಕಾಳಜಿ ಉಳ್ಳವಳು ಮಂಡೋದರಿ. ಸೀತೆಯ ಕುರಿತ ಮಾತೃಪ್ರೇಮದ ನೆಲೆಗಳು ಈ ಎರಡೂ ರಾಮಾಯಣಗಳ ಮಂಡೋದರಿಯ ಪಾತ್ರದಿಂದ ಅಭಿವ್ಯಕ್ತಗೊಂಡಿದೆ.

ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಗೂ ತಂಬೂರಿ ಸಂಪ್ರದಾಯದ ಮಂಡೋದರಿಗೂ ಅಜಗಜಾಂತರವಿದೆ. ಈ ಕಾವ್ಯದಲ್ಲಿ ಸ್ವಯಂ ಅಗ್ನಿಪ್ರವೇಶ ಮಾಡಿದ ಸೀತೆಯನ್ನು ಮಂಡೋದರಿ ಮೇಲಕ್ಕೆ ಎತ್ತುತ್ತಾಳೆ. ಇಲ್ಲಿ ಸೀತೆಯ ಕುರಿತ ಕಾಳಜಿ ಮಂಡೋದರಿಯಲ್ಲಿ ವ್ಯಕ್ತವಾಗಿದೆ. ಪತಿಯ ದೋಷವನ್ನು ಗ್ರಹಿಸುವ ಬುದ್ಧಿಪ್ರೌಢಿಮೆ ಮಂಡೋದರಿಯಲ್ಲಿ ಇದೆ. ಇಲ್ಲಿ ಸ್ತ್ರೀಸಂವೇದನಾಶೀಲತೆಯ ನೆಲೆಯಲ್ಲಿ ಮಂಡೋದರಿಯ ಬದುಕನ್ನು ಕಟ್ಟಲಾಗಿದೆ. ಹೆಣ್ಣು ವಿನಾ ಕಾರಣ ತನ್ನನ್ನು ಪರೀಕ್ಷೆಗೆ ಒಡ್ಡಿಕೊಳ್ಳುವುದನ್ನು

ಇಲ್ಲಿ ಮಂಡೋದರಿ ನಿರಾಕರಿಸಿದ್ದಾಳೆ. ಮೌಖಿಕ ರಾಮಾಯಣದ ಮಂಡೋದರಿಯಲ್ಲಿ ಈ ಚಿಂತನೆ, ವಿಚಾರಶೀಲತೆ ಅಭಿವ್ಯಕ್ತಗೊಂಡಿಲ್ಲ. ಹಾಗಾಗಿ ಮೌಖಿಕ ರಾಮಾಯಣದ ಮಂಡೋದರಿಯ ಪಾತ್ರಕ್ಕಿಂತ ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಯ ಪಾತ್ರ ಉನ್ನತಿಗೇರಿದಂತೆ ಕಾಣುತ್ತದೆ.

**೬.೧.೪ ಮಂಥರೆ**

ಮೌಖಿಕ ರಾಮಾಯಣದಲ್ಲಿ ಮಂಥರೆಯ ಪ್ರಸ್ತಾಪವಿಲ್ಲ. ತನ್ನ ಅಪೇಕ್ಷೆಯನ್ನು ಕೈಕೆಯೇ ನೇರವಾಗಿ ದಶರಥನಲ್ಲಿ ಅಭಿವ್ಯಕ್ತಿಸುತ್ತಾಳೆ. ಮಂಥರೆಯ ಪಾತ್ರವನ್ನು ಅಡಗಿಸುವ ಉದ್ದೇಶ ಮೌಖಿಕ ಪರಂಪರೆಯವರಿಗೆ ಇಲ್ಲ. ಬದಲಿಗೆ ಕೈಕೆಯ ಸಹಜ ಮನಸ್ಥಿತಿಯನ್ನು ಅನಾವರಣ ಮಾಡುವ ಉದ್ದೇಶವಿದೆ. ಕೈಕೆಯನ್ನು ರಾಣಿಯನ್ನಾಗಿ ನೋಡುವುದಕ್ಕಿಂತ ಸಹಜಸ್ತ್ರೀಯಾಗಿ ನೋಡುವಲ್ಲಿ ಮೌಖಿಕ ಸಂಪ್ರದಾಯದವರು ಆಸಕ್ತರಾದರು. ಕೌಸಲ್ಯೆಯ ಮೇಲಿದ್ದ ಸವತಿಮಾತ್ಸರ್ಯದ ಪರಿಕಲ್ಪನೆ ಮೌಖಿಕ ರಾಮಾಯಣದ ಕೈಕೆಯಲ್ಲಿ ಸಹಜವಾಗಿಯೇ ಅಭಿವ್ಯಕ್ತಗೊಂಡಿದೆ. ಈ ಸಹಜತೆಯನ್ನು ನಿರೂಪಿಸುವಲ್ಲಿ ಜನಪದರಿಗೆ ಯಾವುದೇ ಮುಜುಗರವಿಲ್ಲ.

ಮೌಖಿಕ ರಾಮಾಯಣ ಪರಂಪರೆಯಲ್ಲಿ ನಿರೂಪಿತವಾದ ಕೈಕೆ ಜನಪದರ ಭಾವಕೋಶದ ವ್ಯಾಪ್ತಿಯಿಂದ ಬಹುದೂರ ಉಳಿಯುವುದಿಲ್ಲ. ನಿತ್ಯಬದುಕಿನ ಆಗುಹೋಗುಗಳ ಚಿತ್ರಣವೇ ಮೌಖಿಕ ರಾಮಾಯಣದಲ್ಲಿ ಅಭಿವ್ಯಕ್ತಗೊಂಡಿದೆ. ಕೈಕೆಯನ್ನು ರಾಣಿಯ ನೆಲೆಯಿಂದ ನೋಡುವ ಉದ್ದೇಶವಾಗಲಿ, ಸದ್ಗುಣಗಳನ್ನು ಆರೋಪಿಸುವ ತುಡಿತವಾಗಲಿ ಮೌಖಿಕ ಸಂಪ್ರದಾಯದವರಿಗೆ ಇಲ್ಲ. ಹಾಗಾಗಿ ಸಹಜಸ್ತ್ರೀಯ ಭಾವಗಳು ಇಲ್ಲಿ ಕೈಕೆಯ ನೆಲೆಯಿಂದ ಅಭಿವ್ಯಕ್ತಗೊಂಡಿವೆ. ಕೈಕೆಯ ದೋಷವನ್ನು ಪರಿಗ್ರಹಿಸುವಲ್ಲಿ ಜನಪದ ಮನಸ್ಸು ವಿಫಲವಾಗಿಲ್ಲ. ಆಕೆಯ ಸವತಿಮಾತ್ಸರ್ಯದ ಭಾವಗಳನ್ನು ಅಡಗಿಸುವ ಉದ್ದೇಶ ಮೌಖಿಕ ರಾಮಾಯಣ ಪರಂಪರೆಗೆ ಇಲ್ಲ. ಹಾಗಾಗಿ ಜನಪದರು ಮಂಥರೆಯ ಪಾತ್ರವನ್ನು ಬಳಸಿಕೊಂಡಿಲ್ಲ. ಮಂಥರೆಯನ್ನು ಅಪರಾಧಿಯನ್ನಾಗಿ ನಿರೂಪಿಸುತ್ತಾ ಕೈಕೆಯ ತಪ್ಪುಗಳನ್ನು ಅಡಗಿಸುವ ಪ್ರಯತ್ನ ಇಲ್ಲಿ ನಡೆದಿಲ್ಲ. ಹಾಗಾಗಿ ಕೈಕೆಯನ್ನು ಸಹಜಸ್ತ್ರೀಯಾಗಿ ಸ್ವೀಕರಿಸಿದ ಮೌಖಿಕ ಪರಂಪರೆ ಅವಳ ಸವತಿಮಾತ್ಸರ್ಯದ ಭಾವವನ್ನು ಸಹಜತೆಯ ನೆಲೆಯಲ್ಲಿಯೇ ನಿರೂಪಿಸಿದೆ. ಹೀಗೆ ಕೈಕೆಯನ್ನು ನಿರೂಪಿಸುವಲ್ಲಿ ಮೌಖಿಕ ಪರಂಪರೆಯವರಿಗೆ ಕ್ರೋಧವಿಲ್ಲ. ಪಶ್ಚಾತ್ತಾಪಭಾವವೂ ಇಲ್ಲ. ಒಂದು ಕಾಲದ ಜೀವನಕ್ರಮವನ್ನು ಸಹಜತೆಯ ನೆಲೆಯಲ್ಲಿಯೇ ನಿರೂಪಿಸಲಾಗಿದೆ. ದಶರಥನ ಮೂವರು ಹೆಂಡಂದಿರಲ್ಲಿ ಹೊಂದಾಣಿಕೆ ಇರಲು ಸಾಧ್ಯವಿಲ್ಲ ಎಂಬ ವಾಸ್ತವದ ಅರಿವು ಮೌಖಿಕ ಪರಂಪರೆಯವರಿಗೆ ಇತ್ತು. ಹಾಗಾಗಿ ಕೈಕೆಯ

ಸವತಿಮಾತ್ಸರ್ಯ ಭಾವವನ್ನು ನಿಸ್ಸಂಕೋಚವಾಗಿ ನಿರೂಪಿಸಿದ್ದಾರೆ. ಈ ಕಾರಣದಿಂದಾಗಿಯೇ ಮೌಖಿಕ ರಾಮಾಯಣ ಪರಂಪರೆಯಲ್ಲಿ ಮಂಥರೆಯ ಪಾತ್ರ ನಿರೂಪಿತವಾಗಿಲ್ಲ ಎಂದೇ ಹೇಳಬೇಕು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಮಂಥರೆಯ ಪಾತ್ರವಿದೆ. ಕೈಕೆಯನ್ನು ರಕ್ಷಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ. ಕೆಳಸಮುದಾಯದ ಅಂತರಂಗಸಂವೇದನೆಯನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ತೀರಾ ಸಮೀಪದಿಂದ ಬಲ್ಲವರು. ಹಾಗಾಗಿ ಇಲ್ಲಿ ಕವಿಗೆ ಮಂಥರೆಯ ಬದುಕು ಮುಖ್ಯವಾಯಿತು. ಸ್ತ್ರೀಸಂವೇದನೆ ಮತ್ತು ದಲಿತ ಸಂವೇದನೆ ಕವಿಯಲ್ಲಿ ಮಿಳಿತಗೊಂಡಿರುವುದರಿಂದ ಮಂಥರೆಯ ಕುರಿತು ಕವಿಗೆ ಆಪ್ತತೆ ಇದೆ. ಕೈಕೆಯನ್ನು ನಿರಪರಾಧಿಯನ್ನಾಗಿಸುವ ತುಡಿತ ಇಲ್ಲಿ ಕವಿಗೆ ಇಲ್ಲ. ಮಂಥರೆಯನ್ನು ಆರೋಪಿಯನ್ನಾಗಿಸುವ ಉದ್ದೇಶವೂ ಇಲ್ಲ. ಮಂಥರೆಯ ಅಳಲು, ಅಂತರಂಗಸಂವೇದನೆ, ಒಳತೋಟಿಯನ್ನು ಅರಿಯುವಲ್ಲಿ ಕವಿಗೆ ಆಸಕ್ತಿ ಇದೆ. ಸಾಮಾಜಿಕ ಸ್ಥಾನಮಾನ ಪಡೆಯದೆ ಅಲಕ್ಷ್ಯಕ್ಕೆ ಒಳಗಾದ ಸ್ತ್ರೀಸಮುದಾಯದ ಕುರಿತು ಕವಿಗೆ ಕಾಳಜಿ ಇದೆ. ಈ ಕಾಳಜಿ ಮಂಥರೆಯ ನೆಲೆಯಿಂದ ಅಭಿವ್ಯಕ್ತಗೊಂಡಿದೆ.

ಇಲ್ಲಿ ಕವಿ ಕೈಕೆಯನ್ನು ರಕ್ಷಿಸುವ ತಂತ್ರವಾಗಿ ಮಂಥರೆಯನ್ನು ನಿರೂಪಿಸಿಲ್ಲ. ಕೈಕೆ ಮತ್ತು ಭರತನನ್ನು ಹೊರತುಪಡಿಸಿ ಮತ್ತಾರಿಂದಲೂ ಪ್ರೀತಿ ಪಡೆಯದ ಮಂಥರೆಯ ಮನಸ್ಸು ರೋಸಿ ಹೋಗಿತ್ತು. ಇದರ ಪರಿಣಾಮವೇ ಭರತನ ಮೇಲಿನ ವ್ಯಾಮೋಹಕ್ಕೆ ಕಾರಣವಾಯಿತು. ಹಾಗಾಗಿ ಇಲ್ಲಿ ಮಂಥರೆಯನ್ನು ಕೈಕೆಯ ಬಯಕೆಗಳಿಗೆ ಪ್ರೋತ್ಸಾಹ ನೀಡುವ ಶಕ್ತಿಯಾಗಿ ನಿರೂಪಿಸಲಾಗಿದೆ. ಕೈಕೆ ಮತ್ತು ಮಂಥರೆಯ ಅಪೇಕ್ಷೆಗಳು ಒಂದೇ ಎಂಬುದನ್ನು ಸಾಬೀತುಪಡಿಸುವ ಉದ್ದೇಶ ಕವಿಗೆ ಇದೆ. ಸಾಮಾಜಿಕ ತಿರಸ್ಕಾರಕ್ಕೆ ಒಳಗಾದವರ ಮನಸ್ಥಿತಿ ನಲುಗಿ ಹೋಗುವುದೆಂಬ ವಾಸ್ತವನ್ನು ಅಭಿವ್ಯಕ್ತಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಮಂಥರೆಯ ಪಾತ್ರಮುಖೇನ ಈ ವಿಚಾರವನ್ನು ಕವಿ ಸ್ಪಷ್ಟಪಡಿಸಿದ್ದಾರೆ.

### ೬.೨ ಲಿಖಿತ ಪರಂಪರೆ

ಲಿಖಿತ ರಾಮಾಯಣ ಪರಂಪರೆ ಮೌಖಿಕ ರಾಮಾಯಣ ಪರಂಪರೆಗಿಂತ ಭಿನ್ನವಾಗಿದೆ. ಆಯಾಯ ಕಾಲದ ಮನೋಧರ್ಮ, ಕವಿಯ ಮಾನಸಿಕ ಶೋಧದ ನೆಲೆಯ ಪ್ರಭಾವ ಲಿಖಿತ ಮಹಾಕಾವ್ಯಗಳ ಮೇಲಾಗಿದೆ. ಕಾಲಿಕ ಬದಲಾವಣೆಗೆ ತುತ್ತಾದ ಲಿಖಿತ ರಾಮಾಯಣಗಳಲ್ಲಿ ಮಾರ್ಪಾಟಿದೆ. ಲಿಖಿತ ರಾಮಾಯಣ ಕಾವ್ಯಗಳು ಒಂದೇ ತೆರನಾಗಿಲ್ಲ.

ಭಿನ್ನ ಭಿನ್ನ ಆಶಯಗಳನ್ನು ಅಭಿವ್ಯಕ್ತಿಸಿವೆ. ಕನ್ನಡದ ಲಿಖಿತ ರಾಮಾಯಣಗಳೊಂದಿಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮುಖಾಮುಖಿಯಾಗಿರಿಸಿ ತೌಲನಿಕವಾಗಿ ಅಭ್ಯಸಿಸಲಾಗಿದೆ. ಹೀಗೆ ತೌಲನಿಕವಾಗಿ ಅಭ್ಯಸಿಸುವಲ್ಲಿ ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ' ಕುವೆಂಪುವರ 'ಶ್ರೀ ರಾಮಾಯಣದರ್ಶನಂ' ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಶ್ರೀ ರಾಮ ಪಟ್ಟಾಭಿಷೇಕ' ಮಹಾಕಾವ್ಯಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ಸ್ಥಿತಪ್ರಜ್ಞತೆಯ ನೆಲೆಯಲ್ಲಿ ಸಂಚರಿಸಿವೆ. ಈ ಸ್ಥಿತಪ್ರಜ್ಞತೆ ಪಾತ್ರಗಳ ಅಂತರಂಗದಲ್ಲಿ ಅಡಗಿರುವ ಧೀಶಕ್ತಿಯನ್ನು ಉದ್ದೀಪನಗೊಳಿಸಿವೆ. ಹೀಗೆ ಉದ್ದೀಪನಗೊಳಿಸುವಲ್ಲಿ ಕವಿಯ ಸಂವೇದನಾಶೀಲತೆ ಅಭಿವ್ಯಕ್ತಗೊಳ್ಳುತ್ತವೆ. ಕನ್ನಡದ ಲಿಖಿತ ರಾಮಾಯಣ ಪರಂಪರೆಯನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದೊಂದಿಗೆ ತೌಲನಿಕವಾಗಿ ಅಭ್ಯಸಿಸಿದಾಗ ಕೆಲಮಟ್ಟಿನ ಸಾಮ್ಯ ಮತ್ತು ಭಿನ್ನತೆಗಳು ಕಾಣಿಸಿವೆ. ಹೀಗೆ ಲಿಖಿತ ರಾಮಾಯಣ ಪರಂಪರೆಯೊಂದಿಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮುಖಾಮುಖಿಯಾಗಿ ಅಭ್ಯಸಿಸಿ ಈ ಮೂಲಕ ಅದರ ಅನನ್ಯತೆಯನ್ನು ಶೋಧಿಸಲಾಗಿದೆ.

**೬.೨.೧ ಸೀತೆ**

ಲಿಖಿತ ರಾಮಾಯಣ ಪರಂಪರೆಯ ಸೀತೆ ಒಂದೊಂದು ಕಾವ್ಯದಲ್ಲಿ ಒಂದೊಂದು ತೆರನಾಗಿ ಕಾಣಿಸಿದ್ದಾಳೆ. ಸೀತೆಯ ಪಾತ್ರನಿರೂಪಣೆಯಲ್ಲಿ ಆಧುನಿಕ ಕನ್ನಡ ಕವಿಗಳು ಉದಾತ್ತತೆ ತಳೆದಿದ್ದಾರೆ. ಆದರೆ ಒಂದೇ ನೆಲೆಯಲ್ಲಿ ನಿರ್ವಚಿಸಿಲ್ಲ. ವ್ಯವಸ್ಥೆಯ ದೋಷವನ್ನು ಪರಿಗ್ರಹಿಸದ ದುರ್ಬಲ ವ್ಯಕ್ತಿತ್ವವಾಗಿ ಸೀತೆಯನ್ನು ನಿರೂಪಿಸಿಲ್ಲ. ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲು ಸಾಧ್ಯವಾಗದೆ ಹೋದರೂ ಲಿಖಿತ ರಾಮಾಯಣದ ಸೀತೆಯಲ್ಲಿ ಅಸ್ತಿತ್ವ, ವ್ಯಕ್ತಿತ್ವದ ಪ್ರಜ್ಞೆ ಇದೆ. ಈ ಜಾಗೃತಪ್ರಜ್ಞೆ ಬದುಕನ್ನು ರೂಪಿಸಿಕೊಳ್ಳುವ ಮಟ್ಟಕ್ಕೆ ಸೀತೆಯನ್ನು ಬೆಳೆಸಿದೆ. ಈ ನಿರೂಪಣೆಯ ಹಿಂದೆ ಆಧುನಿಕ ಕವಿಗಳ ಮಾನಸಿಕನೆಲೆ, ಉದಾತ್ತಚಿಂತನೆ, ಸ್ತ್ರೀಸಂವೇದನೆ ಕೆಲಸ ಮಾಡಿದೆ ಎಂದೇ ಹೇಳಬೇಕು.

ಡಿ. ವಿ. ಜಿ.ಯವರ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ರಾಮಾಯಣದ ಎಲ್ಲ ಮಹಿಳಾ ಪಾತ್ರಗಳ ನಿರೂಪಣೆ ಇಲ್ಲ. ಕವಿಗೆ ಪ್ರಧಾನ ಎನಿಸಿದ ಕೆಲವೇ ಪಾತ್ರಗಳನ್ನು ಅನಾವರಣ ಮಾಡಲಾಗಿದೆ. ಇದಕ್ಕೆ ಕಾವ್ಯನಿರ್ಮಿತಿಯ ಹಿಂದೆ ಇದ್ದ ಕವಿಯ ಧೋರಣೆ ಕಾರಣವಿರಬೇಕು. ಈ ಕಾವ್ಯದ ಕೇಂದ್ರಬಿಂದು ರಾಮ. ರಾಮನನ್ನು ಕೇಂದ್ರಿಕರಿಸಿ ಇಲ್ಲಿನ

ಮಹಿಳಾ ಪಾತ್ರಗಳು ಪ್ರತಿಕ್ರಿಯಿಸುತ್ತವೆ. ತಮಗಾದ ಅನ್ಯಾಯದ ವಿರುದ್ಧ ಪ್ರತಿಭಟಿಸುತ್ತವೆ. ಸ್ವಾತಂತ್ರ್ಯ, ಅಸ್ತಿತ್ವದ ಕುರಿತು ಮಾತಾಡುತ್ತವೆ. ಪ್ರಭುತ್ವಪರಂಪರೆಯ ಪ್ರತಿನಿಧಿಯಾದ ರಾಮನನ್ನು ವಿಶ್ಲೇಷಿಸುತ್ತವೆ. ಹೀಗೆ ವಿಶ್ಲೇಷಿಸಿ ಪ್ರತಿಭಟಿಸುವಲ್ಲಿ ಇಲ್ಲಿನ ಮಹಿಳಾ ಪಾತ್ರಗಳಿಗೆ ಅಂಜಿಕೆ ಇಲ್ಲ. ಕೆಲವು ಮಹಿಳಾ ಪಾತ್ರಗಳಲ್ಲಿ ಪಶ್ಚಾತ್ತಾಪ ಭಾವವಿದೆ. ಇನ್ನು ಕೆಲವು ಪಾತ್ರಗಳಲ್ಲಿ ಆಕ್ರೋಶ ಇದೆ. ಮತ್ತೆ ಕೆಲವು ಪಾತ್ರಗಳು ವ್ಯವಸ್ಥೆಯ ದೋಷವನ್ನು ಗ್ರಹಿಸಲಾರದ ಮಟ್ಟಕ್ಕೆ ನಿಂತುಬಿಡುತ್ತವೆ. 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳು ರಾಮನಿಗೆ ಸವಾಲು ಒಡ್ಡುತ್ತವೆ. ಈ ಸವಾಲುಗಳು ರಾಮನನ್ನು ತಪ್ಪಿತಸ್ಥನನ್ನಾಗಿ, ಪಕ್ಷಪಾತಿಯನ್ನಾಗಿ, ಆಜ್ಞಾಧಾರಕನನ್ನಾಗಿ, ಆಜ್ಞಾಪಾಲಕನನ್ನಾಗಿ ನಿರೂಪಿಸಿದೆ. ಇದು ಡಿ.ವಿ.ಜಿ.ಯವರ ನಿರೂಪಣಾತಂತ್ರ. ರಾಮನನ್ನು ಪ್ರಶ್ನಿಸುವ ಮುಖಾಂತರ ಪರೀಕ್ಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳು ರಾಮನ ವ್ಯಕ್ತಿತ್ವವನ್ನು ಒರೆಗೆ ಹಚ್ಚಿವೆ. ಪ್ರಭುತ್ವಪರಂಪರೆಯ ಅಧಿಪತಿಯಾದ ರಾಮ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಬೇಕಾದ ಅನಿವಾರ್ಯತೆ ಇದೆ.

'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಸೀತೆಯ ಸವಾಲುಗಳಲ್ಲಿ ಸೂಕ್ಷ್ಮತೆ ಇದೆ. ತೀವ್ರತೆ ಇದೆ. ಅಂತರಂಗಸಂವೇದನೆಯನ್ನು ಪ್ರಚುರಪಡಿಸುವ ಸೀತೆಯ ಮಾತುಗಳು ರಾಮನ ಮರ್ಮಸ್ಥಾನವನ್ನು ನಾಟುವಂತಿದೆ. ರಾಮನಿಂದ ಸಂಕಟಕ್ಕೆ ಒಳಗಾದ ಸೀತೆ ರಾಮನನ್ನೇ ಸಂತೈಸುವ ಮಾದರಿಯಲ್ಲಿ ನಿರೂಪಿತವಾಗಿದ್ದಾಳೆ. ಇಲ್ಲಿ ಪರೀಕ್ಷಣಂನ ರಾಮನನ್ನು ಸೀತೆ ವ್ಯಂಗ್ಯ ವಿಡಂಬನಾತ್ಮಕ ನೆಲೆಯಲ್ಲಿ ಝುಂಕಿಸುವಂತೆ ಕವಿ ನಿರೂಪಿಸಿದ್ದಾರೆ. ಬಾಹ್ಯನೋಟದಲ್ಲಿ ಸೀತೆಗೆ ರಾಮನ ಸ್ಥಿತಿಯ ಕುರಿತು ಅಪಾರ ಕಾಳಜಿ ಇರುವಂತೆ ಕಂಡರೂ ವಾಸ್ತವದಲ್ಲಿ ಸೀತೆಯ ಕಾರ್ಪಣ್ಯದ ಬದುಕೇ ಅನಾವರಣಗೊಂಡಿದೆ. ಸೀತೆಯ ಮಾತುಗಳು ರಾಮನ ಬದುಕಿನ ಕುರಿತು ಆಸಕ್ತಿ ವಹಿಸಿದಂತೆ ಕಂಡರೂ ವಾಸ್ತವದಲ್ಲಿ ಮಾತುಗಳು ಆಕ್ರೋಶವನ್ನು ವ್ಯಕ್ತಪಡಿಸುತ್ತದೆ. ಈ ಆಕ್ರೋಶ ಸೀತೆಯ ಅಳಲನ್ನು ಮಾತ್ರ ತೋರ್ಪಡಿಸುವುದಿಲ್ಲ. ಶತಮಾನಗಳ ಹೆಣ್ಣಿನ ಅಂತರಂಗದ ಸಂವೇದನೆಯನ್ನು ಅಭಿವ್ಯಕ್ತಿಸುತ್ತದೆ. ತನ್ನನ್ನು ಸಂಶಯದಿಂದ ಕಂಡ ರಾಮನಿಗೆ ಸೀತೆ ಸವಾಲನ್ನು ಎಸೆಯುತ್ತಾಳೆ. ಇನ್ನಾದರೂ ನಿನ್ನ ಜನ ಬಾಯಿಮುಚ್ಚುವರೇ? ಜನರನ್ನು ಮೆಚ್ಚಿಸುವ ನಿನ್ನ ಚಟ ಇನ್ನಾದರೂ ಕಡಿಮೆಯಾಗುವುದೇ? ಎಂದು ಪ್ರಶ್ನಿಸುತ್ತಾಳೆ. ಪ್ರಭುತ್ವಪರಂಪರೆ ಸ್ತ್ರೀಸಮುದಾಯವನ್ನು ಹೀನಾಯವಾಗಿ ನಡೆಸಿಕೊಂಡ ವಿವರ ಈ ಮೂಲಕ ಸ್ಪಷ್ಟವಾಗುತ್ತದೆ. ಪ್ರಜಾಪರಂಪರೆಯ ಆಶೋತ್ತರಗಳನ್ನು ಪಾಲಿಸುವಲ್ಲಿ ಉತ್ಸುಕನಾದ ರಾಮ ಪತಿಧರ್ಮ ಪಾಲಿಸುವಲ್ಲಿ ಸಶಕ್ತನಾದನೆ? ಎಂಬ ಪ್ರಶ್ನೆ ಮೂಡುತ್ತದೆ. ಈ ಪ್ರಶ್ನೆ ಸೀತೆಯ ನೆಲೆಯಿಂದಲೇ ಮೂಡಿದೆ. ಪ್ರಜಾಸಮುದಾಯದ ಕುರಿತು ಅಧಿಕ ಆಸಕ್ತಿ ತಾಳಿದ ರಾಮ ಸೀತೆಯ ಒಳತೋಟಿಯನ್ನು ಗ್ರಹಿಸುವಲ್ಲಿ ವಿಫಲನಾದ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಸೀತೆಯ ವಿಚಾರದಲ್ಲಿ ಕವಿ ಕುವೆಂಪು ಉದಾತ್ತತೆ ತಳೆದಿದ್ದಾರೆ. ದರ್ಶನಂನಲ್ಲಿ ಸೀತೆಯೊಂದಿಗೆ ರಾಮನೂ ಅಗ್ನಿಪ್ರವೇಶ ಮಾಡುತ್ತಾನೆ. ದಾರುಣವಾದ ಸಂದರ್ಭ ಎದುರಾದಲ್ಲಿ ಸ್ತ್ರೀ ಪುರುಷರಿಬ್ಬರೂ ಸಮಭಾಗಿಗಳಾಗಬೇಕು ಎಂಬ ಆಶಯ ಕುವೆಂಪುರವರದ್ದು. ಹಾಗಾಗಿ ಕುವೆಂಪುರವರು 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಅಗ್ನಿಪ್ರವೇಶದ ಸಂದರ್ಭಕ್ಕೆ ಸಂಬಂಧಿಸಿದಂತೆ ಸಮಾನತಾ ಭಾವ ತಳೆದಿದ್ದಾರೆ ಎನ್ನಬೇಕು. ಕುವೆಂಪು ರಾಮಾಯಣದ ರಾಮ ಸೀತೆಯನ್ನು ಹೀನಾಯವಾದ ಮಾತುಗಳಿಂದ ಮೂದಲಿಸುತ್ತಾನೆ. ಲೋಕದ ಜನರ ಎದುರಿಗೆ ಸಂಶಯದ ಮಾತುಗಳನ್ನು ಆಡುತ್ತಾನೆ. ಇದರಿಂದ ಹತಾಶಳಾದ ಸೀತೆ ಪ್ರತಿಭಟನೆಯ ಸ್ವರೂಪವಾಗಿ ಸ್ವಯಂ ಅಗ್ನಿಪ್ರವೇಶವನ್ನು ಅಪೇಕ್ಷಿಸುತ್ತಾಳೆ. ಈ ಅಪೇಕ್ಷೆಯನ್ನು ಈಡೇರಿಸುವಲ್ಲಿ ಸೀತೆ ಯಶಸ್ಸು ಪಡೆಯುತ್ತಾಳೆ. ಹೀಗೆ ಸೀತೆ ಅಗ್ನಿಪ್ರವೇಶ ಮಾಡುವಾಗ ರಾಮನೂ ಮುಂದಾಗುತ್ತಾನೆ. ಕುವೆಂಪುರವರ ಈ ವಿಚಾರಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಎರಡು ಪ್ರಶ್ನೆಗಳು ಕಣ್ಣೆದುರು ನಿಲ್ಲುತ್ತವೆ.

೧. ಸೀತೆಯ ಮೇಲೆ ರಾಮನಿಗೆ ವಿಶ್ವಾಸ ಇರಲಿಲ್ಲವೇ?

೨. ಲೋಕದ ಜನರನ್ನು ಮೆಚ್ಚಿಸುವ ಉದ್ದೇಶ ರಾಮನಿಗೆ ಏನಿತ್ತು?

ಕುವೆಂಪುರವರು ಸೀತೆಯ ಅಗ್ನಿಪ್ರವೇಶದ ಸಂದರ್ಭಕ್ಕೆ ಅನುಗುಣವಾಗಿ ಉದಾರತೆಯನ್ನು ತಾಳಿದರೂ ವಾಸ್ತವವಾಗಿ ಸಾಂಪ್ರದಾಯಿಕ ಚಿಂತನೆಯನ್ನು ಮೀರಲಾಗದ ಸ್ಥಿತಿ ತಲುಪಿದ್ದಾರೆ ಎಂದೇ ಹೇಳಬೇಕು. ಪ್ರಜಾಸಮುದಾಯದ ಎದುರು ಕ್ಷುಲ್ಲಕ ಮಾತುಗಳಿಂದ ಸೀತೆಯನ್ನು ರಾಮ ಮೂದಲಿಸುವಂತೆ ನಿರೂಪಿಸಿದುದು ಕವಿಯ ತೊಡಕು ಎಂದೇ ಹೇಳಬೇಕು.

ಸೀತೆಯಿಂದ ಲಂಕಾಸಾಮ್ರಾಜ್ಯ ನಾಶ ಹೊಂದಿತೆಂಬ ಪುರಾತನ ಪರಿಕಲ್ಪನೆಯನ್ನು 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕವಿ ಒಡೆದಿದ್ದಾರೆ. ಸೀತೆಯ ಶಕ್ತಿ ರಾವಣನನ್ನು ಉದ್ಧರಿಸಿತು ಎಂಬಂತೆ ಸೀತೆಯ ಪಾತ್ರವನ್ನು ನಿರೂಪಿಸಿದ್ದಾರೆ. ಹೀಗೆ ಈ ಸಿದ್ಧಾಂತಕ್ಕೆ ಪೂರಕವಾಗಿ ಮಹಾನ್ವೇಷಣಂ ಮಹಾಕಾವ್ಯದ ಸೀತೆಯನ್ನು ಕಾಣಬಹುದು. ಕವಿ ಕುವೆಂಪುರವರಿಗೆ ವಿನಾಶದ ಪರಿಕಲ್ಪನೆಗಿಂತ ಉದ್ಧಾರದ ಪರಿಕಲ್ಪನೆಯಲ್ಲೇ ಅಧಿಕ ಆಸಕ್ತಿ. ಕವಿ ಮಹಾನ್ವೇಷಣಂ ಮಹಾಕಾವ್ಯದ ಸೀತೆಯಿಂದ ರಾವಣನನ್ನು ಉದ್ಧರಿಸುವ ಕಾರ್ಯ ಮಾಡಿಸಿದ್ದಾರೆ. ಈ ನೆಲೆಯಲ್ಲಿ ದರ್ಶನಂನ ಸೀತೆಗೂ ಮಹಾನ್ವೇಷಣಂನ ಸೀತೆಗೂ ನಡುವಣ ಸಾಮ್ಯ ಇದೆ. ಸೀತೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಈ ಇಬ್ಬರೂ ಕವಿಗಳು ಕಲಾತ್ಮಕವಾಗಿ ಮಾನವೀಯ ಭಾವನೆಗಳ ಮಿಳಿತದಿಂದ ಸೀತೆಯ ಪಾತ್ರವನ್ನು ನಿರೂಪಿಸಿದ್ದಾರೆ.

ಸೀತೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕೆಲವು ಸಂದರ್ಭಗಳಲ್ಲಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕವಿ ಸಾಂಪ್ರದಾಯಿಕ ಮನಸ್ಥಿತಿಗೆ ಬದ್ಧರಾಗಿರುವುದು ಗಮನಾರ್ಹ ವಿಷಯ. ಬುದ್ಧಿಶಕ್ತಿಯ ನೆಲೆಯಲ್ಲಿ, ಪ್ರೌಢಪ್ರತಿಭೆಯ ಸೀತೆಯನ್ನು ನಿರೂಪಿಸುವ ಉದಾತ್ತ ಪರಿಕಲ್ಪನೆಯನ್ನು ಹೊತ್ತ ಕವಿ ಕುವೆಂಪುರವರು ಸೀತೆಯ ಪಾತ್ರ ನಿರೂಪಣೆಯಲ್ಲಿ ಸಂಪೂರ್ಣ ಯಶಸ್ಸನ್ನು ಸಾಧಿಸಲು ಸಾಧ್ಯವಾಗಲಿಲ್ಲ. ಅವಕಾಶ ಸಿಕ್ಕಲ್ಲೆಲ್ಲಾ ಶಿಷ್ಟ ಪರಂಪರೆಯ ಸಾಂಪ್ರದಾಯಿಕ ನಿಲುವನ್ನು ಮೀರಲು ಯತ್ನಿಸಿದ ಕವಿ ಮತ್ತೆ ಮತ್ತೆ ಸಾಂಪ್ರದಾಯಿಕ ಚಿಂತನೆಗೆ ಸಿಲುಕಿಕೊಂಡಿದ್ದು ದರ್ಶನಂನಲ್ಲಿ ವ್ಯಕ್ತವಾಗುತ್ತದೆ.

'ಶ್ರೀರಾಮ ಪಟ್ಟಾಭಿಷೇಕ'ದ ಸೀತೆಯ ಬದುಕನ್ನು ಸಾಂಪ್ರದಾಯಿಕ ಚಿಂತನೆಯ ನೆಲೆಯಿಂದಲೇ ಕವಿ ಮಾಸ್ತಿಯವರು ಕಂಡಿದ್ದಾರೆ. ಇಲ್ಲಿ ಸೀತೆಯನ್ನು ಅಗ್ನಿಪ್ರವೇಶಕ್ಕೆ ರಾಮ ಒಳಗುಪಡಿಸದೆ ಹೋದರೂ ರಾಮನ ಕಠೋರ ಮಾತುಗಳಿಂದ ವಿಚಲಿತಳಾದ ಸೀತೆ ಸ್ವಯಂ ಅಗ್ನಿಪ್ರವೇಶ ಬಯಸುತ್ತಾಳೆ. ಹಾಗಾಗಿ ಇಲ್ಲಿ ಸೀತೆಯ ಕುರಿತ ಕಠೋರ ಮಾತುಗಳು ಅಪವಾದದ ನೆಲೆಯಲ್ಲಿ ಮೂಡಿವೆ. ಈ ನೆಲೆಯಲ್ಲಿ ರಾಮನ ಪ್ರತಿಷ್ಠೆಯನ್ನು ಸಾಬೀತುಪಡಿಸುವ ಉದ್ದೇಶ ಕವಿಗೆ ಇದೆ. ಹಾಗಾಗಿ ಸೀತೆಯ ಅಗ್ನಿಪ್ರವೇಶಕ್ಕೆ ಸಂಬಂಧಿಸಿದಂತೆ ಯಾವುದೇ ಹೊಸಪರಿಕಲ್ಪನೆ ಕಾಣಸಿಗುವುದಿಲ್ಲ. ರಾಮ ವನವಾಸ ಹೊರಡುವಾಗ ಸೀತೆಯ ಬಳಿ ಆಡುವ ಉಪದೇಶದ ಮಾತುಗಳು ಸಾಂಪ್ರದಾಯಿಕ ಚಿಂತನೆಯಿಂದ ಕೂಡಿವೆ. ನೀನು ಅರಮನೆಯಲ್ಲೇ ಉಳಿದು ಅತ್ತೆ ಮಾವಂದಿರನ್ನು ಉಪಚರಿಸು. ನಾ ಬರುವ ದಾರಿ ಕಾಯಬೇಕು ಎಂದು ರಾಮ ಉಪದೇಶಿಸುತ್ತಾನೆ. ಪತಿಯಾದವನನ್ನು ಸತಿಯಾದವಳು ಪಾಲಿಸಬೇಕು ಎಂಬ ನಿಯಮ ಇಲ್ಲಿ ಅಭಿವ್ಯಕ್ತಗೊಂಡಿದೆ. ಈ ವಿಚಾರದಲ್ಲಿ ಕವಿ ಏಕಪಕ್ಷೀಯ ನಿಲುವನ್ನು ತಳೆದಿದ್ದಾರೆ. ಹೆಣ್ಣು ಹೀಗೆಯೇ ಇರಬೇಕು ಎಂಬ ಸಿದ್ಧ ಮಾದರಿಯ ಚೌಕಟ್ಟಿಗೆ ಕವಿ ಬದ್ಧರಾದಂತಿದೆ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕವಿಗೆ ಸೀತೆಯನ್ನು ತ್ಯಾಗದ ನೆಲೆಯಲ್ಲಿ ನಿರೂಪಿಸುವ ಉದ್ದೇಶವಿದೆ. ಈ ಕಾರಣದಿಂದಾಗಿಯೇ ಕಾವ್ಯದ ಆರಂಭದಿಂದ ತೊಡಗಿ ಕೊನೆಯವರೆಗೂ ಸೀತೆಯನ್ನು ತ್ಯಾಗಮಯಿಯಾಗಿಯೇ ಕವಿ ಕುವೆಂಪು ನಿರೂಪಿಸಿದ್ದಾರೆ. ಆದರೆ ಮಹಾನ್ವೇಷಣಂನ ಕವಿಗೆ ಈ ಉದ್ದೇಶ ಇಲ್ಲ. ಸ್ವತಂತ್ರ ಚಿಂತನೆಯ ನೆಲೆಯಿಂದ ಆತ್ಮಸಾಕ್ಷಿಗೆ ಅನುಗುಣವಾಗಿ ಪ್ರತಿಕ್ರಿಯಿಸುವ ಮತ್ತು ಅನ್ಯಾಯದ ವಿರುದ್ಧ ಪ್ರತಿಭಟಿಸುವ ಪ್ರತಿಭಟನಾತ್ಮಕ ನೆಲೆಯಲ್ಲಿ ಸೀತೆಯ ಪಾತ್ರ ಮೂಡಿಬಂದಿದೆ. ಆದ್ದರಿಂದ ತೀರ್ಮಾನ ಕೈಗೊಳ್ಳುವ ವಿಚಾರದಲ್ಲಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಸೀತೆಗಿಂತ 'ಶ್ರೀ ರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆ ಭಿನ್ನವಾಗಿದ್ದಾಳೆ. ಸೀತೆಯ ಪಾತ್ರ

ನಿರೂಪಣೆಗೆ ಸಂಬಂಧಿಸಿದಂತೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಇಪ್ಪತ್ತೊಂದನೆಯ ಶತಮಾನದ ಮಹಿಳಾಸಮುದಾಯಗಳ ಚಿಂತನೆಗಳ ಪರ ವಹಿಸಿರುವುದನ್ನು ಗಮನಿಸಬೇಕು.

ಲಿಖಿತ ರಾಮಾಯಣ ಕಾವ್ಯ ಪರಂಪರೆಯನ್ನು ಮಹಾನ್ವೇಷಣಂ ಮಹಾಕಾವ್ಯದೊಂದಿಗೆ ಮುಖಾಮುಖಿಯಾಗಿ ಇರಿಸಿದಾಗ ಸೀತೆಯ ಬದುಕಿನ ಅನನ್ಯತೆ ವ್ಯಕ್ತವಾಗುತ್ತದೆ. ಅಗ್ನಿಪ್ರವೇಶದ ಸಂದರ್ಭಕ್ಕೆ ಸಂಬಂಧಿಸಿದಂತೆ ಈ ಮಹಾಕಾವ್ಯದ ಕವಿ ಹೊಸ ಪರಿಕಲ್ಪನೆಯನ್ನು ಬಿತ್ತಿದ್ದಾರೆ. ರಾಮ ತನ್ನನ್ನು ಸ್ವೀಕರಿಸಲು ತಡವಾಯಿತು ಎಂಬ ಕಾರಣಕ್ಕಾಗಿ ಮಹಾನ್ವೇಷಣಂನ ಸೀತೆ ಸ್ವಯಂ ಅಗ್ನಿಪ್ರವೇಶ ಬಯಸುತ್ತಾಳೆ. ಸೀತೆಯ ಪಾತಿವ್ರತ್ಯವನ್ನು ಪರೀಕ್ಷಿಸುವ ರಾಮ ಇಲ್ಲಿಲ್ಲ. ಇಲ್ಲಿ ಸೀತೆಗೆ ಆತ್ಮಗೌರವದ ಪ್ರಶ್ನೆ ಮುಖ್ಯವಾಗುತ್ತದೆ. ವೈಯಕ್ತಿಕ ನೆಲೆಯಿಂದ ತೀರ್ಮಾನ ಕೈಗೊಳ್ಳುವ ಅವಕಾಶ ಈ ಮಹಾಕಾವ್ಯದ ಸೀತೆಯಲ್ಲಿ ಇದೆ. ಲಿಖಿತ ರಾಮಾಯಣ ಕಾವ್ಯ ಪರಂಪರೆಯಲ್ಲಿ ರಾಮ ಸೀತೆಯನ್ನು ಪರೀಕ್ಷೆಗೆ ಒಡ್ಡುವ ಪ್ರಮೇಯ ಇದೆ. ಅವಳ ಪಾತಿವ್ರತ್ಯವನ್ನು ಲೋಕಕ್ಕೆ ಪರಿಚಯಿಸುವ ಗುರುತರ ಜವಾಬ್ದಾರಿ ಆತನ ಮೇಲೆ ಇತ್ತು. ಲಿಖಿತ ರಾಮಾಯಣ ಕಾವ್ಯ ಪರಂಪರೆಯ ಕವಿಗಳು ಈ ಚಿಂತನೆಯನ್ನು ಗಟ್ಟಿಗೊಳಿಸಿದ್ದಾರೆ. ಮಹಾನ್ವೇಷಣಂ ಮಹಾಕಾವ್ಯದ ಸೀತೆಯನ್ನು ರಾಮ ಸಂಶಯ ಭಾವದಿಂದ ಕಾಣುವುದಿಲ್ಲ. ಲೋಕದ ಜನರನ್ನು ಮೆಚ್ಚಿಸುವ ಉದ್ದೇಶ ಇಲ್ಲಿ ರಾಮನಿಗೆ ಇಲ್ಲ. ಸೀತೆ ಏನು ಎಂಬುದನ್ನು ಅರಿಯುವ ತಾಕತ್ತು ಇಲ್ಲಿ ರಾಮನಿಗೆ ಇದೆ. ಹಾಗಾಗಿ ಪಾತಿವ್ರತ್ಯದ ಪರೀಕ್ಷೆಗೆ ಒಡ್ಡುವ ಮತ್ತು ಒಳಗುಪಡುವ ಸಂದರ್ಭವನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ತಪ್ಪಿಸಿದ್ದಾರೆ ಎಂದೇ ಹೇಳಬೇಕು.

ವನವಾಸದ ಬದುಕನ್ನು ಅಪೇಕ್ಷಿಸುವ ಸೀತೆಗೆ ಮಹಾನ್ವೇಷಣಂನಲ್ಲಿ ಆದ್ಯತೆ ಇದೆ. ಅವಳ ವೈಯಕ್ತಿಕ ತೀರ್ಮಾನಗಳಿಗೆ ರಾಮನಿಂದ ಮಾನ್ಯತೆ ದಕ್ಕಿದೆ. ಕುವೆಂಪು ರಾಮಾಯಣದಲ್ಲಿ ಸೀತೆಯೊಂದಿಗೆ ರಾಮ ಅಗ್ನಿಪ್ರವೇಶವನ್ನು ಅಪೇಕ್ಷಿಸುತ್ತಾನೆ. ದಾರುಣ ಸಂದರ್ಭ ಎದುರಾದಾಗ ಸತಿಪತಿಗಳಿಬ್ಬರೂ ಪರೀಕ್ಷೆಯನ್ನು ಎದುರಿಸಬೇಕು ಎಂಬುದು ಕುವೆಂಪುರವರ ಅಭಿಮತ. ಆದರೂ ಸಾರ್ವಜನಿಕರ ಎದುರಲ್ಲಿ ರಾಮ ಸೀತೆಯನ್ನು ಹೀನಾಯವಾಗಿ ನಡೆಸಿದ್ದು ಪ್ರಭುತ್ವಪರಂಪರೆಯ ದಬ್ಬಾಳಿಕೆಯ ನಿರೂಪಣೆಯಾಗಿದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆ ಬುದ್ಧಿಚಾತುರ್ಯ ಉಳ್ಳವಳು, ಪ್ರೌಢಳು. ಇಲ್ಲಿ ಆಕೆಗೆ ಆತ್ಮಗೌರವದ ಪ್ರಶ್ನೆ ಮುಖ್ಯವಾಗುತ್ತದೆ. ಹಾಗಾಗಿ ಕನ್ನಡದ ಇತರ ಲಿಖಿತ ರಾಮಾಯಣ ಕಾವ್ಯಗಳಿಗಿಂತ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಸೀತೆ ಬೇರೆಯಾಗಿ ನಿಲ್ಲುತ್ತಾಳೆ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಕುವೆಂಪು ಸೃಜಿಸಿದ ಸೀತೆಯ ಅಗ್ನಿಪ್ರವೇಶದ ಸಂದರ್ಭ ಕವಿಯ ಸಮಾನತೆಯ ಆಶಯಕ್ಕೆ ಸಾಕ್ಷಿಯಾಗಿದೆ. ಸೀತೆಯೊಂದಿಗೆ ಅಗ್ನಿಪ್ರವೇಶವನ್ನು ಬಯಸಿದ ರಾಮ ಆಕೆಯ ಕೈ ಹಿಡಿದು ಅಗ್ನಿಯಿಂದ ಹೊರಬರುತ್ತಾನೆ. ಸಮಾನತೆಯ ಪರಿಕಲ್ಪನೆಯ ನೆಲೆಯಲ್ಲಿ ಕವಿ ಕುವೆಂಪು ರಾಮ ಸೀತೆಯರಿಂದ ಅಗ್ನಿಪ್ರವೇಶ ಮಾಡಿಸುವ ಸಂದರ್ಭವನ್ನು ಸೃಷ್ಟಿಸಿದ್ದಾರೆ. ಗಂಡನಾದವ ಹೆಂಡತಿಯ ಶೀಲವನ್ನು ಶಂಕಿಸುವ ಅಧಿಕಾರ ಪಡೆದಲ್ಲಿ ಆ ಅಧಿಕಾರ ಹೆಂಡತಿಗೂ ಇದೆ ಎಂಬುದನ್ನು ನಿರೂಪಿಸುವ ಉದ್ದೇಶ ಇಲ್ಲಿ ಕವಿಯದ್ದು. ಮಹಾನ್ವೇಷಣಂ ಮಹಾಕಾವ್ಯದಲ್ಲಿ ರಾಮ ಸೀತೆಯ ಶೀಲವನ್ನು ಶಂಕಿಸುವ ಸಂದರ್ಭವನ್ನೇ ಕವಿ ತಪ್ಪಿಸಿದ್ದಾರೆ. ಇಲ್ಲಿ ಸೀತೆಗೆ ಆತ್ಮಗೌರವದ ಪ್ರಶ್ನೆ ಬಹುಮುಖ್ಯವಾಗುತ್ತದೆ. ರಾಮ ತನ್ನನ್ನು ಸ್ವೀಕರಿಸಲು ವಿಳಂಬವಾಯಿತು ಎಂಬ ಕಾರಣಕ್ಕಾಗಿ ಸೀತೆ ಅಗ್ನಿಪ್ರವೇಶವನ್ನು ಬಯಸುತ್ತಾಳೆ.

### ೬.೨.೨ ಶೂರ್ಪನಖಿ

ಮೌಖಿಕ ರಾಮಾಯಣ ಮತ್ತು ಲಿಖಿತ ರಾಮಾಯಣ ಪರಂಪರೆಗಳು ಶೂರ್ಪನಖಿಯನ್ನು ಒಂದೇ ಕಣ್ಣಿನಿಂದ ಕಂಡಿದೆ. ಶೂರ್ಪನಖಿಯನ್ನು ರಾಕ್ಷಸತ್ವದ ನೆಲೆಯಲ್ಲಿ ನಿರೂಪಿಸಲಾಗಿದೆ. ಮೌಖಿಕ ರಾಮಾಯಣದ ಶೂರ್ಪನಖಿಯ ತೇಜೋವಧೆಯ ಪ್ರಸಂಗದ ಯಥಾವತ್ತತೆಯನ್ನು ಲಿಖಿತ ರಾಮಾಯಣ ಪರಂಪರೆ ಉಳಿಸಿಕೊಂಡಿಲ್ಲ. ಆದರೂ ಲಿಖಿತ ರಾಮಾಯಣ ಪರಂಪರೆ ಸೀತೆಯನ್ನು ನಿರೂಪಿಸುವಲ್ಲಿ ತೋರಿದ ಉದಾರತೆ ಶೂರ್ಪನಖಿಯ ನಿರೂಪಣೆಯಲ್ಲಿ ತೋರಿಲ್ಲ. ಮೌಖಿಕ ರಾಮಾಯಣದ ಮೊಲೆಮೂಗನ್ನು ಕತ್ತರಿಸುವ ಪ್ರಸಂಗವನ್ನು ವಾಲ್ಮೀಕಿ ರಾಮಾಯಣದಲ್ಲಿ ಶೂರ್ಪನಖಿಯ ಮೂಗು ಮತ್ತು ಕಿವಿಗಳನ್ನು ಕತ್ತರಿಸಿ ಆಕೆಯ ತೇಜೋವಧೆಗೊಳಿಸಲಾಗಿದೆ. ಕ್ರೌರ್ಯದ ನೆಲೆಯಲ್ಲಿ ಶೂರ್ಪನಖಿಯನ್ನು ನಡೆಸಿಕೊಳ್ಳುವಲ್ಲಿ ಎರಡೂ ರಾಮಾಯಣ ಪರಂಪರೆಗಳು ಒಂದೇ ದಾರಿಯಲ್ಲಿ ಸಾಗಿವೆ. ಇದಕ್ಕೆ ಭಿನ್ನವಾಗಿ ಆಧುನಿಕ ರಾಮಾಯಣ ಪಠ್ಯಗಳು ಶೂರ್ಪನಖಿಯನ್ನು ಕಟ್ಟಿಕೊಟ್ಟಿವೆ.

ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ಶೂರ್ಪನಖಿಯ ಪಾತ್ರದ ಪ್ರಸ್ತಾಪ ಇಲ್ಲ. ರಾಮನ ಬದುಕನ್ನು ನಿರೂಪಿಸುವ ಉತ್ಸಾಹದಲ್ಲಿ ಕವಿ ಶೂರ್ಪನಖಿಯನ್ನು ಸಂಪೂರ್ಣ ಅಲಕ್ಷಿಸಿದ್ದಾರೆಂದೇ ಹೇಳಬೇಕು. 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಮಹಿಳಾ ಪಾತ್ರಗಳಾದ ಸೀತೆ, ಮಂಡೋದರಿ, ತಾರೆ, ಅಹಲ್ಯೆಯ ಪಾತ್ರಗಳು ರಾಮನಿಗೆ ಸವಾಲು ಎಸಗಿವೆ. ಇತರ ಮಹಿಳಾ ಪಾತ್ರಗಳ ಸಂವೇದನಾಶೀಲತೆಯನ್ನು ಗ್ರಹಿಸುವಲ್ಲಿ ಆಸಕ್ತಿ ತಳೆದ ಕವಿ ಶೂರ್ಪನಖಿಯ ಅಂತರಂಗ ಸಂವೇದನೆಯನ್ನು ಗ್ರಹಿಸಲು ಉತ್ಸುಕರಾಗಿಲ್ಲ

ಎಂದೇ ಹೇಳಬೇಕು. ಈ ವಿಚಾರಕ್ಕೆ ಸಂಬಂಧಿಸಿದಂತೆ ಭಿನ್ನ ಭಿನ್ನ ನೆಲೆಗಳಲ್ಲಿ ಚರ್ಚಿಸಲು ಸಾಧ್ಯ.

೧. ಕವಿಗೆ ಶೂರ್ಪನಖಿಯನ್ನು ನಿರೂಪಿಸುವ ಉದ್ದೇಶವೇ ಇಲ್ಲ.
೨. ರಾಮಾಯಣಕ್ಕೆ ಶೂರ್ಪನಖಿಯೇ ಕಾರಣ ಎಂಬ ಪೂರ್ವಕಲ್ಪಿತ ಚಿಂತನೆಯನ್ನು ಕವಿ ಒಡೆದಿದ್ದಾರೆ.
೩. ಶೂರ್ಪನಖಿಯ ಪಾತ್ರದ ಕುರಿತು ಕವಿಗೆ ಅಲಕ್ಷ್ಯ ಇದೆ.
೪. ಶೂರ್ಪನಖಿಯನ್ನು ಮಾನವೀಯತೆಯ ನೆಲೆಯಲ್ಲಿ ನಿರೂಪಿಸುವುದು ಕವಿಗೆ ಕಷ್ಟಸಾಧ್ಯ.
೫. ಶೂರ್ಪನಖಿ ಇಲ್ಲದೆ ಹೋದರೂ ರಾಮಾಯಣ ನಡೆಯುತ್ತದೆ ಎಂಬುದನ್ನು ಸಾಬೀತುಪಡಿಸುವ ಉದ್ದೇಶ.

ಕಾರಣ ಏನೇ ಆದರೂ ಶೂರ್ಪನಖಿಯ ಅಂತರಂಗದ ಸಂವೇದನೆಯನ್ನು ಅರಿಯುವಲ್ಲಿ ಕವಿ ಮನಸ್ಸು ವಿಫಲವಾಗಿದೆ ಎಂದೇ ಹೇಳಬೇಕು.

ಕುವೆಂಪು ರಾಮಾಯಣದಲ್ಲಿ ಶೂರ್ಪನಖಿಯ ಕುರಿತು ಕವಿ ಉದಾರತೆ ತಳೆದಿದ್ದಾರೆ. ರಾಮಲಕ್ಷ್ಮಣ ಸೀತೆಯರು ಶೂರ್ಪನಖಿಯನ್ನು ಹೀನಾಯವಾಗಿ ನೋಡುವ ಸಂದರ್ಭವನ್ನು ಕವಿ ತಪ್ಪಿಸಿದ್ದಾರೆ. ಶೂರ್ಪನಖಿಯ ಮೊಲೆಮೂಗನ್ನು ಕತ್ತರಿಸಿ ವಿಕಾರವಾಗಿ ನಿರೂಪಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ. ಸ್ತ್ರೀಯರನ್ನು ಗೌರವದ ನೆಲೆಯಲ್ಲಿ ನಡೆಸಿಕೊಳ್ಳಬೇಕು ಎಂಬ ಉದ್ದೇಶ ಕವಿಗೆ ಇದೆ. ಹಾಗಾಗಿ ಲಿಖಿತ ರಾಮಾಯಣ ಪರಂಪರೆಯ ಶೂರ್ಪನಖಿಗೆ ಸೀತೆಯ ಸೌಂದರ್ಯದ ಕುರಿತು ಮತ್ಸರವಿಲ್ಲ. ಆದ್ದರಿಂದ ಸೀತೆ ಸ್ಫುರದ್ರೂಪಿ ಎಂಬುದನ್ನು ಶೂರ್ಪನಖಿಯ ಮುಖಾಂತರವೇ ಕವಿ ಹೇಳಿಸಿದ್ದಾರೆ.

'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ಶೂರ್ಪನಖಿಯನ್ನು ಪ್ರೌಢಮಟ್ಟದಲ್ಲಿಟ್ಟು ನೋಡಲಾಗಿದೆ. ಕವಿ ಮಾಸ್ತಿಯವರಿಗೆ ಶೂರ್ಪನಖಿ ಎಂಬ ಹೆಸರನ್ನು ಉಲ್ಲೇಖಿಸುವಲ್ಲಿ ಆಸಕ್ತಿ ಇಲ್ಲ ಎಂದೇ ಹೇಳಬೇಕು. ಹಾಗಾಗಿ 'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ಓರ್ವ ತರುಣಿ ಕಾಣಿಸಿಕೊಂಡಿದ್ದಾಳೆ ವಿನಾ ಶೂರ್ಪನಖಿಯಲ್ಲ. ಇಲ್ಲಿ ತನ್ನನ್ನು ಅವಮಾನಗೊಳಿಸುವರೆಂಬ ಸುದ್ದಿ ತಿಳಿದೊಡನೆಯೆ ಆ ತರುಣಿ ಪಲಾಯನ ಮಾಡುವ ಸಂದರ್ಭವಿದೆ. ಶೂರ್ಪನಖಿಯನ್ನು ಅಕರಾಳ ವಿಕರಾಳತೆಯ ನೆಲೆಯಲ್ಲಿ ಗುರುತಿಸುವ ಉದ್ದೇಶ ಇಲ್ಲಿ ಕವಿಗೆ ಇಲ್ಲ. ಹಾಗಾಗಿ ರಾಮಾಯಣ ಪರಂಪರೆಯ ಪೂರ್ವಗ್ರಹವನ್ನು ಮಾಸ್ತಿಯವರು ಒಡೆದಿದ್ದಾರೆ ಎನ್ನಬೇಕು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಶೂರ್ಪನಖಿಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕವಿ ಹೊಸಪರಿಕಲ್ಪನೆ ತಳೆದಿದ್ದಾರೆ. ಭಿನ್ನ ಭಿನ್ನ ನೆಲೆಗಳಲ್ಲಿ ಅವಳಿಗೆ ಸ್ಥಾನಮಾನ ಕಲ್ಪಿಸಲಾಗಿದೆ. ಆಕೆ ಇಲ್ಲಿ ಜನಸ್ಥಾನದ ಚಕ್ರವರ್ತಿನಿ. ಯಾವ ಲಿಖಿತ ರಾಮಾಯಣದಲ್ಲೂ ಶೂರ್ಪನಖಿಯ ಪಾತ್ರ ಈ ಮಾದರಿಯಲ್ಲಿ ಮೂಡಿಲ್ಲ. ಇತರ ಲಿಖಿತ ರಾಮಾಯಣ ಪಠ್ಯಗಳ ಶೂರ್ಪನಖಿಯ ಪಾತ್ರಕ್ಕೂ ಮಹಾನ್ವೇಷಣಂ ಮಹಾಕಾವ್ಯದ ಶೂರ್ಪನಖಿಯ ಪಾತ್ರಕ್ಕೂ ಸಾಮ್ಯ ಇದೆ. ಶೂರ್ಪನಖಿಯ ತೇಜೋವಧೆಗೆ ಸಂಬಂಧಿಸಿದಂತೆ ಕಾಣುವ ಕ್ರೌರ್ಯವನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಒಡೆದಿದೆ. ಇಲ್ಲಿ ಶೂರ್ಪನಖಿಯನ್ನು ಸಹಜ ಸ್ತ್ರೀಯೊಬ್ಬಳ ನೆಲೆಯಿಂದ ಅನಾವರಣ ಮಾಡಲಾಗಿದೆ. ಪಾಶವೀ ಗುಣಗಳನ್ನು ಆರೋಪಿಸುತ್ತಾ ರಕ್ಕಸಿಯಾಗಿ ನಿರೂಪಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇಲ್ಲ. ರಾಮನ ವ್ರತನಿಷ್ಠೆಗೆ, ಪೌರುಷಕ್ಕೆ ಒಂದು ಸವಾಲಾಗಿ ಶೂರ್ಪನಖಿ ಕಾಣಿಸಿಕೊಳ್ಳುತ್ತಾಳೆ. ಹೆಣ್ಣು ಗಂಡಿನ ಸಹಜ ಪ್ರೀತಿಯ ರೂಪಕವಾಗಿಯೇ ಇಲ್ಲಿ ಶೂರ್ಪನಖಿಯ ಪ್ರಸಂಗ ಬಂದಿದೆ.

### ೬.೨.೩ ಮಂಡೋದರಿ

ಲಿಖಿತ ರಾಮಾಯಣ ಪರಂಪರೆ ಮಂಡೋದರಿಯ ಪಾತ್ರವನ್ನು ಪ್ರೌಢಬುದ್ಧಿಮತ್ತೆಯ ನೆಲೆಯಲ್ಲಿ ನಿರೂಪಿಸಿದೆ. ರಾವಣನ ತಪ್ಪನ್ನು ಗ್ರಹಿಸುವ, ತಿದ್ದಿ ಸರಿದಾರಿಗೆ ತರುವ ಶಕ್ತಿಯಾಗಿ ಮಂಡೋದರಿಯ ಪಾತ್ರ ಒಡಮೂಡಿದೆ. ರಾವಣನ ಪಾಶವೀ ಪ್ರವೃತ್ತಿಗಳನ್ನು ಅನಾವರಣ ಮಾಡುವ ಲಿಖಿತ ರಾಮಾಯಣ ಪರಂಪರೆ ಮಂಡೋದರಿಯ ಪಾತ್ರವನ್ನು ಮಾನವತ್ವದ ನೆಲೆಯಲ್ಲಿ ನಿರೂಪಿಸಿದೆ. ಸ್ತ್ರೀಸಮುದಾಯವನ್ನು ಮನೋದೌರ್ಬಲ್ಯದ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಲಿಖಿತ ರಾಮಾಯಣ ಪರಂಪರೆಗೆ ಇಲ್ಲ. ಸಮಯ ಸಂದರ್ಭ ಅನುಸಾರಿಯಾಗಿ ಬದುಕಿನ ವಾಸ್ತವತೆಯನ್ನು ಅರಿತು ಪ್ರತಿಕ್ರಿಯಿಸುವ ಮಾದರಿ ಪಾತ್ರವಾಗಿ ಮಂಡೋದರಿ ಕಾಣಿಸಿದ್ದಾಳೆ. ಲಿಖಿತ ರೂಪಿ ರಾಮಾಯಣಗಳು ಮಂಡೋದರಿಯನ್ನು ಪ್ರತಿಭಟನೆಯ ಮಾದರಿಯಲ್ಲಿ ನಿರೂಪಿಸಿವೆ.

ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಮಂಡೋದರಿ ರಾಮನಿಗೆ ಸವಾಲು ಎಸಗುವ ಮೂಲಕ ಅವನ ವ್ಯಕ್ತಿತ್ವವನ್ನು ಒರೆಗೆ ಹಚ್ಚುತ್ತಾಳೆ. ಬಾಹ್ಯನೋಟಕ್ಕೆ ಆಕೆಯ ಮಾತುಗಳಲ್ಲಿ ಮೂದಲಿಕೆ ಅಭಿವ್ಯಕ್ತವಾದರೂ ವಾಸ್ತವದಲ್ಲಿ ಸೂಕ್ಷ್ಮಪ್ರಜ್ಞೆ ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ. ಆಕೆಯ ನೆಲೆಯಿಂದ ಅವಳ ಬದುಕನ್ನು ಅಭ್ಯಾಸಮಾಡಿದರೆ ಅವಳ ಪ್ರತಿಕ್ರಿಯೆ ಸರಿ ಎಂಬಂತೆ ಕಾಣುತ್ತದೆ. ಅಂಜಿಕೆ, ಆಡಂಬರ, ಗರ್ವದಿಂದ ದೂರ ಉಳಿದು ಅಂತರಂಗದ ಸಂತಾಪವನ್ನು ರಾಮನ ಎದುರು ಹೊರಹಾಕಬಲ್ಲ ವಾಸ್ತವ

ಪ್ರಜ್ಞೆಯುಳ್ಳ ಪಾತ್ರವಾಗಿ ಮಂಡೋದರಿ ಕಾಣಿಸಿದ್ದಾಳೆ. ರಾಮನ ಪ್ರಭುತ್ವಸಂಸ್ಕೃತಿಯ ಪಕ್ಷಪಾತ ಧೋರಣೆ ಇಲ್ಲಿ ಅಭಿವ್ಯಕ್ತಗೊಂಡಿದೆ. ಅನುಕೂಲಕ್ಕೆ ತಕ್ಕಂತೆ ನಿಯಮ ರೂಪಿಸುವ ಮತ್ತು ಬದಲಾಯಿಸುವ ಹಕ್ಕು ಪಡೆದ ಯಜಮಾನಸಂಸ್ಕೃತಿಯ ವಿಡಂಬನೆ ಇಲ್ಲಿದೆ. ರಾಜಪರಂಪರೆಯ ತೀರ್ಪುಗಳೆಲ್ಲವೂ ಪ್ರಭುತ್ವಪರಂಪರೆಯ ಪರವಾಗಿದೆ ಎಂಬುದು ಇಲ್ಲಿ ಮಂಡೋದರಿಯ ಪಾತ್ರಮುಖೇನ ಸ್ಪಷ್ಟವಾಗುತ್ತದೆ. ಪ್ರಜೆಗಳ ಕುರಿತು, ಜನಸಾಮಾನ್ಯರ ಕುರಿತು ಸಮಾನತೆಯ ಆಶಯವನ್ನು ವ್ಯಕ್ತಪಡಿಸುವ ಅಧಿಕಾರಶಾಹಿವರ್ಗ ವಾಸ್ತವದಲ್ಲಿ ಬೇರೆಯೇ ಆಗಿರುತ್ತದೆ. ಸ್ತ್ರೀಸಂವೇದನೆಯನ್ನು ಗ್ರಹಿಸಲಾಗದ ಮಟ್ಟಕ್ಕೆ ಪ್ರಭುತ್ವಪರಂಪರೆ ತಲುಪಿದೆ ಎಂಬುದನ್ನು ನಿರೂಪಿಸುವ ಉದ್ದೇಶ ಇಲ್ಲಿ ಕವಿಗೆ ಇದೆ.

ಮೈಯಿಂದ ಪಾಪ ಎಸಗಿದ ದೇವೇಂದ್ರನನ್ನು ಕ್ಷಮಿಸಿದ ನೀನು ಮನಸ್ಸಿನಿಂದ ಅಪರಾಧ ಎಸಗಿದ ರಾವಣನನ್ನು ಶಿಕ್ಷಿಸಿದ್ದೇಕೆ? ಎಂದು ಮಂಡೋದರಿ ರಾಮನಲ್ಲಿ ಪ್ರಶ್ನಿಸುತ್ತಾಳೆ. ದೈಹಿಕ ಪಾತಿವ್ರತ್ಯ ಮಾನಸಿಕ ಪಾತಿವ್ರತ್ಯಕ್ಕಿಂತ ಬಹುಮುಖ್ಯ ಎಂಬುದು ಇಲ್ಲಿ ಕವಿಯ ಅಭಿಮತ. ರಾಮನ ಗಮನಕ್ಕೆ ಬಾರದ ತಪ್ಪನ್ನು ಮಂಡೋದರಿಯ ನೆಲೆಯಿಂದ ಗುರುತಿಸುವ ಕೆಲಸ ಇಲ್ಲಿ ನಡೆದಿದೆ. ಇಲ್ಲಿ ಮೈಯಿಂದ ತಪ್ಪೆಸಗಿದವ ಇಂದ್ರ, ಮನಸ್ಸಿನಿಂದ ತಪ್ಪೆಸಗಿದವ ರಾವಣ ಎಂಬುದು ಸ್ಪಷ್ಟ. ಇಲ್ಲಿ ರಾಮನ ನ್ಯಾಯ ತತ್ವವನ್ನು ವಿಮರ್ಶಿಸಲಾಗಿದೆ. ಈ ಬಗೆಯ ಪ್ರಶ್ನೆ, ಸವಾಲುಗಳು ಕೇವಲ ರಾಮನೋರ್ವನ ಕುರಿತ ವಿಶ್ಲೇಷಣೆ ಅಲ್ಲ. ಇಲ್ಲಿ ಮಂಡೋದರಿ ಎತ್ತುವ ಪ್ರಶ್ನೆಯಷ್ಟೇ ಮುಖ್ಯ. ಪ್ರಭುಸಂಸ್ಕೃತಿ ಹಾಗೂ ಪುರುಷಸಂಸ್ಕೃತಿಯ ಪ್ರತೀಕವಾಗಿರುವ ರಾಮನನ್ನು ಆಕೆ ಪ್ರಶ್ನಿಸುತ್ತಾಳೆ. ಪ್ರಭುತ್ವಪರಂಪರೆಯ ತೀರ್ಪನ್ನು ಯಾರೂ ಪ್ರಶ್ನಿಸುವಂತಿಲ್ಲ ಎಂಬ ಸಾಂಪ್ರದಾಯಿಕ ನಿಲುವನ್ನು ಇಲ್ಲಿ ಒಡೆಯಲಾಗಿದೆ. ಈ ಬಗೆಯ ಒಡೆಯುವಿಕೆ ಮಂಡೋದರಿಯ ನೆಲೆಯಿಂದ ಸಾಗಿದೆ. ವ್ಯವಸ್ಥೆಯ ದೋಷವನ್ನು ಪ್ರಶ್ನಿಸುವ ಅವಕಾಶವನ್ನು ಮಹಿಳಾಸಮುದಾಯಕ್ಕೆ ನೀಡಲಾಗಿದೆ. ಇಲ್ಲಿ ಕವಿಯ ಸ್ತ್ರೀಸಂವೇದನಾಶೀಲತೆ ವ್ಯಕ್ತವಾಗುತ್ತದೆ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಮಂಡೋದರಿ ರಾವಣನ ಕ್ರೌರ್ಯವನ್ನು ಕಳೆಯುವಲ್ಲಿ ನಾನಾ ವಿಧದ ಪ್ರಯತ್ನ ಮಾಡುತ್ತಾಳೆ. ಹೆಣ್ಣೊಬ್ಬಳ ಅಂತರಂಗದ ವೇದನೆಯನ್ನು ಒಬ್ಬ ಹೆಣ್ಣಾಗಿ ಅರಿಯುವ ಶಕ್ತಿ ಉಳ್ಳವಳು ಮಂಡೋದರಿ. ಹಾಗಾಗಿ ಅಶೋಕ ವನದ ಸೀತೆಯ ಅಳಲನ್ನು ಅರಿತ ಮಂಡೋದರಿ ಅವಳನ್ನು ತಂಗಿ ಎಂದೇ ಬಗೆಯುತ್ತಾಳೆ. ಪಾಪಪುಣ್ಯ ಪ್ರಜ್ಞೆಯುಳ್ಳ, ಕ್ರೌರ್ಯದಿಂದ ದೂರ ಉಳಿಯುವ ಮಾದರಿ ಪಾತ್ರವಾಗಿ ಇಲ್ಲಿ ಮಂಡೋದರಿ ಕಾಣಿಸಿದ್ದಾಳೆ. ತನ್ನ ಪತಿಯ ದುರ್ಗುಣಗಳಿಗೆ ಪರಿತಪಿಸುತ್ತಾ ಬದುಕು ನಡೆಸಿದವಳು. ಸೀತೆಯಂತಹ ನೂರೆಂಟು ಮಹಿಳೆಯರ ದುಃಖಕ್ಕೆ ಕಾರಣಳಾದವಳು

ತಾನೆಂಬ ಪಶ್ಚಾತ್ತಾಪ ಉಳ್ಳವಳು. ಪಾತಿವ್ರತ್ಯ ಧರ್ಮವನ್ನು ಗಟ್ಟಿಗೊಳಿಸುವ ನೆಲೆಯಲ್ಲಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಮಂಡೋದರಿಯ ಪಾತ್ರ ಒಡಮೂಡಿದೆ. ನಿನ್ನ ಪಾತಿವ್ರತ್ಯ ಧರ್ಮದಿಂದ ತನ್ನ ಪತಿಯ ಪಾಪ ದಹಿಸಲಿ ಎಂಬ ಆಶಯವನ್ನು ಇಲ್ಲಿ ಮಂಡೋದರಿ ಸೀತೆಯ ಬಳಿ ವ್ಯಕ್ತಪಡಿಸುತ್ತಾಳೆ. ಭಕ್ತಿಭಾವದ ನೆಲೆಯಲ್ಲಿ ದೃಢಚಿತ್ತೆಯಾಗಿ ಮಂಡೋದರಿಯ ಪಾತ್ರ ನಿರೂಪಿತವಾಗಿದೆ.

ಕುವೆಂಪು ರಾಮಾಯಣದ ಮಂಡೋದರಿಯ ಪಾತ್ರಕ್ಕೂ ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಯ ಪಾತ್ರಕ್ಕೂ ಸಾಮ್ಯ ಇದೆ. ರಾವಣನನ್ನು ತಿದ್ದಿ ಸರಿದಾರಿಗೆ ತರುವಲ್ಲಿ ಈ ಎರಡೂ ರಾಮಾಯಣಗಳ ಮಂಡೋದರಿಯ ಪಾತ್ರ ಒಂದೇ ತೆರನಾಗಿವೆ. ದೈಹಿಕ ಪಾವಿತ್ರ್ಯಯೊಂದಿಗೆ ಮಾನಸಿಕ ಪಾತಿವ್ರತ್ಯದ ಅಗತ್ಯತೆಯನ್ನು ಮನಗಂಡು ನೈತಿಕತೆಯ ನೆಲೆಯಲ್ಲಿ ರಾವಣನಿಗೆ ಮಂಡೋದರಿ ಉಪದೇಶ ನೀಡುತ್ತಾಳೆ. ಮಂಡೋದರಿಗೆ ಸೀತೆಯ ಪಾತಿವ್ರತ್ಯದ ಕುರಿತು ಆಕೆಗೆ ಅಪಾರ ಗೌರವವಿದೆ. ಸೀತೆಯ ಪಾತಿವ್ರತ್ಯ ಶಕ್ತಿಯೇ ರಾಮನನ್ನು ರಕ್ಷಿಸಿತು ಎಂಬ ತೀರ್ಮಾನಕ್ಕೆ ಮಂಡೋದರಿ ಬಂದಿದ್ದಾಳೆ. ಈ ಹಿನ್ನಲೆಯಲ್ಲಿ ಈ ಎರಡೂ ರಾಮಾಯಣಗಳಲ್ಲಿ ಮಂಡೋದರಿಯ ಪಾತ್ರ ನಿರೂಪಣೆಯ ಹಿಂದೆ ಕವಿಗಳಿಗೆ ಇರುವ ಉದ್ದೇಶ ಒಂದೇ ಎಂದು ಹೇಳಬೇಕು.

'ಶ್ರೀರಾಮ ಪಟ್ಟಾಭಿಷೇಕ' ಮಹಾಕಾವ್ಯದ ಕವಿ ಮಂಡೋದರಿಯ ಪಾತ್ರ ನಿರೂಪಣೆಯಲ್ಲಿ ಬಹುತೇಕ ಆಸಕ್ತಿ ವಹಿಸಿದಂತೆ ಕಾಣುವುದಿಲ್ಲ. ಇಲ್ಲಿ ಕವಿಗೆ ರಾವಣನ ಕ್ರೌರ್ಯದ ನೆಲೆಗಳನ್ನು ನಿರೂಪಿಸುವ ಉದ್ದೇಶ ಮುಖ್ಯವಾಯಿತೇ ವಿನಾ ಸ್ತ್ರೀಸಂವೇದನಾಶೀಲ ನೆಲೆಯಲ್ಲಿ ಮಂಡೋದರಿಯ ಅಳಲನ್ನು ಪರಿಗ್ರಹಿಸುವ ಉದ್ದೇಶ ಮುಖ್ಯವಾಗಲಿಲ್ಲ. ಆಧುನಿಕ ರಾಮಾಯಣ ಪರಂಪರೆಯ ಮಂಡೋದರಿಯಂತೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಡೋದರಿ ಅತ್ಯಂತ ಪ್ರಬುದ್ಧೆ. ಮಂಡೋದರಿ ಬರಿಯ ಬುದ್ಧಿಜ್ಞಾನ ಉಳ್ಳ ಅಪೂರ್ವ ವ್ಯಕ್ತಿತ್ವವಾಗಿ ನಿರೂಪಿತಳಾಗಿಲ್ಲ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಡೋದರಿ ತಾಯಿಯ ಸ್ಥಾನದಲ್ಲಿ ನಿಂತು ಸೀತೆಯನ್ನು ಕಾಪಿಡುವವಳಾಗಿದ್ದಾಳೆ. ಅಗ್ನಿಯನ್ನು ಹೊಕ್ಕಿದ ಸೀತೆಯನ್ನು ಮೇಲಕ್ಕೆ ಎತ್ತಿ ಮಾತೃತ್ವದ ನೆಲೆಯಲ್ಲಿ ಸಾಂತ್ವನ ಹೇಳುವ ಮಾತೃಹೃದಯಿಯಾಗಿ ಕಾಣಿಸಿದ್ದಾಳೆ. ಮಂಡೋದರಿ ಶತಮಾನಗಳ ಹೆಣ್ಣಿನ ರೋದನವನ್ನು ಅರ್ಥೈಸಿಕೊಂಡ, ಸ್ತ್ರೀಬದುಕಿನ ಸುಧಾರಣಾ ಅಪೇಕ್ಷೆಯನ್ನು ಹೊತ್ತ ಮಾದರಿ ಪಾತ್ರವಾಗಿದ್ದಾಳೆ. ರಾಣಿ, ದಾಸಿ ಎಂಬ ಭೇದವಿಲ್ಲದೆ ಶತಮಾನಗಳಿಂದ ಸ್ತ್ರೀಸಮುದಾಯ ಶೋಷಣೆಗೆ ಒಳಗಾಗುತ್ತಿದೆ. ಹಾಗಾಗಿ ನಮ್ಮನ್ನು ನಾವು ಪರೀಕ್ಷೆಗೆ ಒಡ್ಡಿಕೊಳ್ಳುವ ಅಗತ್ಯವಿಲ್ಲ ಎಂಬುದು ಮಂಡೋದರಿಯ ಆಶಯ.

ಆದ್ದರಿಂದ ಸೀತೆಯ ಅಗ್ನಿಪ್ರವೇಶದ ಸಂದರ್ಭವನ್ನು ತಪ್ಪಿಸುವ ಉದ್ದೇಶ ಮಂಡೋದರಿಯಲ್ಲಿ ಇದೆ. ಹಾಗಾಗಿ ಕನ್ನಡದ ಇತರ ಲಿಖಿತ ರಾಮಾಯಣಗಳ ನಿರೂಪಣೆಗಿಂತ ಅನ್ಯನವಾಗಿ ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಯ ಪಾತ್ರ ನಿರೂಪಿತವಾಗಿದೆ.

ಮಾನವ – ರಾಕ್ಷಸ ಕುಲವೆಂಬ ಸಾಂಪ್ರದಾಯಿಕ ವರ್ಗೀಕರಣವನ್ನು ದಾಟಿ ಸೀತೆ ಮತ್ತು ಮಂಡೋದರಿಯರಲ್ಲಿ ಸಾಮ್ಯವನ್ನು ಕಾಣಬಹುದು. ರಾಮನ ಮಡದಿಯಾದ ಸೀತೆ ಮತ್ತು ರಾವಣನ ಮಡದಿಯಾದ ಮಂಡೋದರಿ ಬಹು ವಿಚಾರಗಳಲ್ಲಿ ಸಮಾನರು. ಸಮಾನ ಮನಸ್ಕರು, ಸಮಾನ ಧ್ಯೇಯೋದ್ದೇಶ ಉಳ್ಳವರು. ಬುದ್ಧಿಶಕ್ತಿ, ತ್ಯಾಗಶೀಲತೆ, ಸರಿ–ತಪ್ಪುಗಳ ತಿಳುವಳಿಕೆ, ಮಾನವೀಯ ಮೌಲ್ಯಗಳ ಪ್ರತಿಪಾದನೆ ಮತ್ತು ಅಹಿಂಸಾ ತತ್ತ್ವ ಪ್ರತಿಪಾದನೆಯಲ್ಲಿ ಸೀತೆ ಮತ್ತು ಮಂಡೋದರಿಯ ನಡುವಣ ಸಾಮರಸ್ಯವನ್ನು ಕಾಣಬಹುದು. ಕೇವಲ ಗುಣದಲ್ಲಿ ಮಾತ್ರ ಸೀತೆ, ಮಂಡೋದರಿಯರು ಸರ್ವ ಸಮಾನರಲ್ಲ. ರೂಪದಲ್ಲೂ ಸಾಮರಸ್ಯವನ್ನು ಕಾಣಬಹುದು. ಮೊದಲ ಬಾರಿ ಆಂಜನೇಯ ರಾವಣನ ಅಂತಃಪುರದ ಮಂಡೋದರಿಯನ್ನು ಕಂಡಾಗ ಆಕೆಯನ್ನು ಸೀತೆ ಎಂದೇ ಬಗೆದನು. ಜಗದ ಸೌಂದರ್ಯವೇ ಮೂರ್ತಿವೆತ್ತಂತೆ ಮಹಾನ್ವೇಷಣಂನ ಕವಿ ಮಂಡೋದರಿಯ ರೂಪು ಲಾವಣ್ಯವನ್ನು ವರ್ಣಿಸಿದ್ದಾರೆ. ಸೀತೆಯ ಸಾಧ್ವಿಗುಣ, ದಿಟ್ಟತೆ, ಭಕ್ತಿಪ್ರಧಾನತೆ ಮತ್ತು ಖಚಿತ ನಿಲುವುಗಳು ಮಹಾನ್ವೇಷಣಂ ಮಹಾಕಾವ್ಯದ ಮಂಡೋದರಿಯಲ್ಲೂ ಅಭಿವ್ಯಕ್ತಗೊಂಡಿದೆ.

**೬.೨.೪ ಮಂಥರೆ**

ಲಿಖಿತ ರಾಮಾಯಣ ಪರಂಪರೆ ಮಂಥರೆಯ ಪಾತ್ರಸೃಷ್ಟಿಯ ಹಿಂದೆ ವಿವಿಧ ಭಾವ ವ್ಯಕ್ತವಾಗಿದೆ. ಕೆಲವು ರಾಮಾಯಣಗಳು ಕ್ರೌರ್ಯದ ನೆಲೆಯಲ್ಲಿ ಮಂಥರೆಯ ಪಾತ್ರವನ್ನು ನಿರೂಪಿಸಿದರೆ ಇನ್ನು ಕೆಲವು ರಾಮಾಯಣಗಳು ಸ್ವಲ್ಪ ಉದಾರತೆ ತಳೆದಿವೆ. ಮೌಖಿಕ ರಾಮಾಯಣ ಪರಂಪರೆಗೆ ಮಂಥರೆಯ ಪಾತ್ರ ನಿರೂಪಣೆಯ ಉದ್ದೇಶ ಮುಖ್ಯವಾಗಿಲ್ಲ. ಹಾಗಾಗಿ ಮಂಥರೆಯ ಪಾತ್ರವನ್ನು ಕೈಬಿಟ್ಟಿದೆ. ಲಿಖಿತ ರಾಮಾಯಣ ಪರಂಪರೆಗೆ ಮಂಥರೆಯ ಪಾತ್ರ ನಿರೂಪಿಸುವ ಉದ್ದೇಶ ಇದೆ. ರಾಜಪರಂಪರೆಯ ತಪ್ಪುಗಳನ್ನು ಅಭಿವ್ಯಕ್ತಿಸುವಲ್ಲಿ ಲಿಖಿತ ರಾಮಾಯಣ ಪರಂಪರೆ ಉತ್ಸುಕವಾಗಿಲ್ಲ. ಪ್ರಭುತ್ವಪರಂಪರೆಯ ದೋಷವನ್ನು ಕಳೆಯುವುದಕ್ಕಾಗಿ ಮಂಥರೆಯ ಪಾತ್ರವನ್ನು ನಿರೂಪಿಸಿದೆ ಎಂದೇ ಹೇಳಬೇಕು. ಕೈಕೆಯ ಸವತಿಮಾತ್ಸರ್ಯವನ್ನು ನಿರೂಪಿಸುವ ಉದ್ದೇಶ ಶಿಷ್ಟ ರಾಮಾಯಣ ಪರಂಪರೆಗೆ ಇಲ್ಲ. ಹಾಗಾಗಿ ಈ ವಿಚಾರದಲ್ಲಿ ಮಂಥರೆಯನ್ನು ಬಳಸಿ ಕೈಕೆಯ ತಪ್ಪುಗಳನ್ನು ಅಡಗಿಸಲಾಗಿದೆ. ಕನ್ನಡದ ಕೆಲವು ರಾಮಾಯಣಗಳು ಮಂಥರೆಯನ್ನು

ಆಪಾದಿತೆಯನ್ನಾಗಿಸಿಲ್ಲ. ಮಂಥರೆಯ ಬದುಕಿನ ಸ್ಥಿತಿಯನ್ನು ಅರಿತು ಉದಾರತೆಯ ನೆಲೆಯಲ್ಲಿ ಪಾತ್ರ ನಿರೂಪಿಸಲಾಗಿದೆ.

'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ಡಿ. ವಿ. ಜಿ.ಯವರು ಮಂಥರೆಯ ಪಾತ್ರ ನಿರೂಪಿಸಿಲ್ಲ. ರಾಮಾಯಣದ ಇತರೆ ಮಹಿಳಾ ಪಾತ್ರಗಳನ್ನು ಪ್ರಧಾನವಾಗಿ ಕಂಡ ಕವಿಗೆ ಮಂಥರೆ ಮುಖ್ಯವಾಗಿ ಕಂಡಿಲ್ಲ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕವಿ ಮಂಥರೆಯ ಪಾತ್ರನಿರೂಪಣೆಯಲ್ಲಿ ಉದಾರಭಾವ ತಳೆದಿದ್ದಾರೆ. ರಾಮನ ವನವಾಸದ ಸಂದರ್ಭವನ್ನು ನಿರೂಪಿಸುವ ಅನಿವಾರ್ಯದಲ್ಲಿಯೂ ಮಂಥರೆಯನ್ನು ಆರೋಪಿಯನ್ನಾಗಿಸಿಲ್ಲ. ಇಲ್ಲಿ ಕವಿಗೆ ಮಂಥರೆಯ ಒಳತೋಟಿಯ ಅರಿವಿದೆ. ಅವಳ ಮನಸ್ಥಿತಿಗೆ ಕಾರಣವಾದ ಸಾಮಾಜಿಕ ಹಿನ್ನಲೆಯನ್ನು ಕವಿ ಪರಿಗ್ರಹಿಸಿದ್ದಾರೆ. ಕೈಕೆಯ ಸವತಿಮಾತ್ಸರ್ಯ ಭಾವವನ್ನು ನಿರೂಪಿಸುವಲ್ಲಿ ಕವಿ ಮುಜಗರ ತಳೆದಿಲ್ಲ. ಪ್ರಭುತ್ವಸಂಸ್ಕೃತಿಯ ದೋಷಗಳನ್ನು ಮರೆಮಾಡುವ ಉದ್ದೇಶ ಕವಿಗೆ ಇಲ್ಲ. ಹಾಗಾಗಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಕವಿ ಮಂಥರೆಯ ಅಂತರಂಗದ ಸಂವೇದನೆಯನ್ನು ಅರಿಯುವಲ್ಲಿ ಸಫಲರಾಗಿದ್ದಾರೆ ಎಂದೇ ಹೇಳಬೇಕು.

ಮಾನವತೆ ಮತ್ತು ನಿಸರ್ಗದ ಮೇಲೆ ಅತೀವವಾದ ಒಲವು ಇರಿಸಿಕೊಂಡ ಕವಿ ಕುವೆಂಪುರವರಿಗೆ ಸ್ತ್ರೀಸಮುದಾಯದ ಮೇಲೆ ವಿಶೇಷವಾದ ಕಾಳಜಿ ಇದೆ. ಹಾಗಾಗಿ ಶಿಷ್ಟ ರಾಮಾಯಣದ ನಿರೂಪಣೆಗಿಂತ ವಿಭಿನ್ನವಾಗಿ ಗೌರವನ ನೆಲೆಯಲ್ಲಿ ಮಹಿಳಾಸಮುದಾಯದ ಬದುಕನ್ನು ಕಟ್ಟಿಕೊಟ್ಟಿದ್ದಾರೆ. ಹಾಗಾಗಿ ಕೈಕೆ ಮತ್ತು ಮಂಥರೆಯ ಪಾತ್ರವನ್ನು ಓದುವಾಗ ಆಕ್ರೋಶವಾಗಲಿ, ಅಸಹನೆಯಾಗಲಿ ವ್ಯಕ್ತವಾಗುವುದಿಲ್ಲ. ಬದಲಿಗೆ ಅನುಕಂಪ ಒಡಮೂಡುತ್ತದೆ. ಸ್ತ್ರೀ–ಪುರುಷರ ಪರಸ್ಪರ ಸಹಕಾರ ಭಾವ ಆದರ್ಶ ದಾಂಪತ್ಯಕ್ಕೆ ಭದ್ರ ಬುನಾದಿ ಎಂಬ ಆಶಯ ಕುವೆಂಪು ಮಹಾಕಾವ್ಯಗಳಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ರಾಮಾಯಣದ ಸ್ತ್ರೀ–ಪುರುಷ ಪಾತ್ರಗಳು ಇಲ್ಲಿ ಪ್ರಕೃತಿ–ಪುರುಷ ಸಂಬಂಧವನ್ನು ಗಟ್ಟಿಗೊಳಿಸುತ್ತದೆ. ಹಾಗಾಗಿ ರಾಮಾಯಣದ ಮಹಿಳಾ ಪಾತ್ರಗಳಿಗೆ ಇಲ್ಲಿ ವಿಶೇಷ ಸ್ಥಾನ ಇದೆ. ಪುರುಷರಂತೆ ಸ್ತ್ರೀಯರೂ ಸಾಧಕಿಯರು, ತಪಸ್ವಿಗಳು, ಇಚ್ಛಾಶಕ್ತಿ ಉಳ್ಳವರು ಎಂಬುದನ್ನು ಸಾಬೀತುಪಡಿಸುವ ಕೆಲಸವನ್ನು ಕವಿ ಕುವೆಂಪುರವರು ಮಾಡಿದ್ದಾರೆ.

'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ಕೈಕೆಯನ್ನು ಪ್ರೋತ್ಸಾಹಿಸುವ ಶಕ್ತಿಯಾಗಿ ಮಂಥರೆಯನ್ನು ನಿರೂಪಿಸಲಾಗಿದೆ. ಹಾಗಾಗಿ ಇಲ್ಲಿ ಮಂಥರೆಯನ್ನೇ ದೋಷಿಯನ್ನಾಗಿ ಕಂಡಿದೆ. ಮಂಥರೆಯ ಮಾತಿಗೆ ತಕ್ಕಂತೆ ನಡೆವ ವ್ಯಕ್ತಿತ್ವವಾಗಿ ಕೈಕೆ ನಿರೂಪಿತಳಾಗಿದ್ದಾಳೆ. ಕೈಕೆಯ ಎಳವೆಯನ್ನು

ಬಲುಸಮೀಪದಿಂದ ಕಂಡವಳು ಮಂಥರೆ. ಹಾಗಾಗಿ ಕೈಕೆಗೆ ಮಂಥರೆಯ ಮೇಲೆ ವಿಶೇಷ ವ್ಯಾಮೋಹ. ಮಂಥರೆ ಪ್ರಾಯಪ್ರಬುದ್ಧಳಾದ ಕಾರಣ ಆಕೆಯ ಮಾತುಗಳೆಲ್ಲವನ್ನೂ ಆಜ್ಞೆಯ ರೂಪದಲ್ಲಿಯೇ ಕೈಕೆ ಸ್ವೀಕರಿಸುತ್ತಾಳೆ. ಹಾಗಾಗಿ ರಾಮನ ವನವಾಸದ ಸಂದರ್ಭಕ್ಕೆ ಮಂಥರೆಯನ್ನೇ ಕಾರಣೀಭೂತಳನ್ನಾಗಿಸಲಾಗಿದೆ.

ಲಿಖಿತ ರಾಮಾಯಣ ಪರಂಪರೆಯ ಮಂಥರೆಯ ಪಾತ್ರಕ್ಕೂ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಂಥರೆಯ ಪಾತ್ರಕ್ಕೂ ಸಂಬಂಧಿಸಿದಂತೆ ಸಾಮ್ಯ ಭಿನ್ನತೆಯನ್ನು ಗುರುತಿಸಲು ಸಾಧ್ಯ. ಕವಿ ಕುವೆಂಪುರವರು ನಿರೂಪಿಸಿದ ಮಂಥರೆಯ ಪಾತ್ರಕ್ಕೂ ಮಹಾನ್ವೇಷಣಂ ಮಹಾಕಾವ್ಯದ ಕವಿ ನಿರೂಪಿಸಿದ ಮಂಥರೆಯ ಪಾತ್ರ ನಿರೂಪಣೆಗೂ ಸಾಮ್ಯ ಇದೆ. ಮಂಥರೆಯ ವರ್ತನೆಗೆ ಕಾರಣ ಕಂಡುಕೊಂಡ ಈ ಎರಡೂ ಮಹಾಕಾವ್ಯದ ಕವಿಗಳು ಆಕೆಯ ಅಂತರಂಗದ ಸಂವೇದನೆಯನ್ನು ಅರ್ಥೈಸಿಕೊಂಡಿದ್ದಾರೆ. ಮಂಥರೆಯ ಪಾತ್ರನಿರೂಪಣೆಗೆ ಸಂಬಂಧಿಸಿದಂತೆ ಶಿಷ್ಟ ರಾಮಾಯಣ ಪರಂಪರೆ ಕಟ್ಟಿಕೊಟ್ಟ ವಿಪರೀತ ಕಲ್ಪನೆಗಳನ್ನು ಕುವೆಂಪು ರಾಮಾಯಣ ಒಡೆದಿದೆ. ವಿಧಿಯ ಹಸ್ತಕ್ಕೆ ಮಂಥರೆ ಒಳಗಾಗಿದ್ದಾಳೆ ಎಂಬುದನ್ನು ಒಪ್ಪಿಕೊಂಡ ಕವಿ ಕುವೆಂಪುರವರು ಅವಳಲ್ಲಿ ಅಂತರ್ಗತವಾಗಿರುವ ಪ್ರೇಮಶಕ್ತಿ, ಮಾತೃವಾತ್ಸಲ್ಯವನ್ನು ಗುರುತಿಸಿ ಕೇಂದ್ರಕ್ಕೆ ತಂದಿದ್ದಾರೆ. ಮಂಥರೆಯ ವರ್ತನೆಗೆ ಕಾರಣ ವಿಧಿವಿಲಾಸ, ಪರಿಸರ ಎಂಬುದನ್ನು ಕವಿ ಗುರುತಿಸಿದ್ದಾರೆ. ಸಾಮಾಜಿಕ ತಾತ್ಸಾರಕ್ಕೆ ಒಳಗಾಗಿ ಪ್ರೀತಿಯಿಂದ ದೂರ ಉಳಿದ ಜೀವ ನಲುಗಿ ಹೋದ ಪರಿಣಾಮ ಕ್ರೌರ್ಯ ರೂಪವನ್ನು ತಾಳುತ್ತದೆ ಎಂಬುದನ್ನು ಕವಿ ಮಂಥರೆಯ ಪಾತ್ರಮುಖೇನ ನಿರೂಪಿಸಿದ್ದಾರೆ. ಈ ಹಿನ್ನೆಲೆಯಲ್ಲಿ ದರ್ಶನಂನ ಕವಿಗೆ ಮಂಥರೆಯ ಅಳಲನ್ನು ಆಲಿಸುವ ಶಕ್ತಿ ಇದೆ ಎಂಬುದು ಸ್ಪಷ್ಟವಾಗುತ್ತದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಮಂಥರೆಯನ್ನು ಆರೋಪಿಯನ್ನಾಗಿಸಿಲ್ಲ. ರಾಮನನ್ನು ವನವಾಸಕ್ಕೆ ಕಳುಹಿಸುವ ವಿಚಾರದಲ್ಲಿ ಕೈಕೆಗೂ ಮಂಥರೆಗೂ ಸಮಪಾಲಿದೆ. ಪ್ರಭುತ್ವಪರಂಪರೆಯ ದೋಷವನ್ನು ಕಾಣಿಸುವಲ್ಲಿ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಮುಜುಗರವಿಲ್ಲ. ಹಾಗಾಗಿ ಕೈಕೆಯ ತಪ್ಪನ್ನು ಕೈಕೆಯ ನೆಲೆಯಿಂದಲೇ ಕವಿ ಪರಿಗ್ರಹಿಸಿದ್ದಾರೆ. ಅರಮನೆಯ ಸವತಿಮಾತ್ಸರ್ಯದ ಪ್ರಭಾವ ಕೈಕೆಯ ಮೇಲಾಗಿರುವುದು ಸ್ಪಷ್ಟ. ತನ್ನ ಮಗನಿಗೇ ರಾಜ್ಯ ಪಟ್ಟಾಭಿಷೇಕವಾಗಬೇಕು ಎಂಬ ಮಹತ್ವಾಕಾಂಕ್ಷೆ ಕೈಕೆಯಲ್ಲಿ ಇತ್ತು. ಹಾಗಾಗಿ ಕೈಕೆಯ ಒಳತೋಟಿಯನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಅರಿತಿದ್ದಾರೆ. ಈ ಲಕ್ಷಣ ಮಹಾನ್ವೇಷಣಂ ಮಹಾಕಾವ್ಯದಲ್ಲೂ ಕಂಡಿದೆ. ರಾಜಪರಂಪರೆಯ ವೈಭವವನ್ನು ನಿರೂಪಿಸುವ ಭರದಲ್ಲಿ ಶಿಷ್ಟ ರಾಮಾಯಣ ಪರಂಪರೆಯ ಕವಿಗಳು

ಮಂಥರೆಯನ್ನು ಆರೋಪಿಯನ್ನಾಗಿಸಿದ್ದಾರೆ. ಈ ಪೂರ್ವಗ್ರಹವನ್ನು ಒಡೆದ ಮಹಾನ್ವೇಷಣಂ ಮಹಾಕಾವ್ಯದ ಕವಿ ಮಂಥರೆಯ ಅಂತರಂಗದ ಸಂವೇದನೆಯನ್ನು ಪರಿಗ್ರಹಿಸಿದ್ದಾರೆ.

'ಪಾಪಿಗೂ ಉದ್ಧಾರವಿಹುದು' ಎಂಬ ಆಶಯವನ್ನು ಹೊತ್ತು ರೂಪುತಳೆದ ಕಾವ್ಯ 'ಶ್ರೀ ರಾಮಾಯಣದರ್ಶನಂ.' ದರ್ಶನಂ ಎಂಬ ಶಬ್ದವೇ ಸೂಚಿಸುವಂತೆ ಆತ್ಮ ಸಾಕ್ಷಾತ್ಕಾರಕ್ಕೆ ಇಲ್ಲಿ ಆದ್ಯತೆ ಇದೆ. ಮಾನವನಲ್ಲಿ ಅಡಕವಾಗಿರುವ ದಾನವತ್ವವನ್ನು, ಕ್ರೌರ್ಯವನ್ನು ನಾಶ ಮಾಡುವ ಉದ್ದೇಶ ಕವಿ ಕುವೆಂಪುರವರದ್ದು. ಹಾಗಾಗಿ ಉದ್ಧಾರದ ಪರಿಕಲ್ಪನೆಯ ವಿಚಾರದಲ್ಲಿ ಕವಿ ಕುವೆಂಪುರವರಿಗೂ ಮತ್ತು ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರಿಗೂ ಸಾಮ್ಯ ಇದೆ. ಆದರೆ ಇಲ್ಲಿ ಒಂದು ಚಿಕ್ಕ ಭಿನ್ನತೆಯನ್ನು ಗುರುತಿಸಬಹುದು. ಕವಿ ಕುವೆಂಪುರವರು ಮಾನವನಲ್ಲಿರುವ ತಾಮಸಿಕ ಗುಣಗಳನ್ನು ನಿರ್ನಾಮ ಮಾಡಿ ಆತನ ಅಂತರ್‌ಪ್ರಜ್ಞೆಯನ್ನು ಜಾಗೃತಗೊಳಿಸಿ ದೈವತ್ವಕ್ಕೆ ಏರಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಕವಿ ಶ್ರೀಯುತ ಎಂ. ವೀರಪ್ಪ ಮೊಯಿಲಿಯವರು ಮಾನವೀಯ ನೆಲೆಯಲ್ಲಿ ಬದುಕನ್ನು ಕಟ್ಟುವ ಉದ್ದೇಶ ಹೊಂದಿದ್ದಾರೆ. ಹಾಗಾಗಿ ಕ್ರೌರ್ಯದ ನೆಲೆಯಲ್ಲಿ ಸಂಚರಿಸುವ ರಾಮಾಯಣದ ಪಾತ್ರಗಳು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಮಾನವತ್ವದ ನೆಲೆಯನ್ನು ಅರಸಿ ಮುಂದೆ ಸಾಗಿವೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇಲ್ಲಿ ರಾಮಾಯಣದ ಪಾತ್ರಗಳನ್ನು ದೈವಿಕ ನೆಲೆಯಲ್ಲಿ ನಿರೂಪಿಸುವ ಧ್ಯೇಯೋದ್ದೇಶಗಳಿಲ್ಲ. ಬದಲಿಗೆ ಮಾನವೀಯ ಗುಣ ಮತ್ತು ಮೌಲ್ಯಗಳ ಅಳವಡಿಸುವಿಕೆಯಿಂದ ಮಾನವೀಯತೆಯ ನೆಲೆಯಲ್ಲಿ ಪಾತ್ರಗಳನ್ನು ನಿರೂಪಿಸುವ ಉದ್ದೇಶವಿದೆ. ಕವಿ ಮೊಯಿಲಿಯವರ ಈ ಸಿದ್ಧಾಂತ ಸಾರ್ವಕಾಲಿಕ ಮನ್ನಣೆಯನ್ನು ಪಡೆಯುವಂಥದ್ದು.

**೬.೨.೫ ಅಹಲ್ಯೆ**

ಲಿಖಿತ ರಾಮಾಯಣ ಪರಂಪರೆ ಒಂದೊಂದು ನೋಟದಲ್ಲಿ ಅಹಲ್ಯೆಯ ಬದುಕನ್ನು ಕಂಡಿದೆ. ಈ ಕಾಣುವಿಕೆಯ ಹಿಂದೆ ದೈನ್ಯತೆಯ ಭಾವ ವ್ಯಕ್ತವಾಗಿದೆ. ಬಾಹ್ಯನೋಟಕ್ಕೆ ಅಹಲ್ಯೆಯನ್ನು ನಿರ್ದೋಷಿಯನ್ನಾಗಿಸಿದಂತೆ ಕಂಡಿದೆ. ಆದರೆ ವಾಸ್ತವದಲ್ಲಿ ಅಹಲ್ಯೆಯನ್ನು ಆರೋಪಿಯನ್ನಾಗಿಯೇ ಚಿತ್ರಿಸಲಾಗಿದೆ. ಅಹಲ್ಯೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ಕನ್ನಡ ಕವಿಗಳ ಮಾನಸಿಕ ತುಡಿತ ಅಭಿವ್ಯಕ್ತಗೊಂಡಿದೆ. ಆದರೂ ಅಹಲ್ಯೆಯ ಪ್ರಸಂಗಕ್ಕೆ ಸಂಬಂಧಿಸಿದಂತೆ ಸಂಪೂರ್ಣ ನಿರ್ದೋಷಿಯನ್ನಾಗಿ ನಿರೂಪಿಸಿದ ಸಂದರ್ಭ ವಿರಳವೆಂದೇ ಹೇಳಬೇಕು.

ಅಹಲ್ಯೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಕವಿ ಉದಾರತೆ ತಳೆದಿದ್ದಾರೆ. ಅಹಲ್ಯೆ ಒಬ್ಬಳನ್ನೇ ಇಲ್ಲಿ ತಪ್ಪಿತಸ್ಥೆಯನ್ನಾಗಿಸಿಲ್ಲ. ಇಂದ್ರ, ಗೌತಮ, ಅಹಲ್ಯೆಯರ ನೆಲೆಯಿಂದ ತಪ್ಪನ್ನು ಗ್ರಹಿಸಲಾಗಿದೆ. ರಾಮನ ಸಮಕ್ಷಮ ಮೂರು ಪಾತ್ರಗಳೂ ಪಶ್ಚಾತ್ತಾಪಪಡುವ ಸಂದರ್ಭ ಇದೆ. ಆದರೂ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಅಹಲ್ಯೆಯ ನೆಲೆಯಿಂದ ಅಧಿಕಮಟ್ಟದ ಪಶ್ಚಾತ್ತಾಪವಿದೆ. ಮೂರು ಪಾತ್ರಗಳಲ್ಲಿನ ಅಹಂಮಿಕೆಯನ್ನು ಇಲ್ಲಿ ನಿರಸನಗೊಳಿಸಲಾಗಿದೆ. ಗತಬದುಕನ್ನು ಸಂಪೂರ್ಣ ಮರೆತು ಹೊಸಬದುಕಿಗೆ ಕಾಲಿರಿಸುವಂತೆ ರಾಮ ಮಾರ್ಗದರ್ಶನ ಮಾಡುತ್ತಾನೆ. ಗೌತಮ, ಇಂದ್ರರ ಪಶ್ಚಾತ್ತಾಪದ ಮಾತುಗಳಿಗಿಂತ ಅಹಲ್ಯೆಯ ಪಶ್ಚಾತ್ತಾಪದ ಮಾತುಗಳು ಮಹಾಕಾವ್ಯದಲ್ಲಿ ಅಧಿಕವಾಗಿವೆ. ಹಾಗಾಗಿ ಅಹಲ್ಯೆಯನ್ನು ನಿರಪರಾಧಿಯನ್ನಾಗಿಸುವ ತುಡಿತದಲ್ಲಿ ಕವಿ ಸಂಪೂರ್ಣ ಯಶಸ್ವಿಯಾಗಿಲ್ಲ ಎಂದೇ ಹೇಳಬೇಕು. ಯುಗತಪಸ್ವಿನಿಯಾದ ಅಹಲ್ಯೆ ಪರೀಕ್ಷಣಂ ಮಹಾಕಾವ್ಯದಲ್ಲಿ ಮನಶಕ್ತಿಯನ್ನು ಕಳೆದುಕೊಂಡ ದುರ್ಬಲ ವ್ಯಕ್ತಿತ್ವವಾಗಿ ಕಾಣಿಸಿದ್ದಾಳೆ. ಪತಿತೆಯೊಬ್ಬಳು ತನ್ನ ತಪ್ಪಿಗೆ ಎಷ್ಟರಮಟ್ಟಿಗೆ ಪಶ್ಚಾತ್ತಾಪ ಪಡಲು ಸಾಧ್ಯವೋ ಅಷ್ಟರಮಟ್ಟಿಗೆ ಅಹಲ್ಯೆಯನ್ನು ಪಶ್ಚಾತ್ತಾಪಿಯನ್ನಾಗಿ ಮಾಡಲಾಗಿದೆ.

ತನ್ನ ವೃತ್ತಾಂತವನ್ನು ರಾಮನಲ್ಲಿ ಅರುಹಿ ಬದುಕನ್ನು ಸಾರ್ಥಕಗೊಳಿಸುವ ಉದ್ದೇಶ ಅಹಲ್ಯೆಗೆ ಇತ್ತು. ಈ ಮನಸ್ಥಿತಿಯ ಹಿಂದೆ ಅಹಲ್ಯೆಗೆ ಪಾಪಪ್ರಜ್ಞೆ ಕಾಡಿರುವುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಕವಿ ಎರಡು ತಪ್ಪುಗಳನ್ನು ಅಹಲ್ಯೆಯ ನೆಲೆಯಿಂದ ಪರಿಗ್ರಹಿಸಿದ್ದಾರೆ.

೧. ಸ್ತ್ರೀ ಆದವಳು ಪತಿವ್ರತೆಯಾಗಿರಲೇಬೇಕು. ಪತಿತೆಯಾದದ್ದು ಅಹಲ್ಯೆಯ ತಪ್ಪು.
೨. ಋಷಿಪತ್ನಿಯಾಗಿ ಆಶ್ರಮಧರ್ಮಕ್ಕೆ ವಿರೋಧವಾಗಿ ನಡೆದದ್ದು ಅಹಲ್ಯೆಯ ಇನ್ನೊಂದು ತಪ್ಪು. ಹಾಗಾಗಿ ಗರಿಷ್ಟ ಮಟ್ಟದ ಪಶ್ಚಾತ್ತಾಪದ ಮಾತುಗಳು ಅಹಲ್ಯೆಯಿಂದಲೇ ಕೇಳಿಬಂದಿವೆ.

ದುಶ್ಚರಿತದ ಕಳಂಕದಿಂದ ಪಾರಾಗುವ ಸಲುವಾಗಿ ಇಲ್ಲಿ ಗೌತಮ ಮಹರ್ಷಿ ಅಹಲ್ಯೆಯನ್ನು ಶಪಿಸುತ್ತಾನೆ. ಈ ಸಂದರ್ಭಕ್ಕೆ ತಕ್ಕಂತೆ ಎರಡು ಮುಖ್ಯ ವಿಚಾರಗಳು ವ್ಯಕ್ತವಾಗುತ್ತವೆ.

೧. ಪುರುಷಪರಂಪರೆ ಸ್ತ್ರೀಸಮುದಾಯವನ್ನು ದಂಡಿಸುವ ಅಧಿಕಾರವನ್ನು 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯ ಪೋಷಿಸಿದೆ.
೨. ಗೌತಮನಿಗೆ ಪ್ರತಿಷ್ಠೆಯ ಪ್ರಶ್ನೆ ಬಹುಮುಖ್ಯವಾಗಿದೆ.

'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯ ಅಹಲ್ಯೆಯನ್ನು ಶಾಪಗ್ರಸ್ಥೆಯನ್ನಾಗಿ ನಿರೂಪಿಸಿದೆ. ಅಹಲ್ಯೆಯ ನೆಲೆಯಿಂದಲೇ ತಪ್ಪನ್ನು ಗ್ರಹಿಸುತ್ತಾ ರಾಮನ ಪಾದಸ್ಪರ್ಶದಿಂದ ಪಾಪ ಪರಿಹರಿಸಲಾಗಿದೆ. ಈ ವಿಚಾರದಲ್ಲಿ ಕವಿ ಶಿಷ್ಟ ರಾಮಾಯಣ ಪರಂಪರೆಯ ಸಾಂಪ್ರದಾಯಿಕ ನಿಲುವಿಗೆ ಬದ್ಧರಾಗಿದ್ದಾರೆ ಎಂದೇ ಹೇಳಬೇಕು. ಅಹಲ್ಯೆಯನ್ನು ಗೌತಮ

ಮಹರ್ಷಿ ಶಪಿಸುವಲ್ಲಿ ಆಕೆಯನ್ನು ದೋಷಿಯನ್ನಾಗಿಯೇ ನಿರೂಪಿಸಲಾಗಿದೆ. ಹೆಣ್ಣಿನ ವಿಚಾರದಲ್ಲಿ ಅಪೇಕ್ಷಿಸುವ ನೈತಿಕ ಮೌಲ್ಯಗಳು ಗಂಡಿನ ವಿಚಾರದಲ್ಲಿ ಮುಖ್ಯವಾಗುವುದಿಲ್ಲ. ಶುದ್ಧಚಾರಿತ್ರ್ಯದ ಪರಿಕಲ್ಪನೆ ಮಹಿಳಾಸಮುದಾಯದ ಕುರಿತು ತೀವ್ರವಾಗಿರುತ್ತದೆ. ಪುರುಷರ ವಿಚಾರದಲ್ಲಿ ಈ ಬಿಗು ಸಡಿಲಗೊಳ್ಳುತ್ತದೆ. ಲಿಖಿತ ರಾಮಾಯಣ ಪರಂಪರೆಯಲ್ಲಿ ಅಹಲ್ಯೆಯನ್ನು ನಿರ್ದಿಷ್ಟ ಚೌಕಟ್ಟಿನ ಒಳಗೆ ಬಂಧಿಯನ್ನಾಗಿಸಲಾಗಿದೆ. ಇಂದ್ರನ ಹಸ್ತಕ್ಷೇಪವಿದ್ದರೂ ಆತನನ್ನು ಕ್ಷಮಿಸುವ ಔದಾರ್ಯ ಲಿಖಿತ ರಾಮಾಯಣ ಪರಂಪರೆಯಲ್ಲಿದೆ. 'ಶ್ರೀರಾಮ ಪಟ್ಟಾಭಿಷೇಕ'ದ ಕವಿ ಅಹಲ್ಯೆಯ ಪಾತ್ರ ನಿರೂಪಣೆಯಲ್ಲಿ ಅಧಿಕ ಆಸಕ್ತಿ ವಹಿಸಿಲ್ಲ ಎಂದೇ ಹೇಳಬೇಕು.

ಲಿಖಿತ ರಾಮಾಯಣ ಪರಂಪರೆಯೊಂದಿಗೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮುಖಾಮುಖಿಯಾಗಿಸಿದಾಗ ನಿರೂಪಣೆಯ ಭಿನ್ನತೆ ವ್ಯಕ್ತವಾಗುತ್ತದೆ. ಮಹಾನ್ವೇಷಣಂ ಮಹಾಕಾವ್ಯದ ಕವಿ ಅಹಲ್ಯೆಯ ವಿಚಾರದಲ್ಲಿ ಉದಾರತೆ ತಾಳಿದ್ದಾರೆ. ಇಲ್ಲಿ ಅಹಲ್ಯೆ ಸ್ವಯಂ ಇಚ್ಛೆಯಿಂದ ತಪಸ್ವಿನಿಯಾಗುತ್ತಾಳೆ. ಗೌತಮನಿಂದ ಇಂದ್ರನಿಗೆ ಶಾಪವಿದೆ. ಇಲ್ಲಿ ಅಹಲ್ಯೆ ಒಬ್ಬಳನ್ನೇ ತಪ್ಪಿತಸ್ಥೆಯನ್ನಾಗಿಸಿಲ್ಲ. ಈ ತಪ್ಪಿಗೆ ಕಾರಣನಾದ ಇಂದ್ರನಿಗೂ ದಂಡನೆ ಇದೆ. ಹಾಗಾಗಿ ಸ್ತ್ರೀ ಪುರುಷ ಸಮಾನತೆಯ ಆಶಯ ಮಹಾನ್ವೇಷಣಂ ಮಹಾಕಾವ್ಯದಲ್ಲಿ ವ್ಯಕ್ತವಾಗಿದೆ. ಇದು ಕವಿ ಮೊಯಿಲಿಯವರ ಹೊಸ ಚಿಂತನೆ. ಮಹಾನ್ವೇಷಣಂ ಮಹಾಕಾವ್ಯದ ಅಹಲ್ಯೆಯ ಪಾತ್ರನಿರೂಪಣೆಗೆ ಸಂಬಂಧಿಸಿದಂತೆ ಮುಖ್ಯವಾಗಿ ಎರಡು ವಿಚಾರಗಳು ಕಣ್ಣೆದುರು ನಿಲ್ಲುತ್ತವೆ.

೧. ಅಹಲ್ಯೆ ಸ್ವಯಂ ತಪಸ್ವಿಯಾದ ಹಿನ್ನೆಲೆಯಲ್ಲಿ ತೀರ್ಮಾನವನ್ನು ಆಕೆಗೇ ಬಿಟ್ಟುಬಿಡಲಾಗಿದೆ.

೨. ಮೋಸದಿಂದ ಅಹಲ್ಯೆಯನ್ನು ಬಯಸಿದ ಇಂದ್ರ ದೇವಲೋಕದ ಪ್ರತಿನಿಧಿಯಾದರೂ ಆತ ಮಾಡಿದ ತಪ್ಪಿಗೆ ಶಿಕ್ಷೆ ನೀಡಲಾಗಿದೆ.

ಸ್ತ್ರೀಯರನ್ನು ದಂಡಿಸುವ, ಆಪಾದಿಸುವ ಏಕಪಕ್ಷೀಯ ತೀರ್ಮಾನವನ್ನು ಮಹಾನ್ವೇಷಣಂ ಮಹಾಕಾವ್ಯ ಒಡೆದಿದೆ. ಇಲ್ಲಿ ಪೂರ್ವಗ್ರಹಗಳಿಂದ ಕವಿ ದೂರ ಉಳಿದಿದ್ದಾರೆ. ದೈಹಿಕ ಪಾತಿವ್ರತ್ಯದಷ್ಟೇ ಮಾನಸಿಕ ಪಾತಿವ್ರತ್ಯಕ್ಕೆ ಇಲ್ಲಿ ಆದ್ಯತೆ ನೀಡಲಾಗಿದೆ. ಸ್ತ್ರೀಬದುಕನ್ನು ಶೋಧಿಸುವುದರೊಂದಿಗೆ ಪುರುಷನ ಬದುಕನ್ನು ವಿಶ್ಲೇಷಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇದೆ.

### ೬.೨.೬ ಊರ್ಮಿಳೆ

'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ಊರ್ಮಿಳೆಯ ಪ್ರಸ್ತಾಪವಿಲ್ಲ. ಡಿ. ವಿ. ಜಿ.ಯವರಿಗೆ ಅಹಲ್ಯೆ, ತಾರೆ, ಮಂಡೋದರಿ ಮತ್ತು ಸೀತೆ ಪ್ರಧಾನ ಪಾತ್ರಗಳಾಗಿ ಕಾಣಿಸಿವೆ. ಹಾಗಾಗಿ ರಾಮನನ್ನು ಪ್ರಶ್ನಿಸುವ ಮಟ್ಟದಲ್ಲಿ ಊರ್ಮಿಳೆ ಬೆಳೆದಿಲ್ಲ ಎನ್ನಬೇಕು. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಊರ್ಮಿಳೆ ಅಹಿಂಸೆಯ ಪ್ರತಿಪಾದಕಿ. ತನ್ನ ಹದಿನಾಲ್ಕು ವರ್ಷಗಳ ತಪಸ್ಸಿನಲ್ಲಿ ದೀಪಹಚ್ಚಲು ನಿರಾಕರಿಸಿದ ಆಕೆ ಪತಂಗವನ್ನು ಹಾರಬಿಡುತ್ತಾಳೆ. ಹಾಗಾಗಿ ಎಲ್ಲ ಮಾನಸಿಕಕ್ರೌರ್ಯ, ಹಿಂಸೆಯನ್ನು ಮೀರಿದ ನೆಲೆಯಲ್ಲಿ ಆಕೆಯ ವ್ಯಕ್ತಿತ್ವ ನಿರೂಪಿತವಾಗಿದೆ. 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ಕವಿಗೆ ಸೀತೆ ಮುಖ್ಯಳು. ಹಾಗಾಗಿ ಸೀತೆಯ ಪ್ರಶ್ನೆಯನ್ನು ರಾಮ ಸ್ವೀಕರಿಸುವಂತೆ ಕವಿ ನಿರೂಪಿಸಿದ್ದಾರೆ. ಊರ್ಮಿಳೆ ಅಮುಖ್ಯಳಾದ ಕಾರಣ ಅವಳ ಮಾನಸಿಕ ತುಡಿತವನ್ನು ಪರಿಗ್ರಹಿಸುವ ಉದ್ದೇಶ ಕವಿಗೆ ಇಲ್ಲ ಎಂದೇ ಹೇಳಬೇಕು. ಹಾಗಾಗಿ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ಊರ್ಮಿಳೆಗೆ ಸ್ಥಾನವಿಲ್ಲ. ರಾಮಾಯಣದ ಇತರ ಮಹಿಳಾ ಪಾತ್ರಗಳು ರಾಮನನ್ನು ಪ್ರಶ್ನಿಸಿದಂತೆ ಊರ್ಮಿಳೆಗೂ ಅವಕಾಶ ದಕ್ಕಿದಲ್ಲಿ ಪ್ರಶ್ನಿಸುತ್ತಿದ್ದಳೋ ಏನೋ? ಒಂದು ವೇಳೆ ಈ ಅವಕಾಶ ಊರ್ಮಿಳೆಗೆ ದಕ್ಕಿದಲ್ಲಿ ಎರಡು ಮುಖ್ಯ ಪ್ರಶ್ನೆಗಳನ್ನು ರಾಮನ ಎದುರಿಡುತ್ತಿದ್ದಳು ಎಂಬುದನ್ನು ನಾವು ಊಹಿಸಬಹುದು.

೧. ಲಕ್ಷ್ಮಣನನ್ನು ಕಾಡಿಗೆ ಕರೆದೊಯ್ಯುವ ಬದಲು ನಿರಾಕರಿಸಿದಲ್ಲಿ ಏನಾಗುತ್ತಿತ್ತು?
೨. ಸೀತೆಯ ಸಂಗಾತಿತನದ ಬಯಕೆಯನ್ನು ಅರಿತ ನಿನಗೆ ನನ್ನ ಸಂಗಾತಿತನದ ಕೊರತೆ ಕಾಣಲಿಲ್ಲವೇ?

ಕವಿಗೆ ಹೆಣ್ಣೊಬ್ಬಳ ಈ ಸೂಕ್ಷ್ಮವನ್ನು ಗ್ರಹಿಸುವ ಮಹೋದ್ದೇಶ ಇರಲಿಲ್ಲವೆಂದೇ ಕಾಣುತ್ತದೆ. ಆದ್ದರಿಂದ ಊರ್ಮಿಳೆಯನ್ನು ಅಂಚಿಗೆ ತಳ್ಳಿದ್ದಾರೆ ಎನ್ನಬೇಕು.

ವಾಲ್ಮೀಕಿಯಿಂದ ತೊಡಗಿ ಬಹುತೇಕ ಕನ್ನಡ ರಾಮಾಯಣಗಳು ಸೀತೆಯ ನೋವನ್ನು ಗ್ರಹಿಸಿವೆಯೇ ಹೊರತು ಊರ್ಮಿಳೆಯ ಅಳಲನ್ನು ಆಲಿಸಿಲ್ಲ. ಭಾರತೀಯ ಸಾಹಿತ್ಯ ವಿಮರ್ಶೆಯಲ್ಲಿ ಊರ್ಮಿಳೆಯ ಕುರಿತು ಮೊದಲು ಕೇಳಿ ಬಂದದ್ದು ರವೀಂದ್ರನಾಥ ಠಾಗೂರರ ಲೇಖನದಲ್ಲಿ. ಪ್ರೊ। ಟಿ. ಎಸ್. ವೆಂಕಣ್ಣಯ್ಯ ಅವರು ತಮ್ಮ ಅನುವಾದಿತ ಕೃತಿ 'ಪ್ರಾಚೀನ ಸಾಹಿತ್ಯ'ದಲ್ಲಿ ಊರ್ಮಿಳೆಯ ಕುರಿತು ಹೀಗೆ ಹೇಳಿದ್ದಾರೆ. "ವಾಲ್ಮೀಕಿ ಮಹಾಕವಿಯು ತನ್ನ ಕಲ್ಪನಾಶಕ್ತಿಯ ಕರುಣಾಜಲವೆಲ್ಲವನ್ನೂ ಜನಕಸುತೆಯ ಸೀತಾದೇವಿಯ ಪುಣ್ಯಾಭಿಷೇಕದಲ್ಲಿಯೇ ಮುಗಿಸಿ ಬಿಟ್ಟಿರುತ್ತಾನೆ. ಕಳೆಗುಂದಿದ ಮುಖವುಳ್ಳವುಳೂ ಸಮಸ್ತ ಐಹಿಕ ಸುಖದಿಂದ ವಂಚಿತಳೂ ಆಗಿ ಸೀತಾದೇವಿಯ ಛಾಯೆಯನ್ನು ಅವಕುಂಠನವತಿಯಾಗಿ ನಿಂತಿರುವ ಮತ್ತೊಬ್ಬ ರಾಜಕುಮಾರಿಯ ಚಿರದುಃಖದಿಂದ ತಪ್ತವಾದ ನಮ್ರಲಲಾಟದ

ಮೇಲೆ ಕವಿಯು ತನ್ನ ಕಮಂಡಲುವಿನ ಒಂದು ತೊಟ್ಟು ನೀರನ್ನಾದರೂ ಏಕೆ ಚಿಮುಕಿಸುವುದಿಲ್ಲ"೧. (ವೆಂಕಣ್ಣಯ್ಯ ಟಿ.ಎಸ್. ೧೯೮೩ : ೮೩) ಟಿ.ಎಸ್. ವೆಂಕಣ್ಣಯ್ಯನವರ ಮಾತನ್ನು ವಿಸ್ತರಿಸಿವುದಾದರೆ ರಾಮನ ಕಥೆ ಹೇಳುವ ಭರದಲ್ಲಿ ವಾಲ್ಮೀಕಿಯಿಂದ ತೊಡಗಿ ಬಹುತೇಕ ಕವಿಗಳು ಊರ್ಮಿಳೆಯನ್ನು ಮರೆತಿದ್ದಾರೆ ಎಂದೇ ಹೇಳಬೇಕು. ಸೀತೆಯಂತೆ ಊರ್ಮಿಳೆಗೂ ಸ್ಥಾನಮಾನ ದಕ್ಕಬೇಕಾಗಿತ್ತು. ಊರ್ಮಿಳೆಯ ವ್ಯಕ್ತಿತ್ವ, ಅಸ್ತಿತ್ವ, ಮಾತು, ಬಯಕೆಗಳ ಸಿಂಚನವೂ ಅಭಿವ್ಯಕ್ತಗೊಂಡಿಲ್ಲ. ಇದರ ಅನಾವರಣ ಆಧುನಿಕ ಮಹಾಕಾವ್ಯಗಳಲ್ಲಿ ಆಗಿದೆ. ಇಂಥ ಮಹಾಕಾವ್ಯಗಳಲ್ಲಿ ಕುವೆಂಪುರವರ 'ಶ್ರೀ ರಾಮಾಯಣದರ್ಶನಂ' ಕೂಡಾ ಒಂದು. ಲಕ್ಷ್ಮಣನನ್ನು ಅಗಲಿ ತಪಸ್ವಿನಿಯಾದ ಊರ್ಮಿಳೆಯ ಬದುಕನ್ನು ಕವಿ ಕುವೆಂಪು ಗ್ರಹಿಸಿದ್ದಾರೆ. ಪತಿಯನ್ನು ಅನುಸರಿಸಿದ ಸೀತೆಯಂತೆಯೇ ಪತಿಯಿಂದ ದೂರ ಉಳಿದು ಹಿತಬಯಸಿದ ಊರ್ಮಿಳೆಯೂ ಪತಿವ್ರತೆ ಎಂಬುದನ್ನು ಸಾಬೀತುಪಡಿಸಿದ್ದಾರೆ. ಸೀತೆಯ ವನವಾಸಕ್ಕೂ ಮಿಗಿಲು ಊರ್ಮಿಳೆಯ ಮೌನವ್ರತ. ಇಲ್ಲಿ ರಾಮಸೀತೆಯರಿಗೆ ಪಶ್ಚಾತಾಪ ಇದೆ. ಲಕ್ಷ್ಮಣ ತಮಗಾಗಿಯೇ ಊರ್ಮಿಳೆಯಿಂದ ದೂರ ಉಳಿದ ಎಂಬ ಪ್ರಜ್ಞೆ ಜಾಗೃತವಾಗಿದೆ. ಇಲ್ಲಿ ವಾಸ್ತವಪ್ರಜ್ಞೆ ಇದೆ. ಊರ್ಮಿಳೆಯಿಂದ ದೂರ ಉಳಿದ ಲಕ್ಷ್ಮಣನಾಗಲಿ, ಲಕ್ಷ್ಮಣನನ್ನು ಅಗಲಿದ ಊರ್ಮಿಳೆಯಾಗಲಿ ಪರಸ್ಪರ ವಿರಹದ ಉರಿಯಲ್ಲಿ ಬೆಂದಂತೆ ಕವಿ ಚಿತ್ರಿಸಿಲ್ಲ. ಊರ್ಮಿಳೆ ಲಕ್ಷ್ಮಣನನ್ನು ಕಂಡು ಗೋಳಾಡಿದಂತೆ ಕನಸು ಕಂಡ ರಾಮ ಊರ್ಮಿಳೆಯನ್ನು ನೋಡಿಬರುವಂತೆ ತಿಳಿಸುತ್ತಾನೆ. ಆದರೂ ಲಕ್ಷ್ಮಣ ನೋಡಬಯಸುವುದಿಲ್ಲ. ಒಂದುವೇಳೆ ನೋಡಬಯಸಿದಲ್ಲಿ ಲಕ್ಷ್ಮಣನ ಪಾತಿವ್ರತ್ಯಕ್ಕೆ ಭಂಗ ಉಂಟಾಗುವುದು ಎಂಬ ಭಾವ ಕವಿ ಕುವೆಂಪುರವರದ್ದು. ಹಾಗಾಗಿ ಕವಿಗೆ ಭ್ರಾತ್ರಪ್ರೇಮವನ್ನು ಅನಾವರಣ ಮಾಡುವ ಉದ್ದೇಶವೇ ಇಲ್ಲಿ ಮುಖ್ಯವಾಗುತ್ತದೆ. ಹಾಗಾಗಿ ಈ ವಿಚಾರದಲ್ಲಿ ಕವಿ ಕುವೆಂಪು ಶಿಷ್ಟ ರಾಮಾಯಣ ಪರಂಪರೆಗೆ ಬದ್ಧರಾಗಿದ್ದಾರೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಊರ್ಮಿಳೆಯ ಹದಿನಾಲ್ಕು ವರ್ಷಗಳ ಪರಿಸ್ಥಿತಿ, ಮನಸ್ಥಿತಿ, ವಿರಹದ ಕುರಿತು ಚಿಂತನೆ ಕವಿಗೆ ಇದೆ. ಭ್ರಾತೃಪ್ರೇಮವನ್ನು ಮರೆದ ಲಕ್ಷ್ಮಣ ದಾಂಪತ್ಯದ ಜವಾಬ್ದಾರಿಯನ್ನು ಮುನ್ನಡೆಸುವಲ್ಲಿ ಎಷ್ಟರಮಟ್ಟಿಗೆ ಸಫಲನಾದ? ಎಂಬುದು ಮುಖ್ಯ ಪ್ರಶ್ನೆ.

ಊರ್ಮಿಳೆಯ ತಪಸ್ಸು ರಾಮಲಕ್ಷ್ಮಣಸೀತೆಯರಿಗೆ ಶ್ರೀರಕ್ಷೆ. ರಾಮನ ಆಗಮನದ ಸುದ್ದಿ ತಿಳಿದ ಊರ್ಮಿಳೆ ಶುಭ್ರವಸ್ತ್ರಧಾರಿಣಿಯಾಗಿ ಬರಲು ಅಪೇಕ್ಷಿಸುತ್ತಾಳೆ. ತನ್ನ ಹದಿನಾಲ್ಕು ವರ್ಷಗಳ ನಿರ್ಮಲ ತಪಸ್ಸಿನ ಕುರಿತು ಅವಳಿಗೆ ಹೆಮ್ಮೆ ಇಲ್ಲ. ತನ್ನ ತಪಸ್ಸಿನ ಪರಿಣಾಮದಿಂದಲೇ ರಾಮಲಕ್ಷ್ಮಣಸೀತೆಯರು ಸುಸೂತ್ರವಾಗಿ ಮರಳಿ ಬಂದರೆಂಬ ಪ್ರತಿಷ್ಠೆಯೂ ಇಲ್ಲ. ಸಹಜ ಸ್ಥಿತಿಯಲ್ಲೇ ತೆರಳು ಎಂದು ಮಾಂಡವಿ ತಿಳಿಸುತ್ತಾಳೆ. ಹಾಗಾಗಿ

ಊರ್ಮಿಳೆಯ ತಪಸ್ಸನ್ನು, ಸಾಧನೆಯ ಸಾಧ್ಯತೆಗಳನ್ನು ಅರಿಯುವ ಶಕ್ತಿ ರಾಮಾಯಣದ ಇತರ ಪಾತ್ರಗಳಿಗೆ ಇದೆ. ಶಿಷ್ಟ ಸಂಪ್ರದಾಯದಲ್ಲಿ ಅಂಚಿಗೆ ತಳ್ಳಿದ ಊರ್ಮಿಳೆಯ ಬದುಕು 'ಶ್ರೀ ರಾಮಾಯಣದರ್ಶನಂ'ನಲ್ಲಿ ಕೇಂದ್ರದಲ್ಲಿದೆ. ಆದರೂ ಸೀತೆಗೆ ಸಂದಗೌರವ, ಆದ್ಯತೆ, ಅಭಿವ್ಯಕ್ತಿಸ್ವಾತಂತ್ರ್ಯ ಊರ್ಮಿಳೆಗೆ ದೊರೆತಿಲ್ಲ. ಆದರೆ ಊರ್ಮಿಳೆಯ ಹದಿನಾಲ್ಕು ವರ್ಷಗಳ ಮೌನವ್ರತ, ಮಾನಸಿಕ ಮತ್ತು ದೈಹಿಕ ವೇದನೆಯನ್ನು ಹೇಳುವ ಉದ್ದೇಶ ಕವಿಗೆ ಇದೆ.

'ಶ್ರೀರಾಮ ಪಟ್ಟಾಭಿಷೇಕ'ದ ಊರ್ಮಿಳೆ ತಪಸ್ವಿಸಿಯಲ್ಲ. ಅರಮನೆಯಲ್ಲಿ ಇದ್ದೇ ಜೀವನ ಸಾಗಿಸಿದವಳು. ತಾನು ವನವಾಸಕ್ಕೆ ತೆರಳಬೇಕು ಎಂಬ ಬಯಕೆ ಅವಳಲ್ಲಿ ಇಲ್ಲ. ತಪಸ್ವಿನಿಯಾಗಬೇಕು ಎಂಬ ಆಶಯವೂ ಇಲ್ಲ. ಅರಮನೆಯಲ್ಲಿ ಉಳಿದೇ ಬದುಕು ನಡೆಸುವ ಸಹಜಸ್ತ್ರೀಯಾಗಿ ಕಾಣಿಸಿದ್ದಾಳೆ. ಸೀತೆಯ ವನವಾಸದ ಬದುಕನ್ನು ಅರ್ಥೈಸಿದ ಊರ್ಮಿಳೆ ಆಕೆಯ ಯೋಗಕ್ಷೇಮ ವಿಚಾರಿಸುತ್ತಾಳೆ. ಅರಮನೆಯ ಊಟಮಾಡಿದ ನಾನು ಸೊರಗಿಲ್ಲ. ಸೆರೆಯಲ್ಲಿ ಸಿಕ್ಕ ನೀನು ಸೊರಗಿರುವೆ ಎನ್ನುತ್ತಾಳೆ. ಹಾಗಾಗಿ ಊರ್ಮಿಳೆಯಲ್ಲಿ ವಾಸ್ತವಬದುಕನ್ನು ಅರ್ಥೈಸಿಕೊಳ್ಳುವ ಸಂವೇದನಾಶೀಲತೆ ಇದೆ ಎಂಬುದು ಸ್ಪಷ್ಟವಾಗುತ್ತದೆ. ಲಕ್ಷ್ಮಣ ಬರುವವರೆಗೆ ಸುಪ್ಪತ್ತಿಗೆಯನ್ನು ಏರುವುದಿಲ್ಲ ಎಂಬುದಾಗಿ ಪ್ರತಿಜ್ಞೆಗೈಯುತ್ತಾಳೆ. ಜೊಂಡುಹುಲ್ಲಿನ ಚಾಪೆಯ ಮೇಲೆ ಮಲಗುತ್ತಾಳೆ. ಪತಿಯಿಂದ ದೂರಾದ ಹೆಣ್ಣೊಬ್ಬಳು ಪಡುವ ಯಾತನೆ, ಅನುಭವಿಸುವ ನೋವು ಇಲ್ಲಿ ವ್ಯಕ್ತ. ಮಾನಸಿಕವಾಗಿ ರೋಸಿಹೋದ ಊರ್ಮಿಳೆಯ ವಾಸ್ತವಬದುಕಿನ ಅನಾವರಣ ಇಲ್ಲಿದೆ. ಹಾಗಾಗಿ ಅರಮನೆಯಲ್ಲಿದ್ದು ರಾಜವೈಭೋಗದಿಂದ ದೂರ ಉಳಿದ ಊರ್ಮಿಳೆ ಇಲ್ಲಿ ಕಾಣಸಿಗುತ್ತಾಳೆ.

ತಪಸ್ಸನ್ನು ಅಪೇಕ್ಷಿಸುವ ವಿಚಾರದಲ್ಲಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಊರ್ಮಿಳೆಗೂ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಊರ್ಮಿಳೆಗೂ ಸಾಮ್ಯ ಇದೆ. ಸ್ವತಂತ್ರ ಮಾದರಿಯ ಪಾತ್ರವಾಗಿ 'ಶ್ರೀರಾಮಾಯಣ ಮಹಾನ್ವೇಷಣಂ'ನಲ್ಲಿ ಊರ್ಮಿಳೆ ಕಾಣಿಸಿದ್ದಾಳೆ. ಹದಿನಾಲ್ಕು ವರ್ಷಗಳ ಊರ್ಮಿಳೆಯ ವಿರಹ, ಮಾನಸಿಕ ತುಡಿತ, ಸಂವೇದನಾಶೀಲತೆಯನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಅಭಿವ್ಯಕ್ತಿಸಿದ್ದಾರೆ. ಪತಿಯು ಅರಮನೆಯ ಬದುಕನ್ನು ನಿರಾಕರಿಸಿದಾಗ ತಾನೂ ನಿರಾಕರಿಸಿ ಸ್ವಯಂ ತಪಸ್ವಿನಿಯಾದಳು ಊರ್ಮಿಳೆ. ಆಕೆಯ ತಪಸ್ಸಿನಲ್ಲಿ ದೃಢಸಂಕಲ್ಪ ಇದೆ. ಶುಭ ಹಾರೈಕೆಯ ಉದ್ದೇಶ ಇದೆ. ಪ್ರಸಿದ್ಧಿ ಪಡೆಯಬೇಕು ಎಂಬ ಆಸೆ ಇಲ್ಲ. ಹದಿನಾಲ್ಕು ವರ್ಷಗಳ ಕಾಲ

ಅರಮನೆಯ ವೈಭೋಗದಿಂದ ದೂರ ಉಳಿದು ಎಷ್ಟರ ಮಟ್ಟಿಗೆ ಸರಳ ಬದುಕು ಸಾಗಿಸಲು ಸಾಧ್ಯವೋ ಅಷ್ಟರ ಮಟ್ಟಿಗೆ ಸರಳ ಬದುಕನ್ನು ಸಾಗಿಸಿದವಳು ಊರ್ಮಿಳೆ.

ಊರ್ಮಿಳೆಯ ಪಾತ್ರ ನಿರೂಪಣೆಗೆ ಸಂಬಂಧಿಸಿದಂತೆ ವಾಲ್ಮೀಕಿ ಕವಿ ತಳೆದ ಸೀಮಿತ ಚೌಕಟ್ಟನ್ನು ಮಹಾನ್ವೇಷಣಂ ಮಹಾಕಾವ್ಯದ ಕವಿ ಒಡೆದಿದ್ದಾರೆ. ಮಹಾನ್ವೇಷಣಂನ ಊರ್ಮಿಳೆಗೆ ತನ್ನದೇ ಆದ ವಿಶಿಷ್ಟ ಅನನ್ಯತೆ ಇದೆ. ವಾಲ್ಮೀಕಿ ರಾಮಾಯಣದಲ್ಲಿ ಕವಿ ಊರ್ಮಿಳೆಯನ್ನು ಲಕ್ಷ್ಮಣನ ಹೆಂಡತಿ ಎಂದಷ್ಟೇ ನಿರೂಪಿಸಿ ಕೈ ಬಿಟ್ಟಿದ್ದಾರೆ. ಸಮಾಜ ಎಂಬುದು ಒಂದು ದೀರ್ಘವಾದ ಸಂಘಟನೆ. ಜನಸಾಮಾನ್ಯನಿಂದ ತೊಡಗಿ ಸಿರಿವಂತರವರೆಗೆ ಎಲ್ಲರೂ ಸಮಾಜದ ಭಾಗಗಳೇ ಆಗಿರುತ್ತಾರೆ. ಹಾಗಾಗಿ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಜನಸಾಮಾನ್ಯನೂ ಪ್ರಧಾನವಾಗಿ ಬಿಡುತ್ತಾನೆ. ಆದರೆ ವಾಲ್ಮೀಕಿ ರಾಮಾಯಣದಿಂದ ತೊಡಗಿ ಬಹುತೇಕ ಶಿಷ್ಟ ರಾಮಾಯಣಗಳು ಜನಸಾಮಾನ್ಯರ ಬದುಕನ್ನು ಅಲಕ್ಷಿಸಿದೆ. ಅರಮನೆಯಲ್ಲಿ ವಾಸಿಸುವವರ ಬದುಕೇ ಅದಕ್ಕೆ ಪ್ರಧಾನ. ಅಲ್ಲೂ ಅಂತಃಪುರದ ವ್ಯಾಪ್ತಿಗೆ ಒಳಪಡುವ ರಾಣಿಯರನ್ನು ಅಂಚಿಗೆ ತಳ್ಳಿದೆ. ಅಧಿಕಾರದ ನೆಲೆಯಲ್ಲಿ, ಲಿಂಗದ ನೆಲೆಯಲ್ಲಿ ನಿರೂಪಿಸುವಾಗ ಸಮಾಜದ ಒಂದು ವರ್ಗವನ್ನು ಮಾತ್ರ ಪರಿಗಣಿಸಿದೆ. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಹಾಗಲ್ಲ. ಪ್ರತಿಯೊಬ್ಬ ವ್ಯಕ್ತಿಗೂ ವ್ಯಕ್ತಿಗೌರವ ಸಲ್ಲಿಸುತ್ತಾ ಅವರ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸಿದೆ. ಈ ಕಾರಣದಿಂದಾಗಿಯೇ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಊರ್ಮಿಳೆಯ ಪಾತ್ರಕ್ಕೆ ವಿಶೇಷ ಸ್ಥಾನಮಾನ ದಕ್ಕಿದೆ.

ಕುವೆಂಪು ರಾಮಾಯಣದಲ್ಲಿ ಕವಿ ಊರ್ಮಿಳೆಗೆ ವಿಶೇಷ ಸ್ಥಾನವನ್ನೇ ನೀಡಿದ್ದಾರೆ. ಊರ್ಮಿಳೆಯ ತಪಸ್ಸಿನಲ್ಲಿ ನೀರವತೆ ಇಲ್ಲ. ತಪಸ್ವಿನಿಯಾಗುವ ಮೂಲಕ ಸ್ವಯಂ ದೀಕ್ಷೆಯನ್ನು ಪಡೆದಳು. ರಾಮನ ವನವಾಸದ ಪರಿಣಾಮ ಊರ್ಮಿಳೆಯ ಬದುಕಿನ ಮೇಲಾಗಿದೆ. ಹಾಗಾಗಿ 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ಊರ್ಮಿಳೆಯಲ್ಲೂ ಮತ್ತು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಊರ್ಮಿಳೆಯಲ್ಲೂ ಒಂದು ವಿಚಾರವಾಗಿ ಸಾಮ್ಯವನ್ನು ಕಾಣಬಹುದು. ರಾಮನ ವನವಾಸದ ಪರಿಣಾಮ ಊರ್ಮಿಳೆಯ ಬದುಕಿಗೆ ಅನ್ಯಾಯವಾಯಿತು ಎಂಬುದು. ಸುಮಾರು ಹದಿನಾಲ್ಕು ವರುಷಗಳ ಕಾಲ ಪತಿಯನ್ನು ಅಗಲಿದ ಊರ್ಮಿಳೆಯ ವಿರಹದ ಬದುಕಿನ ಅರಿವು ಕವಿ ಕುವೆಂಪುರವರಂತೆ ಕವಿ ಮೊಯಿಲಿಯವರಿಗೂ ಇದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಕವಿ ತೀರಾ ಸಮೀಪದಿಂದ ಊರ್ಮಿಳೆಯ ಅಳಲನ್ನು ಬಲ್ಲವರು. ಹಾಗಾಗಿ ಕವಿಯ ಸಂವೇದನಾಶೀಲ ಮನಸ್ಸು ಇಲ್ಲಿ ಊರ್ಮಿಳೆಯ ವಿಚಾರವಾಗಿ ತುಡಿದಿರುವುದು ಸ್ಪಷ್ಟವಾಗುತ್ತದೆ. ತನ್ನ ವಿರಹದ ಉರಿಗೆ ಪರೋಕ್ಷವಾಗಿ ಕಾರಣಳು ಕೈಕೆ ಎಂಬ ಪ್ರಜ್ಞೆ ಊರ್ಮಿಳೆಯಲ್ಲಿ ಮೂಡದಂತೆ ಕವಿ ಇಲ್ಲಿ ಎಚ್ಚರ ವಹಿಸಿದ್ದಾರೆ. ಹಾಗಾಗಿ ತನ್ನ ಬದುಕಿಗೆ ಸಂಬಂಧಿಸಿದಂತೆ ಊರ್ಮಿಳೆಗೆ ಅಂತಃಪುರದ ಕೈಕೆಯ ಮೇಲಾಗಲಿ, ದಾಸಿ ಮಂಥರೆಯ ಮೇಲಾಗಲಿ ಕೋಪ ಇಲ್ಲದಿರುವುದು ಕಾವ್ಯದ ವಿಶಿಷ್ಟತೆ. ತನ್ನ ಬದುಕಿನ ಕುರಿತು ಖೇದ ಇರುವ ಊರ್ಮಿಳೆಗೆ ಲೌಕಿಕ ಸುಖದಲ್ಲಿ ಆಸಕ್ತಿ ಇಲ್ಲ. ಪತಿಯನ್ನು ಅಗಲಿದ ವಿರಹವೇದನೆ ಆಕೆಯನ್ನು ಕಾಡಿತ್ತು. ಆದರೆ ಅರಮನೆಯ ಲೌಕಿಕ ಅವಕಾಶಗಳಿಂದ ದೂರವಾದ ನೋವಾಗಲಿ, ಕೋಪವಾಗಲಿ ಊರ್ಮಿಳೆಯನ್ನು ಎಂದಿಗೂ ಕಾಡಿದ್ದಿಲ್ಲ. ವಾಸ್ತವತೆಯ ನೆಲೆಯಲ್ಲೇ ಅಲೌಕಿಕ ಪ್ರಜ್ಞೆಯಿಂದ ಕಠಿಣ ತಪಸ್ಸನ್ನು ಆಚರಿಸಿದವಳು ಊರ್ಮಿಳೆ. ಊರ್ಮಿಳೆಯ ಚಿತ್‌ಶಕ್ತಿ ಮತ್ತು ತಪಃಶಕ್ತಿಗೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ವಿಶೇಷ ಸ್ಥಾನ ಇದೆ. ಲೋಕೋದ್ಧಾರದ ಪರಿಕಲ್ಪನೆ ಹೊತ್ತು ಯೋಗಿನಿಯಾಗಿ ಬದುಕು ನಡೆಸಿದ ಊರ್ಮಿಳೆ ಮಹಾನ್ವೇಷಣಂ ಮಹಾಕಾವ್ಯದ ವಿಶಿಷ್ಟ ಮಹಿಳಾ ಪಾತ್ರವಾಗಿದೆ.

**೬.೨.೭ ತಾರೆ**

ಲಿಖಿತ ರಾಮಾಯಣ ಪರಂಪರೆ ತಾರೆಯ ಬದುಕನ್ನು ಪರಿಗ್ರಹಿಸಿದೆ. ಈ ನೆಲೆಯಲ್ಲಿ ಸ್ತ್ರೀಸಂವೇದನಾಶೀಲ ನೆಲೆಯಲ್ಲಿ ತಾರೆಯನ್ನು ಕಾಣಲಾಗಿದೆ. ಹಾಗಾಗಿ ಲಿಖಿತ ರಾಮಾಯಣದ ಕವಿಗಳಿಗೆ ತಾರೆ ಮುಖ್ಯಳಾಗಿ ಕಂಡಳು. ವಾಲಿಯನ್ನು ದುಷ್ಟತೆಯ ನೆಲೆಯಲ್ಲಿ ನಿರೂಪಿಸಿದ ಲಿಖಿತ ಕಾವ್ಯ ಪರಂಪರೆ ತಾರೆಯನ್ನು ಸ್ತ್ರೀತ್ವದ ಪ್ರತಿನಿಧಿಯಾಗಿ ಕಟ್ಟಿಕೊಟ್ಟಿದೆ. ಹಾಗಾಗಿ ತಾರೆಯ ಬದುಕು, ಭಾವ, ಉದ್ದೇಶಗಳೆಲ್ಲವೂ ಲಿಖಿತ ರಾಮಾಯಣ ಪರಂಪರೆಯಲ್ಲಿ ಬಹುಮುಖ್ಯವಾಗಿ ಕಂಡಿದೆ. ತಾರೆಯ ವ್ಯಕ್ತಿತ್ವವನ್ನು ಮಾನವೀಯ ನೆಲೆಯಲ್ಲಿ ನಿರೂಪಿಸುವಲ್ಲಿ ಲಿಖಿತ ಪರಂಪರೆಯ ಕವಿಗಳು ಉದಾರತೆ ತಳೆದಿದ್ದಾರೆ. ಬಹುತೇಕ ಕನ್ನಡ ರಾಮಾಯಣಗಳಲ್ಲಿ ತಾರೆಯ ಪಾತ್ರ ಪ್ರತಿಭಟನಾತ್ಮಕ ಮಾದರಿಯಲ್ಲಿ ಮೂಡಿದೆ. ವ್ಯವಸ್ಥೆಯಲ್ಲಿ ತನಗಾದ ಅನ್ಯಾಯವನ್ನು ಪ್ರತಿಭಟಿಸುತ್ತ ಪ್ರಭುತ್ವದ ಪ್ರತಿನಿಧಿಯನ್ನು ಪ್ರಶ್ನಿಸುವ ಅವಕಾಶ ಪಡೆದಿದೆ. ಈ ನಿಟ್ಟಿನಲ್ಲಿ ತನ್ನ ದಿಟ್ಟತನದ ಭಾವವನ್ನು ಅಭಿವ್ಯಕ್ತಿಸುವಲ್ಲಿ ತಾರೆಗೆ ಯಾವುದೇ ಹಿಂಜರಿಕೆ ಇಲ್ಲ.

'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ತಾರೆ ಪತಿ ವಿಯೋಗಕ್ಕೆ ಒಳಗಾದವಳು. ತಾರೆಗೆ ರಾಮನ ಕುರಿತು ತೀರಾ ಆಕ್ರೋಶ ಇದೆ. ವಾಲಿಯನ್ನು ರಾಮ ಕೊಂದ ಎಂಬ

ಕಾರಣಕ್ಕೆ ದ್ವೇಷಿಸುತ್ತಾಳೆ. ಸ್ತ್ರೀಸಹಜ ವಿರಹದ ಉರಿಯಲ್ಲಿ ಬೆಂದ ತಾರೆ ತೀಕ್ಷ್ಣ ಮಾತುಗಳಿಂದ ಇರಿಯುವ ಮೂಲಕ ರಾಮನನ್ನು ಪ್ರಶ್ನೆಗೊಡ್ಡುತ್ತಾಳೆ. ರಾಮ ಪ್ರಭುತ್ವದ ಕೇಂದ್ರಬಿಂದು. ತನ್ನ ದುಃಖವನ್ನು, ಆಕ್ರೋಶವನ್ನು, ಪ್ರತಿಭಟನೆಯನ್ನು ವ್ಯಕ್ತಪಡಿಸುವಲ್ಲಿ ತಾರೆಗೆ ಹಿಂಜರಿಕೆ ಇಲ್ಲ. ಆಕೆಯ ಮಾತುಗಳಲ್ಲಿ ದಿಟ್ಟತನವಿದೆ. ಸುಗ್ರೀವನ ಸಹಾಯ ಮತ್ತು ಸ್ನೇಹ ಬಯಸುವ ದುರುದ್ದೇಶದಿಂದ ನೀನು ಯುದ್ಧ ಬಯಸಿ ಶಕ್ತಿಶಾಲಿ ಹಾಗೂ ಬುದ್ಧಿವಂತನಾದ ವಾಲಿಯನ್ನು ಕೊಂದೆ. ಅಂದು ಅಹಲ್ಯೆಯಲ್ಲಿ ಅಪರಾಧ ಎಸಗಿದ ಇಂದ್ರನನ್ನು ಕ್ಷಮಿಸಿದ ನೀನು ಇಂದೇಕೆ ವಾಲಿಯ ವಿಚಾರದಲ್ಲಿ ಕ್ರೂರಿಯಾದೆ! ಎಂದು ರಾಮನನ್ನು ಪ್ರಶ್ನಿಸುತ್ತಾಳೆ. ಅಕ್ಕ ತಂಗಿಯರು ಇಲ್ಲದ ಕಾರಣ ನಿನ್ನ ಮನಸ್ಸು ಕರಡುಕಟ್ಟಿದೆ ಎನ್ನುತ್ತಾಳೆ. ತಾರೆಯ ಮಾತುಗಳಲ್ಲಿ ತೀಕ್ಷ್ಣತೆ ಇದೆ. ಹೊರನೋಟಕ್ಕೆ ದಿಟ್ಟತನದ ಕೊಂಕು ಮಾತಾಗಿ ಕಂಡರೂ ವಾಸ್ತವವಾಗಿ ಆ ಮಾತುಗಳಲ್ಲಿ ಅರ್ಥವಂತಿಕೆ ಇದೆ. ತಾರೆಯ ಅಂತರಂಗದ ವೇದನೆ 'ಶ್ರೀರಾಮ ಪರೀಕ್ಷಣಂ'ನಲ್ಲಿ ವ್ಯಕ್ತವಾಗಿದೆ. ತನ್ನ ಪತಿಯನ್ನು ಕೊಂದ ರಾಮನಲ್ಲೇ ಅಳಲು ತೋಡಿಕೊಂಡಿದ್ದು ಮಹಾಕಾವ್ಯದ ವಿಶೇಷ. ಸ್ತ್ರೀಸಂವೇದನೆಯ ನೆಲೆಯಿಂದ ತಾರೆಯ ವಿರಹದ ಉರಿ, ದುಃಖ, ಹತಾಶೆ, ಸಂವೇದನೆ ಬಹುಮುಖ್ಯ ಎನಿಸುತ್ತದೆ. ತನಗೆ ಕಂಟಕಪ್ರಾಯರಾದವರನ್ನು ಕೊಲ್ಲುವ ಉದ್ದೇಶ ರಾಜಪರಂಪರೆಗೆ ಇದೆ. ಹೀಗಾದಾಗ ನಲುಗುವವರು ಪ್ರಜೆಗಳು. ಈ ವಾಸ್ತವ ಇಲ್ಲಿ ಅಭಿವ್ಯಕ್ತಗೊಂಡಿದೆ.

ಡಿ. ವಿ. ಜಿ.ಯವರ 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದಲ್ಲಿ ಸ್ತ್ರೀಸಂವೇದನಾಶೀಲ ನೆಲೆಯಲ್ಲಿ ತಾರೆಯ ಪಾತ್ರ ಅಭಿವ್ಯಕ್ತವಾಗಿದೆ. ರಾಜನಾದವ ಪ್ರಜೆಗಳ ಮನೋಭಿಲಾಷೆಯನ್ನು ಅರ್ಥೈಸಿಕೊಂಡಿರಬೇಕು. ಅದರಲ್ಲೂ ಸ್ತ್ರೀಸಮುದಾಯದ ಕುರಿತು ವಿಶೇಷ ಕಾಳಜಿ ಹೊಂದಿರಬೇಕು ಎಂಬುದು ತಾರೆಯ ಆಶಯ. ವಾಸ್ತವವಾಗಿ ಎಲ್ಲ ಪ್ರಭುತ್ವಶಾಹಿಗಳಿಗೆ ಈ ಉದಾತ್ತಪ್ರಜ್ಞೆ ಇರುವುದಿಲ್ಲ. ತಮಗೆ ಕಂಟಕಪ್ರಾಯರಾದವರನ್ನು ದಮನ ಮಾಡುವ ಉದ್ದೇಶ ರಾಜಪರಂಪರೆಗೆ ಇದೆ. ಇದರಿಂದ ಮಹಿಳೆಯರ ಬದುಕು ತುಳಿತಕ್ಕೆ ಒಳಗಾಗುತ್ತದೆ. ಪತಿವಿಯೋಗಕ್ಕೆ ಒಳಗಾದ ಪತ್ನಿಯ ಮಾನಸಿಕ ವೇದನೆ ಪರೀಕ್ಷಣಂ ಮಹಾಕಾವ್ಯದ ತಾರೆಯಲ್ಲಿ ಅಭಿವ್ಯಕ್ತವಾಗಿದೆ. ತಾರೆಯ ಪ್ರಶ್ನೆಯಲ್ಲಿ ಸೂಕ್ಷ್ಮತೆ ಇದೆ. ತನಗಾದ ಅನ್ಯಾಯಕ್ಕೆ ಪ್ರತಿಭಟನೆ ಇದೆ. ಅಸ್ತಿತ್ವದ ನೆಲೆಯಿಂದ ತಾರೆಯ ಹೋರಾಟವಿದೆ. ರಾಮನ ಯುದ್ಧಸಾಧನೆಯ ನಿರೂಪಣೆಯೊಂದೇ ಇಲ್ಲಿ ಡಿ. ವಿ. ಜಿ.ಯವರ ಉದ್ದೇಶವಲ್ಲ. ನಾರೀ ಮನೋಧರ್ಮಕ್ಕೂ ಇಲ್ಲಿ ಆದ್ಯತೆ ಇದೆ. ಸ್ವಾರ್ಥ ಸಾಧಿಸಿದ ರಾಮ ನಾರೀ ಮನೋಧರ್ಮವನ್ನು ಅರಿಯದ ವ್ಯಕ್ತಿತ್ವವಾಗಿದ್ದಾನೆ. ಪ್ರಭುತ್ವಪರಂಪರೆಯ ದಬ್ಬಾಳಿಕೆಗೆ ಒಳಗಾದ ಮಹಿಳಾ ಪಾತ್ರಗಳಲ್ಲಿ ಪರೀಕ್ಷಣಂ ಮಹಾಕಾವ್ಯದ ತಾರೆಯೂ ಒಬ್ಬಳು. ತಾರೆಯ ನೆಲೆಯಿಂದ ಪ್ರಭುತ್ವಪರಂಪರೆಯ ಅನ್ಯಾಯವನ್ನು ಪರಿಗ್ರಹಿಸಲಾಗಿದೆ. 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ತಾರೆಯ

ಮಾತುಗಳಲ್ಲಿ ವ್ಯಂಗ್ಯವಿಡಂಬನೆ ಇದೆ. ಪ್ರಭುತ್ವ ಪರಂಪರೆಯ ಪಕ್ಷಪಾತ ಧೋರಣೆಯನ್ನು ತಾರೆಯ ಮುಖೇನ ಹೊರಗೆಡಹಲಾಗಿದೆ. ವ್ಯಕ್ತಿಗೆ ದಕ್ಕಬೇಕಾದ ನ್ಯಾಯ, ಸ್ವಾತಂತ್ರ್ಯದ ಅಗತ್ಯತೆ ತಾರೆಯ ಪಾತ್ರದಿಂದ ಅಭಿವ್ಯಕ್ತವಾಗಿದೆ. ಈ ಮೂಲಕ ಸ್ತ್ರೀಬದುಕನ್ನು ಪ್ರಧಾನವಾಹಿನಿಗೆ ತರುವ ಪ್ರಯತ್ನ ನಡೆದಿದೆ.

'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯದ ತಾರೆಯ ಪಾತ್ರ ಸಾಂಪ್ರದಾಯಿಕ ಚಿಂತನೆಯಿಂದ ಒಡಮೂಡಿದೆ. ಮುತ್ತೈದೆತನದ ಉಳಿವಿಕೆಗಾಗಿ ಇಲ್ಲಿ ತಾರೆಯ ಹೋರಾಟವಿದೆ. ತಾರೆಗೆ ಸುಗ್ರೀವ ಮತ್ತು ರುಮೆಯರ ಮೇಲೆ ಅಧಿಕ ಅನುಕಂಪ ಇದೆ. ಹಾಗಾಗಿ ಸಹೋದರರ ನಡುವಣ ಯುದ್ಧ ತಪ್ಪಿಸಲು ಪ್ರಯತ್ನಿಸುತ್ತಾಳೆ. ತನ್ನ ಮುತ್ತೈದೆತನದ ಉಳಿವಿಕೆಯ ಉದ್ದೇಶ ಇಲ್ಲಿ ತಾರೆಗೆ ಮುಖ್ಯವಾಗುತ್ತದೆ. ಯುದ್ಧಭೀಕರತೆಯ ಪರಿಣಾಮವನ್ನು ವಾಲಿಯ ಬಳಿ ಚರ್ಚಿಸುತ್ತಾಳೆ. ಇಲ್ಲಿ ತಾರೆಯ ಮುತ್ತೈದೆತನದೊಂದಿಗೆ ರುಮೆಯ ಮುತ್ತೈದೆತನವನ್ನು ಶಾಶ್ವತವಾಗಿ ಉಳಿಸಬೇಕು ಎಂಬ ಉದ್ದೇಶ ಕವಿಗೆ ಇದೆ.

ವಾಲಿಯೊಂದಿಗೆ ತಾರೆಯೂ ಸಹಗಮನ ಮಾಡಲು ಅಪೇಕ್ಷಿಸುತ್ತಾಳೆ. ಇಲ್ಲಿ ಕವಿಯ ಸಾಂಪ್ರದಾಯಿಕ ಮನಸ್ಸು ಕೆಲಸ ಮಾಡಿದೆ. ವಾಲಿಯ ಯುದ್ಧವನ್ನು ವಿವರಿಸುವ ಸೀಮಿತ ಉದ್ದೇಶ ಕವಿಗೆ ಇಲ್ಲ. ಬದಲಿಗೆ ವಾಲಿ ಸತ್ತಾಗ ಸಾಂಪ್ರದಾಯಿಕ ಆಚರಣೆಗೆ ಬದ್ಧರಾದ ಕವಿ ತಾರೆಯಿಂದ ಸತಿಸಹಗಮನ ಮಾಡಿಸಿದ್ದಾರೆ. ಮುತ್ತೈದೆತನದ ಉಳಿವಿಕೆಯ ಉದ್ದೇಶ ತಾರೆಯ ಪಾತ್ರದಲ್ಲಿ ತೀವ್ರವಾಗಿದೆ. ಆದ್ದರಿಂದ ವಾಲಿಗೆ ಕ್ಷಮೆ ದೊರಕಬೇಕು ಎಂಬ ಆಶಯ ವ್ಯಕ್ತಗೊಂಡಿದೆ. ಅನ್ಯಾಯ, ಅಧರ್ಮಕ್ಕೆ ಹೆಸರಾಗಿರುವ ವಾಲಿಯನ್ನು ನಾಶಗೊಳಿಸಿದ ರಾಮನನ್ನು ವೈಭವೀಕರಿಸುವುದು ಇಲ್ಲಿ ಕವಿಯ ಉದ್ದೇಶವಲ್ಲ. ಯಾವುದೇ ವೈಯಕ್ತಿಕ ನೆಲೆಯ ಹೋರಾಟಕ್ಕೆ ಗಂಡು-ಹೆಣ್ಣು, ಬಡವ-ಶ್ರೀಮಂತ, ಕುಲಜ-ಕುಲಹೀನ ಎಂಬ ಭೇದ ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯು ಅವರವರ ವೈಯಕ್ತಿಕ ನೆಲೆಯಲ್ಲಿ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತ ಇರುತ್ತಾರೆ ಎಂಬುದು ತಾರೆಯ ನೆಲೆಯಿಂದ ಅಭಿವ್ಯಕ್ತವಾಗಿದೆ.

'ಶ್ರೀರಾಮ ಪಟ್ಟಾಭಿಷೇಕ'ದಲ್ಲಿ ತಾರೆಯ ಪಾತ್ರ ಬುದ್ಧಿಕೌಶಲ್ಯದಿಂದ ಕೂಡಿದೆ. ತಾರೆಗೆ ಬದುಕಿನ ಕುರಿತ ವಾಸ್ತವ ಪ್ರಜ್ಞೆ ಇದೆ. ತಾರೆ ಮತ್ತು ರುಮೆಯರು ಒಡಹುಟ್ಟಿದವರು. ತಾರೆಗೆ ರುಮೆಯ ವಿಚಾರದಲ್ಲಿ ಅನುಕಂಪ ಇದೆ. ಬಂಧುತ್ವದ ಪರಿಕಲ್ಪನೆಯನ್ನು ಇಲ್ಲಿ ಗಟ್ಟಿಗೊಳಿಸಲಾಗಿದೆ. ಅಣ್ಣ ತೀರಿದಾಗ ಅವನ ಹೆಂಡತಿ ತಮ್ಮನೊಂದಿಗೆ ಸೇರುವುದು ರೂಢಿ. ಅಂತೆಯೇ ತಮ್ಮ ತೀರಿದಾಗ ಅವನ ಹೆಂಡತಿ ಅಣ್ಣನೊಡನೆ ಸೇರುವುದು ರೂಢಿ. ಆದರೆ ಇಲ್ಲಿ ತಾರೆಗೆ ಈ ಉದ್ದೇಶ ಇಲ್ಲ. ವಾಲಿ ಅಗಲಿದಾಗ ತಾರೆ ಈ ತೀರ್ಮಾನ ಕೈಗೊಂಡಿಲ್ಲ. ತನ್ನ ಬದುಕಿಗಿಂತ ಇಲ್ಲಿ ತಾರೆಗೆ ರುಮೆಯ ಬದುಕು

ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ತಾರೆಯ ಪ್ರಜ್ಞಾಪೂರ್ವಕ ಮನಸ್ಥಿತಿ ಕೆಲಸ ಮಾಡಿರುವುದು ಸ್ಪಷ್ಟವಾಗುತ್ತದೆ. ತಂಗಿ ಮತ್ತು ಮೈದುನನ ಬದುಕು ಸಂತೋಷದಿಂದ ಕೂಡಿರಬೇಕು ಎಂಬ ಉದ್ದೇಶ ಆಕೆಗೆ ಇತ್ತು. ಸ್ವಹಿತವನ್ನು ಲೆಕ್ಕಿಸದ ಆಕೆ ಸ್ವಾರ್ಥದಿಂದ ದೂರ ಉಳಿದಿದ್ದಾಳೆ. ಹಾಗಾಗಿ ವಾಲಿ ತನ್ನನ್ನು ಅಗಲಿದಾಗ ತಾರೆ ಎಲ್ಲಿಯೂ ಸುಗ್ರೀವನನ್ನು ಬಯಸಲಿಲ್ಲ. ತಾರೆಯ ವಿಚಾರದಲ್ಲಿ ಕವಿ ಸಾಂಪ್ರದಾಯಿಕ ನಿರೂಪಣೆಯನ್ನು ಒಡೆದು ಹೊಸಪರಿಕಲ್ಪನೆಯನ್ನು ಕಟ್ಟಿದ್ದಾರೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರೆ ಬುದ್ಧಿಶಕ್ತಿಯ ನೆಲೆಯಿಂದ ಕಾಣಿಸಿದ್ದಾಳೆ. ವಸ್ತುಸ್ಥಿತಿಯನ್ನು ಅರ್ಥೈಸಿದ ವ್ಯಕ್ತಿತ್ವ ತಾರೆಯದು. ವಾಲಿಯ ಕ್ರೌರ್ಯದ ಪರಿಣಾಮದಿಂದಾಗಿ ತಾನು ನರಳುವಂತಾಯಿತು ಎಂದು ವಾಸ್ತವತೆಯ ನೆಲೆಯಲ್ಲಿ ತಾರೆ ಪರಿತಪಿಸುತ್ತಾಳೆ. ವಾಲಿಯನ್ನು ಆತ್ಮಗೌರವದ ನೆಲೆಯಲ್ಲಿ ಸರಿದಾರಿಗೆ ತರುವ ಪ್ರಯತ್ನ ಮಾಡಿದ್ದಾಳೆ. ವಾಲಿವಧೆಯಿಂದ ನೊಂದ ತಾರೆ ಆ ಕ್ಷಣದಲ್ಲಿ ರಾಮನನ್ನು ಹೀಯಾಳಿಸಿ ಪ್ರತಿಭಟಿಸುತ್ತಾಳೆ. ಆದರೆ ರಾಮತ್ವವನ್ನು ಅರಿಯುವ ಸಾಮರ್ಥ್ಯ ಅವಳಲ್ಲಿ ಇದೆ. 'ಶ್ರೀ ರಾಮಾಯಣದರ್ಶನಂ' ಮಹಾಕಾವ್ಯದ ತಾರೆಯ ಪಾತ್ರ ಸಾಂಪ್ರದಾಯಿಕ ಚಿಂತನೆಯನ್ನು ಪ್ರೋತ್ಸಾಹಿಸುತ್ತದೆ. ಮುತ್ತೈದೆತನದ ಉಳಿವಿಕೆಗಾಗಿ ವಾಲಿಯನ್ನು ರಾಮ ಕ್ಷಮಿಸಬೇಕು ಎಂದು ತಾರೆ ಅಪೇಕ್ಷಿಸುತ್ತಾಳೆ. ಆದರೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಈ ಸಾಂಪ್ರದಾಯಿಕ ಚಿಂತನೆಯನ್ನು ಒಡೆದಿದ್ದಾರೆ. ಮುತ್ತೈದೆತನ, ಪಾತಿವ್ರತ್ಯ, ಮೋಕ್ಷ, ಜನ್ಮಾಂತರಗಳ ಪರಿಕಲ್ಪನೆಗೆ ಇಲ್ಲಿ ಆದ್ಯತೆ ಇಲ್ಲ. ತಪ್ಪಿಗೆ ಶಿಕ್ಷೆ ವಿಧಿಸಲೇಬೇಕು ಎಂಬ ಆಶಯ ವ್ಯಕ್ತವಾಗಿದೆ. ಹಾಗಾಗಿ ವಾಲಿಯ ತಪ್ಪುಗಳು ತಾರೆಗೆ ಮನದಟ್ಟಾಗಿದೆ. 'ಶ್ರೀರಾಮ ಪರೀಕ್ಷಣಂ' ಮಹಾಕಾವ್ಯದ ತಾರೆಗೂ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರೆಗೂ ಸ್ವಲ್ಪಮಟ್ಟಿನ ಸಾಮ್ಯತೆ ಇದೆ. ಪತಿ ವಿಯೋಗದಿಂದ ಹತಾಶೆಗೆ ಒಳಗಾದ ತಾರೆ ರಾಮನಲ್ಲಿ ಪ್ರತಿಕ್ರಿಯಿಸುವ ರೀತಿ ಎರಡು ಕಾವ್ಯಗಳಲ್ಲೂ ಒಂದೇ ತೆರನಾದದ್ದು. ಆದರೆ ರಾಮನಿಗೆ ಸವಾಲನ್ನು ಎಸಗಿದ ತಾರೆ 'ಶ್ರೀರಾಮ ಪರೀಕ್ಷಣಂ'ನಲ್ಲಿ ರಾಮನೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದಿಲ್ಲ. ತನ್ನ ಪತಿಯ ಕ್ರೌರ್ಯವನ್ನು ಬಗೆಯುವಲ್ಲಿ ವಿಫಲಳಾಗಿದ್ದಾಳೆ. ಹಾಗಾಗಿ ಪತಿಪ್ರೇಮದ ಎದುರು ಉಳಿದವು ಕ್ಷುಲ್ಲಕವಾಗಿ ಕಾಣುತ್ತದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ತಾರೆ ಒಮ್ಮೆ ಧೃತಿಗೆಟ್ಟರೂ ಪುನಃ ಚೇತರಿಸಿಕೊಳ್ಳುತ್ತಾಳೆ. ವಾಲಿಯ ಅನುಪಸ್ಥಿತಿಯಲ್ಲಿ ಧೈರ್ಯದಿಂದ ಆಡಳಿತ ನಿರ್ವಹಿಸುತ್ತಾಳೆ. ಉತ್ತಮ ರಾಜನೀತಿಜ್ಞೆಯಾದ ತಾರೆಗೆ ಮಹಾನ್ವೇಷಣಂ ಮಹಾಕಾವ್ಯದಲ್ಲಿ ವಿಶೇಷ ಸ್ಥಾನವಿದೆ. ಹೀಗೆ ಇತರ ರಾಮಾಯಣ ಪಠ್ಯಗಳೊಂದಿಗೆ ಮಹಾನ್ವೇಷಣಂ ಮಹಾಕಾವ್ಯವನ್ನು ಮುಖಾಮುಖಿಯಾಗಿರಿಸಿದಾಗ ತಾರೆಯ ಅನನ್ಯತೆ ವ್ಯಕ್ತವಾಗುತ್ತದೆ.

ಮನುಷ್ಯರನ್ನು ದೈವಿಕ ನೆಲೆಯಲ್ಲಿ ನಿರೂಪಿಸುವ ಅಥವಾ ರಾಕ್ಷಸತ್ವದ ನೆಲೆಯಲ್ಲಿ ನಿರೂಪಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯಕ್ಕೆ ಇಲ್ಲ. ಆದರೆ ಮಾನವನಲ್ಲಿ ಅಡಕವಾಗಿರುವ ಪಾಶವೀ ಪ್ರವೃತ್ತಿಗಳನ್ನು ಹೊಡೆದೋಡಿಸುವ ಉದ್ದೇಶವಿದೆ. ಸಾತ್ವಿಕ ಗುಣಗಳನ್ನು ಆರೋಪಿಸುತ್ತಾ ರಾಮಾಯಣದ ಪಾತ್ರಗಳನ್ನು ದೈವಿಕ ನೆಲೆಯಿಂದ ನಿರೂಪಿಸುವ ಉದ್ದೇಶ ಕವಿಗೆ ಇಲ್ಲ. ಮಾನವನಲ್ಲಿ ಅಂತರ್ಗತವಾಗಿರುವ ಮಾನವೀಯ ನೆಲೆಗಳನ್ನು ಅನುಷ್ಠಾನಕ್ಕೆ ತಂದು ನಿರೂಪಿಸುವ ಉದ್ದೇಶ ಕವಿಯದು. ಈ ನಿಟ್ಟಿನಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಮನುಷ್ಯರ ಗುಣ-ದುರ್ಗುಣಗಳನ್ನು ಹೇಳುವ ಉದ್ದೇಶ ಹೊಂದಿದೆ. ಮನುಷ್ಯನಲ್ಲಿ ಅಂತರ್ಗತವಾಗಿರುವ ಸಾತ್ವಿಕ ಗುಣ ಮತ್ತು ತೇಜಸ್ಸು ಆತನ ದುರ್ಗುಣಗಳನ್ನು ನಾಶಪಡಿಸಬೇಕು ಎಂಬ ಆಶಯವನ್ನು ಮಹಾನ್ವೇಷಣಂ ಮಹಾಕಾವ್ಯ ಅಭಿವ್ಯಕ್ತಗೊಳಿಸಿದೆ. ವ್ಯಕ್ತಿಬದುಕಿನ ಉದ್ಧಾರ ಮತ್ತು ನಾಶ ಆತನ ಕೈಯಲ್ಲೇ ಇದೆ ಎಂಬುದನ್ನು ಈ ಮಹಾಕಾವ್ಯ ಸಾಬೀತುಪಡಿಸುತ್ತದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿಯಲ್ಲಿ ಅಡಕವಾಗಿರುವ ಚೇತನಶಕ್ತಿಯ ನೆಲೆಗಳನ್ನು ಪರಿಗ್ರಹಿಸುತ್ತಾ ಆತನ ಅಂತರಂಗದ ಶಕ್ತಿಯನ್ನು ಕೇಂದ್ರಕ್ಕೆ ತಂದು ನಿರೂಪಿಸುತ್ತಾ ಕಾವ್ಯ ಮುಂದೆ ಸಾಗುತ್ತದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಮೌಖಿಕ ರಾಮಾಯಣ ಮತ್ತು ಲಿಖಿತ ರಾಮಾಯಣ ಕಾವ್ಯಗಳೊಂದಿಗೆ ಮುಖಾಮುಖಿಯಾಗಿ ಅಧ್ಯಯನ ನಡೆಸಿದ ಪರಿಣಾಮ ಮಹಾನ್ವೇಷಣಂ ಮಹಾಕಾವ್ಯದ ಅನನ್ಯತೆಯನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಮೌಖಿಕ ಮತ್ತು ಲಿಖಿತ ರಾಮಾಯಣ ಪರಂಪರೆಯೊಂದಿಗೆ ಮಹಾನ್ವೇಷಣಂ ಮಹಾಕಾವ್ಯವನ್ನು ಮುಖಾಮುಖಿಯಾಗಿಸಿ ಇರಿಸಿದಾಗ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತು ಸ್ತ್ರೀತ್ವವನ್ನು ಮೈಗೂಡಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಕವಿಯ ಶೋಷಿತಪರ, ಸ್ತ್ರೀಪರ ಕಾಳಜಿ ಇಲ್ಲಿನ ಸ್ತ್ರೀ ಕಥನವನ್ನು ಕಟ್ಟಿದೆ.

ಶಿಷ್ಟ ರಾಮಾಯಣ ಪರಂಪರೆ ಮಂಡೋದರಿ, ತಾರಾ, ಅಹಲ್ಯೆ ಮತ್ತು ಸೀತೆಯನ್ನು ಪತಿವ್ರತಾ ಶಿರೋಮಣಿಯರು ಎಂಬಂತೆ ನಿರೂಪಿಸಿದೆ. ಇದಕ್ಕೆ ಅನುಗುಣವಾಗಿ ಕನ್ನಡದ ಬಹುತೇಕ ರಾಮಾಯಣಗಳು ಈ ಮಹಿಳಾ ಪಾತ್ರಗಳನ್ನು ಪಾತಿವ್ರತ್ಯದ ನೆಲೆಯಲ್ಲಿಯೇ ಕಂಡಿದೆ. ಮಹಾನ್ವೇಷಣಂ ಮಹಾಕಾವ್ಯದಲ್ಲಿಯೂ ಈ ನಿರೂಪಣೆಯನ್ನು ಕಾಣಬಹುದು. ಆದರೆ ಪಾತಿವ್ರತ್ಯದ ಕುರಿತು ಇರುವ ಸೀಮಿತ ಚೌಕಟ್ಟನ್ನು ಕವಿ ಮೊಯಿಲಿಯವರು ಒಡೆದಿದ್ದಾರೆ. ದೈಹಿಕ ಪಾತಿವ್ರತ್ಯದೊಂದಿಗೆ ಮಾನಸಿಕ ಪಾತಿವ್ರತ್ಯಕ್ಕೂ ಆದ್ಯತೆ ನೀಡುತ್ತಾ ಪಾತಿವ್ರತ್ಯಕ್ಕೆ ಹೊಸಭಾಷ್ಯ ಬರೆದಿದ್ದಾರೆ. ಈ ನೆಲೆಯಲ್ಲಿ ಪಾತಿವ್ರತ್ಯದ ಕುರಿತು ಮಹಾನ್ವೇಷಣಂ ಮಹಾಕಾವ್ಯದ ದೃಷ್ಟಿಕೋನ ಹಿರಿದಾಗಿದೆ.

# ಆಕರ ಸೂಚಿ

೧. ವೆಂಕಣ್ಣಯ್ಯ ಟಿ.ಎಸ್. ೧೯೮೨
ಪ್ರಾಚೀನ ಸಾಹಿತ್ಯ (ಕನ್ನಡಾನುವಾದ)
ಪ್ರಥಮ ವಿಶ್ವ ಸಮ್ಮೇಳನ ಕರ್ನಾಟಕ ಸರ್ಕಾರ

# ಅಧ್ಯಾಯ ೨

# ಶೋಧನ

ರಾಮಾಯಣ ಪರಂಪರೆ ಜನಮನದಲ್ಲಿ ಶಾಶ್ವತವಾಗಿ ನೆಲೆಯೂರಬಲ್ಲ ಸಾಹಿತ್ಯ, ರಾಜಕೀಯ, ಧಾರ್ಮಿಕ, ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ಅನಾವರಣ ಮಾಡುವ ಉದ್ದೇಶ ರಾಮಾಯಣ ಕಾವ್ಯಕ್ಕೆ ಇದೆ. ತಾತ್ವಿಕ ಚಿಂತನೆಗಳನ್ನು ನೈತಿಕ ನೆಲೆಯಲ್ಲಿ ನಿರೂಪಿಸಿ ಮಾನವ ಬದುಕಿನ ವಿಧಿ ವಿಧಾನಗಳನ್ನು ಅನಾವರಣಗೊಳಿಸುವ ಉದ್ದೇಶ ಮಹಾಕಾವ್ಯಗಳಿಗೆ ಇದೆ. ರಾಮಾಯಣ ಎಂಬುದು ಕೇವಲ ರಾಮ, ರಾವಣರ ಯುದ್ಧ ವಿಜಯದ ನಿರೂಪಣೆಯಲ್ಲ. ಭಿನ್ನ ದೃಷ್ಟಿಕೋನದಿಂದ ತೊಡಗಿ ವಿಶಾಲತೆಯ ನೆಲೆಯಲ್ಲಿ ಮಾನವ ಬದುಕಿನ ಆಳ-ಅಗಲಗಳನ್ನು ಪರಿಗ್ರಹಿಸುವ ಶಕ್ತಿ ರಾಮಾಯಣ ಮಹಾಕಾವ್ಯಗಳಿಗೆ ಇದೆ. ಇಂಥ ಮಹಾಕಾವ್ಯಗಳಲ್ಲಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಕೂಡಾ ಒಂದು.

ಎಂ. ವೀರಪ್ಪ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಬದುಕಿನ ಶೋಧವಿದೆ. ಅನ್ವೇಷಣೆಯ ಪಥದಲ್ಲಿ ಸಾಗುವ ಪಾತ್ರಗಳು ಬದುಕಿನ ಸಾರ್ಥಕತೆಯ ದಿಕ್ಕನ್ನು ಕಂಡುಕೊಳ್ಳುತ್ತವೆ. ವಾಸ್ತವಬದುಕಿಗೆ ತೀರಾ ಸಮೀಪದಲ್ಲಿರುವ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಅತಿರೇಕದ ಪ್ರದರ್ಶನವಿಲ್ಲ. ಸಮಕಾಲೀನ ಸಂದರ್ಭದ ನೈಜಚಿತ್ರಣವಿದೆ. ಮಾನವಬದುಕಿನ ಚಂಚಲತೆ, ದಿಟ್ಟತೆ ಏಕಾಗ್ರತೆ ಇಲ್ಲಿ ಅಭಿವ್ಯಕ್ತಗೊಂಡಿದೆ. ದೀನದಲಿತರ, ಸ್ತ್ರೀಯರ ಸಂವೇದನೆಯನ್ನು ಇಲ್ಲಿ ಪರಿಗ್ರಹಿಸಲಾಗಿದೆ. ಮಹಿಳಾ ಪಾತ್ರಗಳ ಬುದ್ಧಿಮತ್ತೆ, ಚಿಂತನಶೀಲ ಪ್ರವೃತ್ತಿ, ಬುದ್ಧಿಪ್ರೌಢಿಮೆಗೆ ಸಾಕ್ಷಿಯಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳಿಗೆ ವೈಯಕ್ತಿಕ ನೆಲೆಯಲ್ಲಿ ತೀರ್ಮಾನ ಕೈಗೊಳ್ಳುವ ಅವಕಾಶ ಕಲ್ಪಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ವೈಚಾರಿಕ ನಿಲುವಿದೆ. ಬದುಕಿನ ಕುರಿತ ಅನ್ವೇಷಣೆ ಇದೆ. ಈ ಶೋಧ ಕೇವಲ ರಾಜವೈಭೋಗದ ಬದುಕನ್ನು, ವನವಾಸದ ಬದುಕನ್ನು ನಿರೂಪಿಸುವ ಮಟ್ಟಕ್ಕೆ ನಿಂತುಬಿಡುವುದಿಲ್ಲ. ಸ್ತ್ರೀಸಂವೇದನಾಶೀಲತೆಯನ್ನು ಒಳಗೊಂಡು ಅದನ್ನೂ ಮೀರಿ ಮಾನವ ಬದುಕನ್ನು ಕಟ್ಟುವ ನೆಲೆಯಲ್ಲಿ ಸಾಗುತ್ತದೆ. ಹಾಗಾಗಿ ಈ ಬಗೆಯ ಶೋಧ ವ್ಯಕ್ತಿಯ ಕಷ್ಟ ಸುಖಗಳ ಶೋಧ ಮಾತ್ರವಲ್ಲ ಸಮಗ್ರ ಬದುಕಿನ ಶೋಧವೂ ಹೌದು.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾ ಜಗತ್ತಿನ ಸಾಹಿತ್ಯಿಕ, ಸಾಂಸ್ಕೃತಿಕ, ರಾಜಕೀಯ ಶಕ್ತಿ ಮತ್ತು ಚೈತನ್ಯದ ನೆಲೆಗಳನ್ನು ಶೋಧಿಸಲಾಗಿದೆ. ಕವಿಯ ಅಂತರಂಗ ಶಕ್ತಿಯಿಂದ ಹೊರಹೊಮ್ಮಿದ ವಿನೂತನ ಪಾತ್ರಗಳೂ ಇಲ್ಲಿ ಸತ್ವಪೂರ್ಣವಾಗಿವೆ. ಈ ಸತ್ವಪೂರ್ಣತೆಯನ್ನು ಮಹಾಕಾವ್ಯದ ಹಿನ್ನೆಲೆಯಲ್ಲಿ ಶೋಧಿಸುತ್ತಾ ಮಹಿಳಾ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸಲಾಗಿದೆ. ಬದುಕಿನ ಅರ್ಥವಂತಿಕೆಯ ಕುರಿತು ಮಾತಾಡುವ, ಸಂದರ್ಭ ಹಾಗೂ ಸನ್ನಿವೇಶಗಳಿಗೆ ಪ್ರೌಢನೆಲೆಯಲ್ಲಿ ಪ್ರತಿಕ್ರಿಯಿಸುವ ಈ ಮಹಾಕಾವ್ಯದ ಮಹಿಳಾ ಲೋಕದ ಅನನ್ಯತೆಯನ್ನು ಕೇಂದ್ರಕ್ಕೆ ತರಲಾಗಿದೆ. ಇಲ್ಲಿನ ಬಹುತೇಕ ಮಹಿಳಾ ಪಾತ್ರಗಳನ್ನು ನನ್ನ ಅಧ್ಯಯನಕ್ಕೆ ತೊಡಗಿಸಿಕೊಂಡು ಅಧ್ಯಯನದ ವ್ಯಾಪಕತೆಯನ್ನು ಹೆಚ್ಚಿಸಿಕೊಳ್ಳಲಾಗಿದೆ. ರಾಮಾಯಣದ ಮಹಿಳಾ ಜಗತ್ತನ್ನು ಕೇವಲ ಪೌರಾಣಿಕ ನೆಲೆಯಿಂದ ನೋಡದೆ ಪ್ರಸ್ತುತ ಸಂದರ್ಭದಲ್ಲಿಟ್ಟು ಅಭ್ಯಸಿಸಲಾಗಿದೆ. ಇದರ ಪರಿಣಾಮ ರಾಮಾಯಣದ ಹೊಸ ನೋಟ ಸಾಧ್ಯವಾಗಿದೆ.

ರಾಮಾಯಣಗಳ ಕುರಿತು ಈಗಾಗಲೇ ಬಹುತೇಕ ಅಧ್ಯಯನಗಳು ನಡೆದಿದ್ದು ಈ ಅಧ್ಯಯನಗಳನ್ನು ನನ್ನ ಅಭ್ಯಾಸಕ್ಕೆ ಪೂರಕವಾಗಿ ಬಳಸಲಾಗಿದೆ. 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯವನ್ನು ಸ್ತ್ರೀನೋಟದಿಂದ ಕಂಡ ಪರಿಣಾಮ ರಾಮಾಯಣದ ಹೊಸ ನೋಟ ಸಾಧ್ಯವಾಗಿದೆ. ಈ ಮೂಲಕ ಶತ ಶತಮಾನಗಳಿಂದ ತುಳಿತಕ್ಕೆ ಒಳಗಾದ ಮಹಿಳಾಸಮುದಾಯದ ಅಂತರಂಗಶಕ್ತಿ ಮತ್ತು ಸಾಧನೆಯ ಸಾಧ್ಯತೆಯ ನೆಲೆಗಳನ್ನು ಕೇಂದ್ರಕ್ಕೆ ತಂದು ಶೋಧಿಸಲಾಗಿದೆ. ಲಿಖಿತ ಮತ್ತು ಮೌಖಿಕ ರಾಮಾಯಣಗಳ ಮಹಿಳಾಸಮುದಾಯ ಸಂದರ್ಭ, ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವ ರೀತಿಗೂ, ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಸಮುದಾಯ ಪ್ರತಿಕ್ರಿಯಿಸುವ ರೀತಿಗೂ ವ್ಯತ್ಯಾಸವಿದೆ. ಈ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತಿನ ಅನನ್ಯತೆಯನ್ನು ನನ್ನ ಅಧ್ಯಯನದ ಮೂಲಕ ಶೋಧಿಸಲಾಗಿದೆ.

ರಾಮಾಯಣದ ಮಹಿಳಾ ಜಗತ್ತು ಸಾಂಪ್ರದಾಯಿಕ ಮಾದರಿಯಲ್ಲೇ ಚಿಂತನೆ ನಡೆಸಬೇಕು ಎಂಬ ಏಕಪಕ್ಷೀಯ ಚಿಂತನೆಯನ್ನು ಮಹಾನ್ವೇಷಣಂ ಮಹಾಕಾವ್ಯ ಹುಸಿಗೊಳಿಸಿದೆ. ಇಲ್ಲಿನ ಮಹಿಳಾ ಪಾತ್ರಗಳು ಸ್ವತಂತ್ರ ಅಭಿವ್ಯಕ್ತಿಯ ಅವಕಾಶಗಳನ್ನು ಪಡೆದಿವೆ. ಈ ಅವಕಾಶ ಸಾರ್ವಕಾಲಿಕವಾಗಬೇಕು ಎಂಬ ಆಶಯ ಇಲ್ಲಿ ಕವಿಯದ್ದು. ಹೀಗೆ ಪ್ರಸ್ತುತ ಮಹಿಳಾ ಜಗತ್ತಿನ ಸ್ಥಿತಿಗತಿಯ ಅನಾವರಣದೊಂದಿಗೆ ಭವಿಷ್ಯ ಸುಧಾರಣಾ ಆಶಯ ಹೊತ್ತ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತನ್ನು ಕೇಂದ್ರೀಕರಿಸಿ ನನ್ನ ಅಧ್ಯಯನ ಸಾಗಿದೆ.

ಮಹಾನ್ವೇಷಣಂ ಮಹಾಕಾವ್ಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹಿಳಾ ಪಾತ್ರಗಳು ವ್ಯಕ್ತಪಡಿಸುವ ನಿಲುವುಗಳನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಪ್ರಸ್ತುತ ಮಹಿಳಾ ಸ್ಥಿತಿಗತಿ, ಸಂದರ್ಭ ಮತ್ತು ಸನ್ನಿವೇಶಗಳಿಗೆ ಇಲ್ಲಿನ ಪಾತ್ರಗಳು ಪ್ರತಿಕ್ರಿಯಿಸುವ ರೀತಿ ಮತ್ತು ಪ್ರತಿಕ್ರಿಯೆಗೆ ಕಾರಣ ಹಾಗೂ ಪರಿಣಾಮಗಳನ್ನು ಕಂಡುಕೊಳ್ಳಲಾಗಿದೆ. ಈ ಮಹಾಕಾವ್ಯದ ಸ್ತ್ರೀಲೋಕದ ಸಂಕಲ್ಪಶಕ್ತಿ ಹಿರಿದಾದುದು. ಈ ಸಂಕಲ್ಪಶಕ್ತಿಯ ಪರಿಣಾಮದಿಂದಾಗಿ ರಾಮಾಯಣದ ಮಹಿಳಾ ಪಾತ್ರಗಳು ತಮ್ಮದೇ ಆದ ಅನನ್ಯತೆಯನ್ನು ಕಂಡುಕೊಂಡಿವೆ. ಈ ಮಹಾಕಾವ್ಯದ ಸ್ತ್ರೀ ಜಗತ್ತಿನ ಅಂತರಂಗದ ಶಕ್ತಿ, ಅಸಾಧಾರಣಾ ವ್ಯಕ್ತಿತ್ವ, ಪ್ರೌಢ ನೆಲೆಯ ಚಿಂತನೆ, ವಿಶಾಲ ದೃಷ್ಟಿಕೋನ ಮತ್ತು ದಿಟ್ಟತೆಯ ನೆಲೆಗಳನ್ನು ಶೋಧಿಸಲಾಗಿದೆ.

ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಸಮುದಾಯಕ್ಕೆ ರಾಷ್ಟ್ರೀಯಪ್ರಜ್ಞೆ ಮತ್ತು ಭಾವೈಕ್ಯಪ್ರಜ್ಞೆ ಇದೆ. ಈ ಪ್ರಜ್ಞೆ ಜಾತಿ, ಮತ, ಲಿಂಗ ಭೇದರಹಿತ ಸಮಾಜ ನಿರ್ಮಾಣದ ಉದಾತ್ತ ಆಶಯ ಹೊತ್ತಿದೆ. ಈ ಚಿಂತನೆಗಳನ್ನು ಕವಿ ಮಹಿಳಾ ಪಾತ್ರಗಳ ಮೂಲಕವೇ ಅನಾವರಣ ಮಾಡಿರುವುದು ಈ ಕಾವ್ಯದ ವಿಶಿಷ್ಟತೆ. ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ದೇಶೀಯ ಸಂಸ್ಕೃತಿ ವಿನಾಶದ ಅಂಚಿನಲ್ಲಿದೆ. ಈ ಅನಾಹುತವನ್ನು ತಪ್ಪಿಸುವ ಉದ್ದೇಶ ಇಲ್ಲಿ ಕವಿಗೆ ಮುಖ್ಯ. ಹಾಗಾಗಿ ಕವಿ ತಮ್ಮ ಚಿಂತನೆಗಳನ್ನು ರಾಮಾಯಣದ ಮಹಿಳಾ ಪಾತ್ರಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ಈ ಚಿಂತನೆ ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಾಗಿದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಮಹಿಳಾ ಜಗತ್ತು ಪ್ರತಿಪಾದಿಸುವ ರಾಷ್ಟ್ರೀಯ ಐಕ್ಯತಾಭಾವವನ್ನು ಈ ಅಧ್ಯಯನದಲ್ಲಿ ಶೋಧಿಸಲಾಗಿದೆ. ಇದರೊಂದಿಗೆ ಮಹಿಳಾ ಜಗತ್ತಿನ ಚಿಂತನಾಲಹರಿ ಮತ್ತು ಆಲೋಚನಾಕ್ರಮವನ್ನು ಕೇಂದ್ರಕ್ಕೆ ತರಲಾಗಿದೆ. ಇದರೊಂದಿಗೆ ಮಹಿಳೆಯರ ಬುದ್ಧಿಶಕ್ತಿಯ ನೆಲೆಗಳನ್ನು ಶೋಧಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಪ್ರಸ್ತುತ ಮಹಿಳಾಸಮುದಾಯದ ಸ್ಥಿತಿಗತಿಯ ಅನಾವರಣವಿದೆ. ಸ್ತ್ರೀಸಮುದಾಯದ ಅಂತರ್‌ಶಕ್ತಿ ಹಾಗೂ ನಿರೂಪಿಸುವ ಮೂಲಕ ವಿಭಿನ್ನ ಕ್ಷೇತ್ರಗಳಲ್ಲಿ ಮಹಿಳಾಸಮುದಾಯದ ಸಾಧನೆಯ ಸಾಧ್ಯತೆಯ ನೆಲೆಗಳನ್ನು ಶೋಧಿಸಲು ಸಾಧ್ಯವಾಗಿದೆ. ಪುರಾಣ ಪ್ರಜ್ಞೆಯಿಂದ ಮತ್ತು ಐತಿಹಾಸಿಕ ನೆಲೆಯಿಂದ ಹಾಗೂ ದೈವಿಕ ನೆಲೆಯಿಂದ ರಾಮಾಯಣದ ಪುರುಷ ಪಾತ್ರಗಳನ್ನು ಕಟ್ಟುವ ಸೀಮಿತ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯಕ್ಕೆ ಇಲ್ಲ. ಸ್ತ್ರೀ–ಪುರುಷ ಸಮಾನತೆಯ ಆಶಯವನ್ನು ಮೂಲ ತಳಹದಿಯನ್ನಾಗಿ ಇರಿಸಿಕೊಂಡು ಸಾಮಾಜಿಕ ಸಮಾನತೆಯನ್ನು ಸಾರ್ವತ್ರಿಕಗೊಳಿಸುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಲೋಕದ ಬದುಕು

ಬವಣೆಯನ್ನು ವಿಶಾಲ ದೃಷ್ಟಿಕೋನದ ನೆಲೆಯಲ್ಲಿ ಪರಿಗ್ರಹಿಸಲಾಗಿದೆ. ಈ ಮೂಲಕ ತಾತ್ಸಾರಕ್ಕೆ ಒಳಗಾದ ಮಹಿಳಾಜಗತ್ತಿನ ಮಾನಸಿಕಶಕ್ತಿ ಹಾಗೂ ಅಂತರಂಗದ ಶಕ್ತಿಯನ್ನು ಈ ಕಾವ್ಯದ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ. ಪ್ರಸ್ತುತ ಸಂದರ್ಭಕ್ಕೆ ಪ್ರತಿಕ್ರಿಯೆಯಾಗಿ ಇಲ್ಲಿನ ಸನ್ನಿವೇಶಗಳು ಒಡಮೂಡಿದ್ದು ವಿಶಾಲ ಮನೋಭಾವದ ನೆಲೆಯಲ್ಲಿ ಬುದ್ಧಿಶಕ್ತಿಯ ಪ್ರಭಾವದಿಂದ ಇಲ್ಲಿನ ಮಹಿಳಾಸಮುದಾಯ ಪ್ರತಿಕ್ರಿಯಿಸಿವೆ. ಈ ಪ್ರತಿಕ್ರಿಯೆಯ ಹಿಂದೆ ಯಾವುದೇ ಪೂರ್ವಗ್ರಹಗಳಾಗಲಿ, ಮೌಢ್ಯತೆಗಳಾಗಲಿ ಪ್ರಭಾವಿಸಿಲ್ಲ ಎಂದೇ ಹೇಳಬೇಕು. ಹಾಗಾಗಿ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಜಗತ್ತಿನ ಮೇಲೆ ಬುದ್ಧಿಜ್ಞಾನದ ಪ್ರಭಾವವಿರುವುದು ಸ್ಪಷ್ಟವಾಗುತ್ತದೆ. ಹೀಗೆ ನಿರೂಪಿತವಾದ ಮಹಿಳಾಲೋಕದ ಉದ್ದೇಶ, ಸಾಧನೆ ಹಾಗೂ ತಪಸ್‌ಶಕ್ತಿಯನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ಶೋಧಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಪಾತ್ರನಿರೂಪಣೆಯಲ್ಲಿ ಕವಿ ಉದಾರತೆಯೊಂದಿಗೆ ಸಂಯಮವನ್ನು ತಾಳಿದ್ದಾರೆ. ಈ ಸಂಯಮವನ್ನು ಕಾವ್ಯದುದ್ದಕ್ಕೂ ಉಳಿಸಿಕೊಳ್ಳುವಲ್ಲಿ ಕವಿ ಯಶಸ್ವಿಯಾಗಿದ್ದಾರೆ ಎಂದೇ ಹೇಳಬೇಕು. ಹೀಗೆ ನಿರೂಪಿಸುವ ಹಿಂದೆ ಕವಿಗಿರುವ ಅಂತರಂಗ ತುಡಿತ, ಮಾನಸಿಕ ಸ್ಥಿತಿ ಹಾಗೂ ಉದ್ದೇಶ ವ್ಯಕ್ತವಾಗುತ್ತದೆ. ಸಚ್ಚಾರಿತ್ರ್ಯದ ನೆಲೆಯಲ್ಲಿ ನಿರೂಪಿತವಾದ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಸಮುದಾಯ ಎಲ್ಲಿಯೂ ಸ್ಥಿತಪ್ರಜ್ಞೆಯನ್ನು ಮೀರಿ ವರ್ತಿಸಿಲ್ಲ. ದೈಹಿಕ ಪಾತಿವ್ರತ್ಯದೊಂದಿಗೆ ಚಿತ್ತಶುದ್ಧಿಯನ್ನು ಉಳಿಸಿಕೊಂಡಿವೆ. ಈ ಮೂಲಕ ಇಲ್ಲಿನ ಮಹಿಳಾ ಪಾತ್ರಗಳು ಸಚ್ಚಾರಿತ್ರ್ಯದ ನೆಲೆಯಲ್ಲಿಯೇ ಕಾಣಿಸಿಕೊಂಡಿವೆ. ಈ ಕಾಣುವಿಕೆಯ ಹಿಂದೆ ಕವಿಯ ನಿರ್ಮಲ ಮನಸ್ಥಿತಿ ಪ್ರಭಾವಿಸಿರುವುದು ಗಮನಾರ್ಹ. ಹೀಗೆ ನಿರೂಪಿತವಾದ ಮಹಿಳಾಸಮುದಾಯದ ಅಂತರಂಗದ ಸಂವೇದನೆ ಮತ್ತು ಶಕ್ತಿಯ ನೆಲೆಗಳನ್ನು 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮೇಲೆ ಕನ್ನಡದ ಇತರ ರಾಮಾಯಣ ಕಾವ್ಯಗಳ ಪ್ರಭಾವವಿದೆ. ಅಗತ್ಯವಿದ್ದಲ್ಲಿ ಮಾರ್ಪಾಟಿಸಿಕೊಂಡು ಕವಿ ಹೊಸತನವನ್ನು ಅಳವಡಿಸಿದ್ದಾರೆ. ಮಹಿಳಾ ಪಾತ್ರಗಳ ನಿರೂಪಣೆಗೆ ಸಂಬಂಧಿಸಿದಂತೆ ಮಹಾನ್ವೇಷಣಂ ಮಹಾಕಾವ್ಯದ ಕವಿ ಕನ್ನಡದ ಇತರ ರಾಮಾಯಣ ಕಾವ್ಯಗಳ ಯಥಾವತ್ತತೆಯನ್ನು ಉಳಿಸಿಕೊಂಡಿಲ್ಲ. ಹಾಗಾಗಿ ಅಲ್ಲಲ್ಲಿ ಹೊಸತನದ ಅಳವಡಿಸುವಿಕೆ ಸಾಧ್ಯವಾಗಿದೆ. ಈ ಹೊಸತನದ ಶೋಧದೊಂದಿಗೆ ಕನ್ನಡದ ಇತರ ರಾಮಾಯಣ ಕಾವ್ಯಗಳನ್ನು ಮಹಾನ್ವೇಷಣಂ ಮಹಾಕಾವ್ಯದೊಂದಿಗೆ ಮುಖಾಮುಖಿಯಾಗಿ ಅಭ್ಯಸಿಸಲಾಗಿದೆ. ಈ ಮೂಲಕ

ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳ ಸಾಮ್ಯ ಮತ್ತು ಭಿನ್ನತೆಯೊಂದಿಗೆ ಅನನ್ಯತೆಯನ್ನು ಶೋಧಿಸಲಾಗಿದೆ.

ಪ್ರಸ್ತುತ ಸಾಮಾಜಿಕ ಪಿಡುಗುಗಳ ನಿವಾರಣಾ ಆಶಯದೊಂದಿಗೆ ಅಸಮಾನ ಪರಿಕಲ್ಪನೆಯನ್ನು ತೊಡೆದು ಹಾಕುತ್ತಾ ಮಹಿಳಾ ಸ್ಥಿತಿಗತಿಯ ಸುಧಾರಣಾ ಆಶಯ ಹೊತ್ತ ಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'. ಜೀವಪರ ಚಿಂತನೆಯೊಂದಿಗೆ ಜೀವನಪರ ಸಂದೇಶ ಇಲ್ಲಿ ಮಿಳಿತಗೊಂಡಿದೆ. ಪುರಾಣದ ವಸ್ತುವನ್ನು ವಸ್ತುನಿಷ್ಠ ನೆಲೆಯಲ್ಲಿ ನೋಡುತ್ತಾ ಕವಿ ಹೊಸ ಕಥನವನ್ನೇ ಕಟ್ಟಿದ್ದಾರೆ. ಇದೊಂದು ದಲಿತಸಂವೇದನೆ ಮತ್ತು ಸ್ತ್ರೀಸಂವೇದನೆ ಉಳ್ಳ ಕಾವ್ಯವಾಗಿದ್ದು ಇಲ್ಲಿ ಆಧ್ಯಾತ್ಮ ಮತ್ತು ತತ್ತ್ವಜ್ಞಾನದ ಸಂಗಮವಿದೆ. ಸಾಂಪ್ರದಾಯಿಕ ಮನಸ್ಸು ಮತ್ತು ಆಧುನಿಕ ವೈಜ್ಞಾನಿಕ, ವೈಚಾರಿಕ ಮನಸ್ಸು ಚಿಂತಿಸುವ ಭಿನ್ನ ನೆಲೆಗಳನ್ನು ಮೊಯಿಲಿಯವರ ಕಾವ್ಯದ ಹಿನ್ನಲೆಯಲ್ಲಿ ಶೋಧಿಸಲು ಸಾಧ್ಯ.

'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಈ ಯುಗದ ಮೌಲ್ಯವನ್ನು ಪ್ರತಿಪಾದಿಸುತ್ತದೆ. ಭಾರತೀಯ ಸಮಕಾಲೀನ ರಾಮಾಯಣ ಮಹಾಕಾವ್ಯಗಳನ್ನು ಕವಿ ಅಧ್ಯಯನ ಮಾಡಿದ ಪರಿಣಾಮ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದಲ್ಲಿ ಹೊಸ ಅನ್ವೇಷಣೆ ಸಾಧ್ಯವಾಗಿದೆ ಸಾಧ್ಯವಾಗಿದೆ. ಭಾರತೀಯ ಸಂಪ್ರದಾಯ ಮತ್ತು ಸಂಸ್ಕೃತಿಯ ಕುರಿತು ಕವಿಗಿರುವ ವಿಶೇಷ ಗೌರವ ಕಾವ್ಯಮುಖೇನ ಅಭಿವ್ಯಕ್ತಗೊಂಡಿದೆ. ಪರಂಪರೆಯ ಶ್ರದ್ಧೆಯನ್ನು ಕಾವ್ಯದುದ್ದಕ್ಕೂ ಉಳಿಸಿಕೊಂಡ ಕವಿ ಎಲ್ಲೆಲ್ಲಿ ಮಾರ್ಪಾಟಿನ ಔಚಿತ್ಯ ಇದೆಯೋ ಅಲ್ಲೆಲ್ಲಾ ಮಾರ್ಪಾಟನ್ನು ತಂದಿದ್ದಾರೆ. ದೇಸಿಕಾವ್ಯದ ಸಂಕಥನವಾಗಿ ಮೂಡಿಬಂದ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ತನ್ನದೇ ಆದ ಅನನ್ಯತೆಯಿಂದ ಕನ್ನಡದ ವಿಶಿಷ್ಟ ರಾಮಾಯಣ ಕಾವ್ಯಗಳ ಸಾಲಿಗೆ ಸೇರುತ್ತದೆ. ಕವಿ ರಾಮಾಯಣದ ಕಥಾವಸ್ತುವನ್ನು ವಿನೂತನ ದೃಷ್ಟಿಯಿಂದ ಕಾಣುತ್ತಾ ವಿನೂತನ ವಿಚಾರಗಳನ್ನು ಅಳವಡಿಸುತ್ತಾ ರಾಮಾಯಣಕ್ಕೆ ಒಂದು ಹೊಸ ರೂಪುರೇಷೆಯನ್ನು ನೀಡಿದ್ದಾರೆ. ಹೀಗೆ ಉದ್ದಕ್ಕೂ ಮಾನವೀಯತೆಯನ್ನು ಪ್ರತಿಪಾದಿಸುವ ಮಹಾನ್ವೇಷಣಂ ಮಹಾಕಾವ್ಯದಲ್ಲಿ ಅಡಕವಾಗಿರುವ ಮಾನವತ್ವದ ನೆಲೆಗಳನ್ನು ನನ್ನ ಅಧ್ಯಯನದ ಮೂಲಕ ಶೋಧಿಸಲಾಗಿದೆ.

ಮಾನವಸಂಬಂಧಗಳು ನಶಿಸುತ್ತಿರುವ ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಮಹಾನ್ವೇಷಣಂ ಮಹಾಕಾವ್ಯ ಅದನ್ನು ಪುನರುಜ್ಜೀವನಗೊಳಿಸಿದೆ. ವಸ್ತುನಿಷ್ಠ ವಿಚಾರಧಾರೆಗಳ ಸಂಘರ್ಷದೊಂದಿಗೆ ಸಾಮಾಜಿಕ ಸ್ವಾಸ್ಥ್ಯವನ್ನು ಕಾಯ್ದಿಡಲಾಗಿದೆ. ಸಾಮಾಜಿಕ ಹಿತ

ಹಾಗೂ ವ್ಯಕ್ತಿಗತ ಬದುಕಿನ ಧೋರಣೆಯೊಂದಿಗೆ ನೈತಿಕ ಸ್ವಾಸ್ಥ್ಯವನ್ನು ಉಳಿಸಿಕೊಂಡೇ ಮಹಾನ್ವೇಷಣಂ ಮಹಾಕಾವ್ಯ ಮುಂದೆ ಸಾಗುತ್ತದೆ. ವಾಲ್ಮೀಕಿ ರಾಮಾಯಣಕ್ಕೆ ಪರ್ಯಾಯವಾಗಿ ಸಂಪೂರ್ಣ ವಿರೋಧಿ ನೆಲೆಯಲ್ಲಿ ಸಂಚರಿಸದೇ ಭಾರತೀಯ ಮನಸ್ಥಿತಿಗೆ ಸ್ಪಂದಿಸುತ್ತಾ ಅಗತ್ಯವಿದ್ದಲ್ಲಿ ಮಾರ್ಪಡಿಸಿಕೊಳ್ಳಲಾಗಿದೆ. ಅಂತೆಯೇ ಮಹಾನ್ವೇಷಣಂನ ಕವಿ ವಾಲ್ಮೀಕಿ ರಾಮಾಯಣದ ಯಥಾವತ್ತತೆಯನ್ನು ಸಂಪೂರ್ಣ ಉಳಿಸಿಕೊಂಡಿಲ್ಲ. ಈ ಮಹಾಕಾವ್ಯದ ಪಾತ್ರಗಳಲ್ಲಿ ಮಾನವೀಯತೆಯ ಅನಾವರಣವಿದೆ. ಕಾಲಿಕ ಬದಲಾವಣೆಗೆ ತುತ್ತಾದ ಪರಿಣಾಮ ಪಾತ್ರಗಳಲ್ಲಿ ಹೊಸತನ ಕಂಡರೂ ನೈತಿಕತೆಯನ್ನು ಇಲ್ಲಿನ ಯಾವ ಪಾತ್ರಗಳೂ ಕಳೆದುಕೊಂಡಿಲ್ಲ. ಶೋಷಣೆಗೆ ಈಡು ಮಾಡುವವರು ಮತ್ತು ಶೋಷಣೆಗೆ ಒಳಗಾಗುವವರು ಎಲ್ಲಾ ರಂಗದಲ್ಲೂ ಎಲ್ಲಾ ಕಾಲದಲ್ಲೂ ಕಾಣಿಸುತ್ತಾರೆ. ಈ ಮೂಲಕ ಉಚ್ಚ-ನೀಚ ಪರಿಕಲ್ಪನೆ ಸಮಾಜದಲ್ಲಿ ಶಾಶ್ವತವಾಗಿ ಉಳಿಯುವಂತಾಗುತ್ತದೆ. ಇಂಥ ಅಸಮಾನತೆಯನ್ನು ಹೋಗಲಾಡಿಸುವ ಆಶಯ ಹೊತ್ತ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಸಮಾನತೆಯ ಸ್ಥಾಪನೆಗಾಗಿ ತುಡಿಯುತ್ತದೆ. ಪ್ರಜಾಪ್ರಭುತ್ವದ ಪರಿಕಲ್ಪನೆಯೊಂದಿಗೆ ತುಳಿತಕ್ಕೆ ಒಳಗಾದ ಸ್ತ್ರೀಸಮುದಾಯದ ಒಳತೋಟಿಯನ್ನು ಪರಿಗ್ರಹಿಸಿದೆ. ಪಾತಿವ್ರತ್ಯದ ಪರಿಕಲ್ಪನೆ ಇಲ್ಲಿ ಸ್ತ್ರೀಸಮುದಾಯಕ್ಕೆ ಮಾತ್ರ ಸೀಮಿತವಾಗಿಲ್ಲ. ಲಿಂಗ ಸಮಾನತೆಯ ಹಿನ್ನೆಲೆಯಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ಬಹುಮುಖ್ಯವಾಗುತ್ತದೆ. ಸ್ತ್ರೀಸಮುದಾಯವನ್ನು ಹಿಂಸಿಸುವ, ದಂಡಿಸುವ ಮತ್ತು ಅಸಹನೀಯವಾಗಿ ನಡೆಸಿಕೊಳ್ಳುವ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಕ್ಕೆ ಇಲ್ಲಿ ಸ್ಥಾನ ಇಲ್ಲ. ದೈಹಿಕ ಪಾವಿತ್ರ್ಯತೆಯೊಂದಿಗೆ ಮಾನಸಿಕ ಪಾವಿತ್ರ್ಯತೆಯನ್ನೂ ಇಲ್ಲಿ ಕಾಯ್ದಿಡಲಾಗಿದೆ. ಪಾವಿತ್ರ್ಯತೆಯ ಕಾಯ್ದಿಡುವಿಕೆಯ ಹಿಂದೆ ಸ್ತ್ರೀ-ಪುರುಷ ಭೇದವಿಲ್ಲ. ಎಂಥ ದಾರುಣ ಪರಿಸ್ಥಿತಿ ಎದುರಾದರೂ ಇಲ್ಲಿನ ಮಹಿಳಾ ಪಾತ್ರಗಳು ಪಲಾಯನ ಮಾಡುವುದಿಲ್ಲ. ಬದುಕಿನ ಸನ್ನಿವೇಶವನ್ನು ದಿಟ್ಟತನದಿಂದ ಎದುರಿಸುತ್ತವೆ. ಮಹಾನ್ವೇಷಣಂ ಮಹಾಕಾವ್ಯದ ನೂತನ ಪಾತ್ರಗಳು ಬದುಕಿನ ಅರ್ಥವಂತಿಕೆಯ ಕುರಿತು ಮಾತಾಡುತ್ತವೆ. ಸಾರ್ಥಕ ಬದುಕಿನ ಪಥದಲ್ಲಿ ಸಾಗುತ್ತದೆ. ಹೀಗೆ ಬದುಕಿನ ಸಾರ್ಥಕತೆಯನ್ನು ಪ್ರಧಾನ ಧ್ಯೇಯವಾಗಿ ಇರಿಸಿಕೊಂಡ ಈ ಮಹಾಕಾವ್ಯದ ಮಹಿಳಾ ಸಂಕಥನವನ್ನು ಅಭ್ಯಾಸ ಮಾಡಲಾಗಿದೆ.

ಸ್ತ್ರೀಸಂವೇದನೆಯ ಅಭಿವ್ಯಕ್ತಿಯೊಂದಿಗೆ ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸುವ, ಸಮಷ್ಟಿಹಿತ ಪ್ರಜ್ಞೆಯನ್ನು ಆಶಯವನ್ನಾಗಿ ಇರಿಸಿಕೊಂಡ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'. ಹೆಣ್ಣು ಭೋಗಸಂಸ್ಕೃತಿಗೆ ಮೀಸಲಾದವಳು ಎಂಬ ಪೂರ್ವಗ್ರಹಪೀಡಿತ ಕಲ್ಪನೆಗೆ ಬದಲಾಗಿ ಮೌಲ್ಯಯುತ ಮಾನವ ಸಮಾಜನಿರ್ಮಾಣದ ಉದಾತ್ತ ಧ್ಯೇಯ ಹೊತ್ತ ಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'. ಪ್ರಸ್ತುತ ಸಂದರ್ಭದಲ್ಲೂ ಲಿಂಗ

ಅಸಮಾನತೆ ಕಾಣಿಸುತ್ತಿದೆ. ಶ್ರೇಷ್ಠ-ಕನಿಷ್ಠ ಪರಿಕಲ್ಪನೆಗಳು ಎಂದಿಗೂ ಸಮಾನತೆಯನ್ನು ಹುಟ್ಟುಹಾಕಲಾರವು. ಈ ಹೊತ್ತಿನಲ್ಲಿ ಪರಿವರ್ತನೆಯ ಆಶಯ ಹೊತ್ತ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಅಧ್ಯಯನ ಪ್ರಸ್ತುತ ಎನಿಸುತ್ತದೆ. ಇದರೊಂದಿಗೆ ಅಧ್ಯಯನದ ಉದ್ದೇಶವೂ ಬಹುಮುಖ್ಯವಾಗುತ್ತದೆ. ಮಹಿಳಾಜಗತ್ತಿನ ಚಿಂತನೆಗಳನ್ನು ಚಿತ್ರಿಸುವ ಈ ಮಹಾಕಾವ್ಯ ಬಹುತೇಕ ಮಹಿಳೆಯರನ್ನು ಸಾಧಕಿಯರನ್ನಾಗಿ, ತಪಸ್ವಿನಿಯರನ್ನಾಗಿ, ಶಾಸ್ತ್ರಪಾರಂಗತೆಯರನ್ನಾಗಿ ನಿರೂಪಿಸಿದೆ. ಇಲ್ಲಿನ ಮಹಿಳಾಸಮುದಾಯ ಪುರುಷರ ನೆಲೆಯಿಂದ ತಮ್ಮನ್ನು ಗುರುತಿಸಿಕೊಂಡಿಲ್ಲ. ಸ್ವತಂತ್ರ ಯೋಚನೆ, ಚಿಂತನಶೀಲ ಪ್ರವೃತ್ತಿ, ಮಾನಸಿಕ ದೃಢತೆ ಮತ್ತು ಸ್ವತಂತ್ರ ಅಭಿಪ್ರಾಯದ ನೆಲೆಯಿಂದ ಗುರುತಿಸಿಕೊಂಡಿವೆ. ಹೀಗೆ ಸ್ವತಂತ್ರ ನಿಲುವಿನಿಂದ ಗುರುತಿಸಿಕೊಂಡ ಈ ಮಹಾಕಾವ್ಯದ ಮಹಿಳಾ ಜಗತ್ತಿನ ಅನನ್ಯತೆಯನ್ನು ವಿಶ್ಲೇಷಿಸಲಾಗಿದೆ.

ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳಲ್ಲಿ ಸ್ಥಿತಪ್ರಜ್ಞತೆ ಇದೆ. ಇಲ್ಲಿನ ಮಹಿಳಾ ಪಾತ್ರಗಳು ವಸ್ತುಸ್ಥಿತಿಯನ್ನು ಅರ್ಥೈಸಿಕೊಂಡು ವಾಸ್ತವದ ನೆಲೆಯಲ್ಲಿ ಪ್ರತಿಕ್ರಿಯಿಸುತ್ತವೆ. ರಾಮನ ಚರಿತ್ರೆಯನ್ನು ಕಟ್ಟಿಕೊಡುವ ಸೀಮಿತ ಉದ್ದೇಶಕ್ಕೆ ಮಹಾನ್ವೇಷಣಂ ಮಹಾಕಾವ್ಯದ ರಾಮನ ಪಾತ್ರ ನಿಂತುಬಿಡುವುದಿಲ್ಲ. ಮಾನವೀಯ ನೆಲೆಯಲ್ಲಿ ಸಾಮಾಜಿಕ ಪ್ರಜ್ಞೆಯೊಂದಿಗೆ ಸಮಚಿತ್ತ ಭಾವಗಳನ್ನು ಬಿಂಬಿಸುತ್ತವೆ. ಕನ್ನಡ ಭಾಷೆಯಲ್ಲಿ ಬಹುತೇಕ ರಾಮಾಯಣ ಕಾವ್ಯಗಳು ಬಂದಿವೆ. ಆದರೆ ಮಾನವೀಯ ನೆಲೆಯಲ್ಲಿ ಸ್ತ್ರೀಸಂವೇದನೆಯನ್ನು ಪರಿಗ್ರಹಿಸಿದ ಕಾವ್ಯ ವಿರಳ ಎಂದೇ ಹೇಳಬೇಕು.

ಪ್ರಸ್ತುತ ಸ್ಪರ್ಧಾತ್ಮಕ ಜಗತ್ತಿನಲ್ಲಿ ಹಣಗಳಿಕೆ ಒಂದೇ ಮಾನವನ ಪ್ರಧಾನ ಉದ್ದೇಶವಾಗಿದೆ. ಹಣ, ಅಧಿಕಾರ, ಪ್ರತಿಷ್ಠೆ ಇವುಗಳೇ ಮನುಷ್ಯನ ವ್ಯಕ್ತಿತ್ವವನ್ನು ಅಳೆಯುವ ಮಾನದಂಡಗಳಾಗಿವೆ. ಇಂಥ ಸಂದರ್ಭದಲ್ಲಿ ಬದುಕಿಗೆ ಅಗತ್ಯವಾದ ಪ್ರೀತಿಯ ಮೌಲ್ಯವನ್ನು ಮಹಾನ್ವೇಷಣಂ ಮಹಾಕಾವ್ಯ ಅನಾವರಣ ಮಾಡುತ್ತದೆ. ಮನುಷ್ಯಪ್ರೀತಿಯ ನೆಲೆಯಲ್ಲಿ ಮಾನವೀಯ ಸಂಬಂಧಗಳನ್ನು ಇಲ್ಲಿ ಗಟ್ಟಿಗೊಳಿಸಲಾಗಿದೆ. ಪ್ರೀತಿ, ವಿಶ್ವಾಸ, ಬಾಂಧವ್ಯ, ಮಾನವೀಯತೆ ಮತ್ತು ಸಂಸ್ಕಾರಯುತ ಬದುಕು ಮಾನವನನ್ನು ಶ್ರೇಷ್ಠನನ್ನಾಗಿಸುತ್ತದೆ. ಈ ನೈತಿಕ ತಿಳುವಳಿಕೆ ಮಹಾನ್ವೇಷಣಂ ಮಹಾಕಾವ್ಯದ ಮೂಲಕ ಅಭಿವ್ಯಕ್ತಗೊಂಡಿದೆ.

ಶತಶತಮಾನಗಳಿಂದ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಅವಕಾಶಗಳಿಂದ ವಂಚಿತರಾದವರು ಮಹಿಳೆಯರು. ಇಂಥವರ ಬದುಕು ಬೆಳಕು ಕಾಣಬೇಕಾದರೆ ಅವರ ಬದುಕಿನ ವಿವೇಚನೆ ನಡೆಯಬೇಕು. ಈ ಬಗೆಯ ವಿವೇಚನಾಶೀಲತೆ

ಮಹಾನ್ವೇಷಣಂ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಇಲ್ಲಿನ ಪ್ರತಿಯೊಂದು ಮಹಿಳಾ ಪಾತ್ರಗಳು ತಮ್ಮ ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತಲೇ ಮುಂದೆ ಸಾಗುತ್ತವೆ. ಪ್ರಸ್ತುತ ಮಹಿಳಾಸ್ಥಿತಿಗತಿಗೆ ಪ್ರತಿಕ್ರಿಯೆಯಾಗಿ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಪಾತ್ರಗಳು ನಿರೂಪಿತಗೊಂಡಿವೆ. ಇಲ್ಲಿನ ಮಹಿಳಾ ಪಾತ್ರಗಳ ಹೋರಾಟ ಸಾಮಾಜಿಕ ಸ್ಥಾನಮಾನವನ್ನು ಅಪೇಕ್ಷಿಸಿವೆ. ಮಾನವಸಹಜ ಭಾವನೆ, ಕಾಮನೆಗಳು ಈ ಮಹಾಕಾವ್ಯದಲ್ಲಿ ವ್ಯಕ್ತಗೊಂಡಿವೆ. ಸ್ತ್ರೀಯ ಅಂತರಂಗದ ನೋವು, ವಿರಹ, ದುಃಖ, ತಲ್ಲಣ ಮತ್ತು ತುಡಿತವನ್ನು ಈ ಮಹಾಕಾವ್ಯದ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ. ಮಾನವನ ಅಂತರಂಗದ ಚೈತನ್ಯಶಕ್ತಿಗೆ ಆದ್ಯತೆ ನೀಡುತ್ತಾ ಮಾನವಸಹಜ ಭಾವನೆ, ಕಾಮನೆಗಳನ್ನು ವ್ಯಕ್ತಪಡಿಸುವ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯದ ಮಹಿಳಾಸಮುದಾಯದ ಶಕ್ತಿ ಮತ್ತು ಸಾಧನೆಯ ನೆಲೆಗಳನ್ನು ವಿಶ್ಲೇಷಿಸಲಾಗಿದೆ.

ಕನ್ನಡದ ಇತರ ರಾಮಾಯಣಗಳಿಗಿಂತ ಮಹಾನ್ವೇಷಣಂ ಮಹಾಕಾವ್ಯದ ಉದ್ದೇಶ ಮತ್ತು ವ್ಯಾಪ್ತಿ ಹಿರಿದಾದುದು. ಬದುಕನ್ನು ಎಷ್ಟರಮಟ್ಟಿಗೆ ವಿಶಾಲ ದೃಷ್ಟಿಯಲ್ಲಿ ನೋಡಲು ಸಾಧ್ಯವೋ ಅಷ್ಟರಮಟ್ಟಿಗೆ ನೋಡುವ ಶಕ್ತಿ ಈ ಮಹಾಕಾವ್ಯಕ್ಕೆ ಇದೆ. ಈ ಶಕ್ತಿ ತಾತ್ಕಾಲಿಕವಾದುದಲ್ಲ. ಬಹುತೇಕ ರಾಮಾಯಣಗಳು ಸ್ತ್ರೀಯ ಅಂತರಂಗದ ಭಾವಾಭಿಲಾಷೆಯನ್ನು ಗ್ರಹಿಸಿಲ್ಲ. ಸ್ತ್ರೀಯರ ಒಳತೋಟಿಯನ್ನು ಅರ್ಥೈಸಿಕೊಂಡಿಲ್ಲ. ಆದರೆ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯ ಮಹಿಳಾ ಬದುಕಿನ ಭಿನ್ನ ನೆಲೆಗಳನ್ನು ಶೋಧಿಸಿದೆ. ಸ್ತ್ರೀಶಕ್ತಿಯ ವಿಭಿನ್ನ ಮಜಲುಗಳನ್ನು ಅಭಿವ್ಯಕ್ತಿಸಿದೆ. ಬದುಕನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ನೋಡುವ ಉದ್ದೇಶ ಈ ಮಹಾಕಾವ್ಯಕ್ಕೆ ಇದೆ. ಬಹುತೇಕ ರಾಮಾಯಣಗಳು ಸ್ತ್ರೀಪಾತ್ರಗಳನ್ನು ಅಮಾನುಷ ನೆಲೆಯಲ್ಲಿಯೇ ನಿರೂಪಿಸಿದೆ. ಆದರೆ ಮಹಾನ್ವೇಷಣಂ ಮಹಾಕಾವ್ಯ ಸ್ತ್ರೀಸಮುದಾಯದ ಕುರಿತು ಕಾಳಜಿ ತಳೆದಿದೆ. ಬದುಕಿನ ಆಳ-ಅಗಲಗಳನ್ನು ಅವಲೋಕಿಸುತ್ತಾ ಸಾರ್ಥಕತೆಯನ್ನು ಸಾಧಿಸಿದೆ. ಜೀವನಪಥವನ್ನು ಅರಿಯುವಂತೆ ಮಾಡಿದೆ. ಹೀಗೆ ಬದುಕಿನ ಮಾರ್ಗವನ್ನು ನೈತಿಕತೆಯ ನೆಲೆಯಿಂದ ಕಂಡುಕೊಂಡ ಈ ಮಹಾಕಾವ್ಯದ ಮಹಿಳಾ ಲೋಕದ ಬದುಕು ಬವಣೆಯನ್ನು ಸ್ತ್ರೀನೋಟದಿಂದ ಕಾಣಲಾಗಿದೆ.

ಜನಪರ ಆಶಯದೊಂದಿಗೆ ಮಾನವೀಯ ಸಂವೇದನೆಯನ್ನು ಸ್ಫುರಿಸುವ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ. ಸ್ತ್ರೀಪರ ಸಂವೇದನೆಯೊಂದಿಗೆ ಶೋಷಣೆಗೆ ಒಳಗಾದವರ ಕುರಿತು ಈ ಕಾವ್ಯ ಕಾಳಜಿ ಹೊಂದಿದೆ. ಮಹಿಳಾಸಮುದಾಯ ಶೋಷಣೆಗೆ ಒಳಗಾಗಿದೆ ಎಂಬ ಸಹಜ ಸತ್ಯವನ್ನಷ್ಟೇ ಅನಾವರಣ ಮಾಡುವ ಉದ್ದೇಶ 'ಶ್ರೀರಾಮಾಯಣ ಮಹಾನ್ವೇಷಣಂ' ಮಹಾಕಾವ್ಯಕ್ಕೆ ಇಲ್ಲ. ಲಿಂಗಭೇದದ ನೆಲೆಯಲ್ಲಿ ನಡೆಯುವ ಶೋಷಣೆಯನ್ನು

ತಪ್ಪಿಸುವ ಉದ್ದೇಶವೂ ಸೇರಿದೆ. ಈ ಅಸಮಾನತೆಯನ್ನು ಬುಡಸಮೇತ ಕಿತ್ತುಬಿಡುವ ದಿವ್ಯಸಂದೇಶ ಈ ಮಹಾಕಾವ್ಯದಲ್ಲಿ ಅಭಿವ್ಯಕ್ತಗೊಂಡಿದೆ.

ಸ್ತ್ರೀಸಮುದಾಯವನ್ನು ಶೋಷಣಾರಹಿತ ಸಮುದಾಯವಾಗಿಸುವ ಉದ್ದೇಶ ಮಹಾನ್ವೇಷಣಂ ಮಹಾಕಾವ್ಯದ ಕವಿಗೆ ಇದೆ. ಇದರೊಂದಿಗೆ ಸ್ತ್ರೀಸಮುದಾಯ ಜ್ಞಾನಮತಿಗಳಾಗಬೇಕು ಎಂಬ ಆಶಯವೂ ಅಭಿವ್ಯಕ್ತಗೊಂಡಿದೆ. ಬುದ್ಧಿಜ್ಞಾನದಲ್ಲಿ ಶಕ್ತಿಸಾಮರ್ಥ್ಯದಲ್ಲಿ, ಶಿಕ್ಷಣ ಮತ್ತು ವೈಚಾರಿಕತೆಯಲ್ಲಿ ಮಹಿಳಾಸಮುದಾಯ ಪ್ರಗತಿ ಸಾಧಿಸಬೇಕು ಎಂಬ ಆಶಯ ಕವಿಯದು. ಈ ಹಿನ್ನೆಲೆಯಲ್ಲಿಯೇ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾ ಜಗತ್ತಿಗೆ ಅಧಿಕ ಮಹತ್ವಕೊಟ್ಟು ಕವಿ ಕಾವ್ಯ ನಿರ್ಮಿಸಿದ್ದಾರೆ. ಹೀಗೆ ಸುಧಾರಣಾಪರ ನಿಲುವಿಗೆ ಒಳಗಾಗಿ ಬದುಕಿನ ಸಾರ್ಥಕತೆಯನ್ನು ಕಂಡುಕೊಂಡ ಮಹಾನ್ವೇಷಣಂ ಮಹಾಕಾವ್ಯದ ಮಹಿಳಾಸಮುದಾಯದ ಬದುಕನ್ನು ಸ್ತ್ರೀಸಂವೇದನೆಯ ನೆಲೆಯಿಂದ ಶೋಧಿಸಲಾಗಿದೆ.

ಪ್ರಸ್ತುತ ಇಪ್ಪತ್ತೊಂದನೆಯ ಶತಮಾನದಲ್ಲಿ ಮಹಿಳಾಸಮುದಾಯ ತನ್ನ ಸ್ವತಂತ್ರ ಚಿಂತನೆ, ಗುರಿ, ಉದ್ದೇಶ ಹಾಗೂ ಸತತ ಪರಿಶ್ರಮದಿಂದ ಬೌದ್ಧಿಕವಾಗಿ ಬೆಳೆಯುತ್ತಿದೆ. ಈ ಬೌದ್ಧಿಕಶಕ್ತಿಯನ್ನು ಕಸಿಯುವ ಹಕ್ಕು ಯಾರಿಗೂ ಇಲ್ಲ. ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಪ್ರತಿಯೊಬ್ಬರಿಗೂ ಅಸ್ತಿತ್ವ, ಹಕ್ಕು ಹಾಗೂ ಸ್ವಾತಂತ್ರ್ಯದ ಪ್ರಶ್ನೆ ಬಹುಮುಖ್ಯವಾಗುತ್ತದೆ. ಗೊಡ್ಡು ಸಂಪ್ರದಾಯದ ಜಾಡಿನಲ್ಲಿ ಮೌಢ್ಯತೆಯ ಆರೋಪವನ್ನು ಮಹಿಳಾಸಮುದಾಯದ ಮೇಲೆ ಆರೋಪಿಸುತ್ತಾ ಶೋಷಿಸುವ ಸಾಮಾಜಿಕವ್ಯವಸ್ಥೆ ಬದಲಾಗುತ್ತಾ ಬಂದಿದೆ. ಹೀಗೆ ಬದಲಾದ ಸಮಾಜವನ್ನು ಇನ್ನಷ್ಟು ಬಲಪಡಿಸುವ ಉದ್ದೇಶ ಬಹುತೇಕ ಆಧುನಿಕ ಬರಹಗಾರರದ್ದು.

ಶಿಷ್ಟ ಮಹಾಕಾವ್ಯಗಳಲ್ಲಿ ನಿರೂಪಿತವಾದ ನಿರ್ದಿಷ್ಟ ಚೌಕಟ್ಟನ್ನು ಒಡೆಯುವ ಉದ್ದೇಶ ಈ ಮಹಾಕಾವ್ಯಗಳಿಗೆ ಇದೆ. ಪುರಾಣದ ನೆಲೆಯಿಂದ, ಇತಿಹಾಸದ ನೆಲೆಯಿಂದ ನಿರೂಪಿತವಾದ ಮಹಾಕಾವ್ಯಗಳು ಒಂದು ನಿರ್ದಿಷ್ಟ ವ್ಯಾಪ್ತಿಯೊಳಗೆ ಮಹಿಳಾಸಮುದಾಯವನ್ನು ಕಟ್ಟಿಹಾಕಿದೆ. ಈ ಬಗೆಯ ಕಟ್ಟುವಿಕೆಯ ಹಿಂದೆ ಪುರುಷರ ಶಕ್ತಿರಾಜಕಾರಣ ಕೆಲಸಮಾಡಿದೆ. ಈ ಶಕ್ತಿರಾಜಕಾರಣದೊಂದಿಗೆ ಪೂರ್ವಗ್ರಹಗಳನ್ನು ಒಡೆಯುತ್ತಾ ವಿಶಾಲ ಮನೋಧರ್ಮದ ನೆಲೆಯಲ್ಲಿ ಮಾನವತ್ವ ಪ್ರತಿಪಾದಿಸುವ ಮಹಾಕಾವ್ಯ 'ಶ್ರೀರಾಮಾಯಣ ಮಹಾನ್ವೇಷಣಂ'. ಈ ಮಹಾಕಾವ್ಯದ ಮಹಿಳಾಸಮುದಾಯದ ಬದುಕಿನ ನೆಲೆಗಳನ್ನು ನನ್ನ ಅಧ್ಯಯನದಲ್ಲಿ ಶೋಧಿಸಲಾಗಿದೆ.

# ಅನುಬಂಧ ೧

## ಪರಾಮರ್ಶನ ಸಾಹಿತ್ಯ

೧. ಅರ್ಜುನ ಕೋರಟಕರ ೨೦೦೩
ಪ್ರತೀಕ ಮೊಚ್ಚಿ ಮಹಾಕಾವ್ಯ ಚಿಂತನ
ಪ್ರ: ಅರ್ಜುನ ತಾ. ಕೋರಟಕರ, ಜಮಖಂಡಿ

೨. ಅನುಪಮ ನಿರಂಜನ ೧೯೭೯
ಮಾಧವಿ
ಪ್ರ: ಡಿ. ವಿ. ಕೆ. ಮೂರ್ತಿ, ಮೈಸೂರು

೩. ಅನುಪಮ ಶಿರಾಡಿಪಾಲ್ ೧೯೭೬
ಮಹಿಳೆ ಮತ್ತು ಮಕ್ಕಳು
ಪ್ರ: ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ

೪. ಅರವಿಂದ ಮಾಲಗತ್ತಿ ೧೯೮೫
ಜಾನಪದ ವ್ಯಾಸಂಗ
ಪ್ರ: ಶೈಲ ಪ್ರಕಾಶನ, ವಿಜಾಪುರ

೫. ಡಾ॥ ಆಂಜನಪ್ಪ ಬಿ.ಎಚ್. ೨೦೦೬
ಮಹಿಳೆ ಮತ್ತು ದುಡಿಮೆ
ಪ್ರ: ಶ್ರುತಿ ಪಬ್ಲಿಕೇಷನ್ಸ್, ಬೆಂಗಳೂರು

೬. ಡಾ। ಇಂದಿರಾ. ಆರ್. ೧೯೮೬
ಸಾಮಾಜಿಕ ಸಂಶೋಧನಾ ವಿಧಾನಗಳು
ಪ್ರ: ವಿದ್ಯಾಸಾಗರ ಪ್ರಕಾಶನಾಲಯ, ಮೈಸೂರು

೭ ಡಾ। ಇಂದಿರಾ. ಆರ್ ೨೦೦೦
ಮಹಿಳೆ ಮತ್ತು ಕೌಟುಂಬಿಕ ಹಿಂಸೆ
ಪ್ರ: ಯಶೋಧಾ ರಾಘವ ಟ್ರಸ್ಟ್, ಮೈಸೂರು.

೮. ಡಾ। ಇಂದಿರಾ . ಆರ್
ಸಾಮಾಜಿಕ ಸಂಶೋಧನಾ ವಿಧಾನಗಳು
ಪ್ರ: ವಿದ್ಯಾಸಾಗರ ಪ್ರಕಾಶನಾಲಯ, ಮೈಸೂರು.

೯. ಡಾ। ಇಂದಿರಾ. ಆರ್ ೨೦೦೦
ಮಹಿಳೆ ಸಮಾಜ ಮತ್ತು ಸಂಸ್ಕೃತಿ
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಇಂದಿರಾ ಹೆಗ್ಡೆ ೧೯೮೭
ಪುರುಷರೇ ನಿಮಗೆ ನೂರು ನಮನಗಳು
ಪ್ರ: ಕರಾವಳಿ ಪ್ರಕಾಶನ, ಬೆಂಗಳೂರು

೧೧. ಡಾ। ಉಷಾ. ಎಂ. ೨೦೦೪
ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು
ಪ್ರ: ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೨. ಡಾ। ಉಷಾ ಎಮ್. ೨೦೦೫
ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ
ಪ್ರ: ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಎ.ಕೆ. ರಾಮಾನುಜನ್ ಅವರ ಆಯ್ದ ಬರಹಗಳು ೨೦೦೯
ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು

೧೪. ಎಚ್ಚೆಸ್ಕೆ (ಸಂ) ೧೯೮೪
ದಾಸ ಸಾಹಿತ್ಯ ದರ್ಶನ
ಪ್ರ: ಮಂಗಳ ಭಾರತಿ ಪ್ರಕಾಶನ, ಬೆಂಗಳೂರು

೧೫. ಐರ್ಯ ಲಕ್ಷ್ಮೀನಾರಾಯಣ ಆಳ್ವ ೧೯೯೯
ಶ್ರೀರಾಮಾಶ್ವಮೇಧದ ರಸತರಂಗಗಳು
ಪ್ರ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೧೬. ಡಾ। ಕಲಬುರ್ಗಿ. ಎಂ.ಎಂ ೧೯೮೮
ಮಾರ್ಗಸಂಪುಟ – ೧
ಪ್ರ: ನರೇಶ್ ಅಂಡ್ ಕಂಪನಿ, ಬೆಂಗಳೂರು

೧೭. ಡಾ। ಕಲಬುರ್ಗಿ. ಎಂ.ಎಂ ೧೯೮೮
ಮಾರ್ಗಸಂಪುಟ – ೨
ಪ್ರ: ನರೇಶ್ ಅಂಡ್ ಕಂಪನಿ. ಬೆಂಗಳೂರು

೧೮ ಡಾ। ಕಲಬುರ್ಗಿ. ಎಂ.ಎಂ ೨೦೦೭
ಮಾರ್ಗಸಂಪುಟ – ೪
ಸಂಶೋಧನ ಪ್ರಬಂಧಗಳ ಸಂಕಲನ
ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು

೧೯. ಡಾ। ಕಿಶೋರಿ ನಾಯಕ್ ಕೆ. ೧೯೯೯
ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು
ಪ್ರ: ಪ್ರಸಾರಂಗ ಮಂಗಳೂರು ವಿಶ್ವವಿದ್ಯಾನಿಲಯ

೨೦. ಡಾ। ಕೃಷ್ಣಪ್ಪ. ಜಿ
ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ
ಪ್ರ: ಶ್ರೀರಂಗ ಪ್ರಕಾಶನ, ಮೈಸೂರು

೨೧. ಕೃಷ್ಣಮೂರ್ತಿ ಎಸ್. ಆರ್ ೨೦೦೮
ವಾಲ್ಮೀಕಿ ರಾಮಾಯಣದ ಅಂತರಾರ್ಥಗಳು
ಪ್ರ: ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು

೨೨. ಕೃಷ್ಣಯ್ಯ ಎಂ.ಎಚ್ ೨೦೦೦
ಕಾವ್ಯಭಾಷಾ
ಪ್ರ: ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೨೩. ಕುವೆಂಪು ೧೯೫೦
ತಪೋನಂದನ,
ಪ್ರ: ಉದಯ ರವಿ, ಮೈಸೂರು

೨೪. ಕುವೆಂಪು ೨೦೦೮
ಜನಪ್ರಿಯ ವಾಲ್ಮೀಕಿ ರಾಮಾಯಣ
ಪ್ರ: ಉದಯರವಿ ಪ್ರಕಾಶನ, ಮೈಸೂರು

೨೫. ಕುವೆಂಪು ೧೯೩೫
ವಿಭೂತಿ ಪೂಜೆ
ಪ್ರ: ವಿದ್ಯಾವರ್ಧಕ ಟ್ರಸ್ಟ್,ಮೈಸೂರು

೨೬. ಕುವೆಂಪು ೧೯೩೧
ಶ್ರೀ ರಾಮಾಯಣದರ್ಶನಂ
ಪ್ರ: ಕೋಟಿ ಜನತಾ ಪುಸ್ತಕಲಾಯ, ತುಮಕೂರು.

೨೭. ಕುವೆಂಪು ೨೦೦೬
ಜನಪ್ರಿಯ ವಾಲ್ಮೀಕಿ ರಾಮಾಯಣ
ಪ್ರ: ಉದಯರವಿ ಪ್ರಕಾಶನ, ಮೈಸೂರು

೨೮. ಕುಂದಣಗಾರರು ೧೯೩೬
ಕುಮುದೆಂದು ರಾಮಾಯಣ
ಪ್ರ: ಎಸ್.ಎಫ್. ಜೌಗತಿ, ಬೆಳಗಾವಿ.

೨೯. ಕೇಶವ ಶರ್ಮಾ ಕೆ. ೧೯೯೨
ಕ್ರಿಯೆ-ಪ್ರತಿಕ್ರಿಯೆ
ಪ್ರ: ಅನ್ವೇಷಣೆ ಪ್ರಕಾಶನ, ಬೆಂಗಳೂರು

೩೦. ಡಾ। ಗಾಯತ್ರೀ ನಾವಡ. ೧೯೯೩
ವಿರಚನೆ
ಪ್ರ: ಎನ್. ಆರ್. ಎ. ಎಲ್ ಪ್ರಕಾಶನ, ಕೋಟೇಶ್ವರ

೩೧. ಡಾ। ಗಾಯತ್ರೀ ನಾವಡ. ೧೯೯೯
ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀ ವಾದಿ ನೆಲೆಗಳು
ಪ್ರ: ಸಿರಿ ಪ್ರಕಾಶನ ಹೊಸಪೇಟೆ ಮತ್ತು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೩೨. ಡಾ। ಗಾಯತ್ರೀ ನಾವಡ. ೨೦೦೩
ಮಹಿಳಾ ಸಂಕಥನ
ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩೩. ಗೋರೂರು ರಾಮಸ್ವಾಮಿ ಅಯ್ಯಂಗಾರ್ (ಸಂ) ೧೯೬೫
ಹೊಸಗನ್ನಡ ಪ್ರಬಂಧ ಸಂಕಲನ
ಪ್ರ: ಸಾಹಿತ್ಯ ಅಕಾಡೆಮಿ, ಹೊಸಡೆಲ್ಲಿ

೩೪. ಗೋವಿಂದರಾಜ ಗಿರಡ್ಡಿ - ೨೦೦೯
ಸಾಹಿತ್ಯ ಲೋಕದ ಸುತ್ತ-ಮುತ್ತ
ಪ್ರ: ಮನೋಹರ ಗ್ರಂಥಮಾಲಾ, ಧಾರವಾಡ

೩೫. ಗೌರುಭಟ್ ಪೆರ್ಲ ೨೦೦೧
ಸ್ತ್ರೀ
ಪ್ರ: ಕಾಸರಗೋಡು ಪ್ರಕಾಶನ, ಕೇರಳ

೩೬. ಗಂಗೋತ್ರಿ ಕುವೆಂಪು ಅಭಿನಂದನಾ ಗ್ರಂಥ ೧೯೬೮
ಪ್ರ: ಗೀತಾ ಬುಕ್ ಹೌಸ್, ಮೈಸೂರು

೩೭ ಚದುರಂಗ ೨೦೦೦
ಬಿಂಬ
ಪ್ರ: ನಾಗೇಂದ್ರ ಪ್ರಕಾಶನ, ಮೈಸೂರು

೩೮. ಡಾ। ಚಿದಾನಂದಮೂರ್ತಿ ಎಂ.
ಸಂಶೋಧನೆ - ೧೯೬೩
ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

೩೯. ಡಾ। ಚಿದಾನಂದಮೂರ್ತಿ ಎಂ. ೧೯೬೬
ಸಂಶೋಧನ ತರಂಗ
ಪ್ರ: ಸರಸ ಸಾಹಿತ್ಯ ಪ್ರಕಾಶನ, ಮೈಸೂರು

೪೦. ಚೆನ್ನಬಸಪ್ಪ ಎಸ್. (ಸಂ) ೨೦೦೬
ಕುವೆಂಪು ಕೃತಿ ಚಿಂತನ
ಪ್ರ: ಕುವೆಂಪು ವಿಚಾರ ವೇದಿಕೆ, ಮೈಸೂರು

೪೧. ಚೆನ್ನಬಸಪ್ಪ ಕೋ. ೧೯೫೨
ಕುವೆಂಪು ಸಂದರ್ಶನ
ಪ್ರ: ಸಜೀವ ಸಾಹಿತ್ಯ ಮಾಲೆ, ಬಳ್ಳಾರಿ

೪೨. ಚೆನ್ನಬಸಪ್ಪ ಕೋ. (ಸಂ) ೧೯೬೬
ಭಾಷಣಗಳು ಭಿನ್ನವತ್ತಳೆಗಳು
ಪ್ರ: ಬಳ್ಳಾರಿ ಸಾಹಿತ್ಯ ಆಕಾಡೆಮಿ

೪೩. ಚೆನ್ನಬಸಪ್ಪ ಕೋ. ೧೯೭೧
ಶ್ರೀ ರಾಮಾಯಣದರ್ಶನಂ ಮಹಾಕಾವ್ಯ ಸಮೀಕ್ಷೆ
ಪ್ರ: ಕರ್ನಾಟಕ ಸಹಕಾರಿ ಮಂದಿರ

೪೪. ಚೆನ್ನಬಸಪ್ಪ ಕೋ.
ಶ್ರೀ ರಾಮಾಯಣದರ್ಶನಂ ಮಹಾಕಾವ್ಯ ಸಮೀಕ್ಷೆ
ಪ್ರ: ಕರ್ನಾಟಕ ಸರ್ಕಾರಿ ಪ್ರಕಾಶನ, ಬೆಂಗಳೂರು

೪೫. ಚೆನ್ನಬಸಪ್ಪ ಕೋ. ೨೦೦೨
ಶ್ರೀ ಕುವೆಂಪು ಸಂದರ್ಶನ ಮತ್ತು ಪ್ರಸಂಗಗಳು
ಪ್ರ: ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೪೬. ಡಾ। ಚಂದ್ರಮತಿ ಸೋಂದಾ. ೨೦೦೪
ಚಿಪ್ಪೊಡೆದ ಮೌನ ಸ್ತ್ರೀವಾದಿ ವಿಮರ್ಶೆ
ಪ್ರ: ಅಭಿರುಚಿ ಪ್ರಕಾಶನ, ಮೈಸೂರು.

೪೭. ಚಂದ್ರಯ್ಯ ಬಿ.ನಂ. ೨೦೦೩
ವಿಶ್ವದ ಸಂತ ಮಹಿಳೆಯರು
ಪ್ರ: ವಿಶ್ವಮೈತ್ರಿ ಸಂಶೋಧನ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಮೈಸೂರು

೪೮. ಡಾ। ಚಂದ್ರಶೇಖರ ಕಂಬಾರ ೨೦೦೪
ದೇಶೀಯ ಚಿಂತನ
ಪ್ರ: ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೪೯. ಡಾ। ಚಂದ್ರಶೇಖರ ಟಿ. ಆರ್. (ಸಂ) ೨೦೦೫
ದಲಿತ ಅಧ್ಯಯನ
ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೦. ಚಂದ್ರಶೇಖರ ಮತ್ತು ಪರಶಿವಮೂರ್ತಿ. ಜಿ ೧೯೫೬
ಉಡೂಗೊರೆ– ಸಂ. ಪ. ವಿ.
ಪ್ರ: ಮಹಾರಾಜಾ ಕಾಲೇಜು, ಮೈಸೂರು

೫೧. ಡಾ| ಜವರಯ್ಯ ಮ.ನ. ೧೯೯೯
ಹತ್ತು ಶತಮಾನಗಳ ಕನ್ನಡ ಸಾಹಿತ್ಯ
ಇಪ್ಪತ್ತೈದು ಅಧ್ಯಾಯಗಳು
ಪ್ರ: ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು

೫೨. ಡಾ| ಜ್ಯೋತ್ಸ್ನಾ ಕಾಮತ್
ಮಹಿಳೆ: ಒಂದು ಅಧ್ಯಯನ
ಪ್ರ: ನವಕರ್ನಾಟಕ ಪ್ರಕಾಶನ, ಬೆಂಗಳೂರು

೫೩. ಡಿ.ಎಲ್.ಎನ್. ೧೯೬೭
ಉಪಾಯನ ಅಭಿನಂದನಾ ಗ್ರಂಥ
ಪ್ರ: ಸಂಭವನ ಗ್ರಂಥ ಸಮಿತಿ

೫೪. ಡಿ.ವಿ.ಜಿ. ೧೯೪೫
ಶ್ರೀರಾಮ ಪರೀಕ್ಷಣಂ
ಪ್ರ: ಕಾವ್ಯಾಲಯ ಪ್ರಕಾಶನ, ಮೈಸೂರು

೫೫. ತಾರಾನಾಥ. ಎನ್. ಎಸ್. (ಸಂ)
ಶತಮಾನದ ಸಂಶೋಧನೆ
ಪ್ರ: ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೬. ಡಾ। ತಿಪ್ಪೇರುದ್ರಸ್ವಾಮಿ ೧೯೮೦
ರಾಮಾಯಣ ದರ್ಶನಂ ಒಂದು ತೌಲನಿಕ ಅಧ್ಯಯನ
ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫೭. ಡಾ। ತಿಪ್ಪೇರುದ್ರಸ್ವಾಮಿ ೧೯೭೫
ಸಾಹಿತ್ಯ ವಿಮರ್ಶೆಯ ಮೂಲತತ್ವಗಳು
ಪ್ರ: ನಿರ್ದೇಶಕರು, ಪ್ರಸಾರಾಂಗ ಮೈಸೂರು

೫೮. ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ ೧೯೯೪
ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
ಪ್ರ: ಕ್ರೈಸ್ಟ್ ಕಾಲೇಜು, ಕನ್ನಡ ಸಂಘ, ಬೆಂಗಳೂರು

೫೯. ದೇ. ಜ. ಗೌ- ೧೯೯೭
ಶ್ರೀ ರಾಮಾಯಣದರ್ಶನಂ ವಚನ ಚಂದ್ರಿಕೆ
ಪ್ರ: ಸಾಹಿತ್ಯ ದರ್ಶನ ಮಾಲೆ, ಮೈಸೂರು

೬೦. ದೇ. ಜ. ಗೌ- ೧೯೫೪
ಶ್ರೀ ರಾಮಾಯಣದರ್ಶನಂ ಉಪನಾಸ್ಯ ಮಾಲೆ
ಪ್ರ: ಸಾಹಿತ್ಯ ದರ್ಶನ ಮಾಲೆ, ಮೈಸೂರು

೬೧. ದೇ. ಜ. ಗೌ
ಭಾರತೀಯ ಸಾಹಿತ್ಯದಲ್ಲಿ ರಾಮಾಯಣ ಪರಂಪರೆ
ಪ್ರ: ಸಾಹಿತ್ಯ ದರ್ಶನ ಮಾಲೆ, ಮೈಸೂರು

೬೨. ದೇ. ಜ. ಗೌ ೧೯೮೨
ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು ಸಂಪುಟ–೨
ಪ್ರ: ಸಹ್ಯಾದ್ರಿ ಪ್ರಕಾಶನ, ಮೈಸೂರು

೬೩. ದೇ. ಜ. ಗೌ ೧೯೮೯
ಕುವೆಂಪು ಸಾಹಿತ್ಯ ಕೆಲವು ಅಧ್ಯಯನಗಳು ಸಂಪುಟ–3
ಪ್ರ: ಸಹ್ಯಾದ್ರಿ ಪ್ರಕಾಶನ, ಮೈಸೂರು

೬೪. ದೇ. ಜ. ಗೌ (ಪ್ರ. ಸಂ) ೧೯೭೫
ಸಹ್ಯಾದ್ರಿ ಕುವೆಂಪು ಅಭಿನಂದನಾ ಗ್ರಂಥ
ಪ್ರ: ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

೬೫. ದೇ.ಜ.ಗೌ ೧೯೮೮
ರಾಷ್ಟ್ರಕವಿ ಸಂದರ್ಶನ
ಪ್ರ: ಸಹ್ಯಾದ್ರಿ ಪ್ರಕಾಶನ, ಮೈಸೂರು

೬೬. ದೇ.ಜ.ಗೌ ೧೯೭೭
ಕುವೆಂಪು ಅವರ ಶಿಕ್ಷಣ ತತ್ತ್ವ ವಿಚಾರ
ಪ್ರ: ಬೆಂಗಳೂರು ವಿಶ್ವವಿದ್ಯಾನಿಲಯ

೬೭. ದೇ.ಜ.ಗೌ ೨೦೧೦
ಕುವೆಂಪು ದರ್ಶನ ವಿಚಾರ
ಪ್ರ: ಸಪ್ನ ಬುಕ್ ಹೌಸ್, ಬೆಂಗಳೂರು

೬೮. ನರಸಿಂಹಾಚಾರ್ ಪು.ತಿ ೧೯೬೫
ಅಹಲ್ಯೆ
ಪ್ರ: ಕನ್ನಡ ಸಂಘ ಮಹಾರಾಜ ಕಾಲೇಜು, ಮೈಸೂರು

೬೯. ನಾಗರಾಜ್. ಡಿ. ಆರ್ ೨೦೦೨
ಸಂಸ್ಕೃತಿ ಕಥನ
ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭೦. ನಾಗರಾಜ್ ಡಿ.ಆರ್ ೧೯೯೮
ಅಮೃತ ಮತ್ತು ಗರುಡ
ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು

೨೧. ನಾಗರಾಜ್ ಡಿ.ಆರ್ ೧೯೯೬
ಸಾಹಿತ್ಯ ಕಥನ
ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು

೨೨. ನಾಗರಾಜ್. ಡಿ. ಆರ್ ೧೯೮೭
ಶಕ್ತಿ ಶಾರದೆಯ ಮೇಳ
ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು.

೨೩. ನಾಗರಾಜ್. ಡಿ. ಆರ್. ೧೯೯೬
ಸಾಹಿತ್ಯ ಕಥನ
ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು

೨೪. ನಾಗರಾಜ ಮೈ.ನ. ೧೯೭೮
ಎಳೆಯರ ರಾಮಾಯಣ
ಪ್ರ: ವಿಶ್ವ ಹಿಂದು ಪರಿಷದ್, ಕರ್ನಾಟಕ

೨೫. ಪ್ರೊ ನಾಗರಾಜಪ್ಪ ಕೆ.ಜಿ. (ಸಂ) ೧೯೮೯
ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು
ಪ್ರ: ಡಿ.ಕೆ. ಶ್ಯಾಮಸುಂದರರಾವ್,

ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೩೬. ಡಾ। ನಾರಾಯಣಾಚಾರ್ಯ ಕೆ.ಎಸ್. ೨೦೦೮
ಶ್ರೀರಾಮಾವತಾರ ಸಂಪೂರ್ಣವಾದಾಗ
ಪ್ರ: ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ

೩೭. ಪ್ರೊ। ನಾರಾಯಣಾಚಾರ್ಯ ಕೆ.ಎಸ್. ೧೯೯೯
ಶ್ರೀ ರಾಮಾಯಣ ಪಾತ್ರ ಪ್ರಪಂಚ
ಪ್ರ: ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು

೩೮. ನಾವಡ ಎ.ವಿ. ಮತ್ತು ಗಾಯತ್ರೀ ನಾವಡ ೨೦೦೨
ಸಾವಿರಾರು ಕೀರ್ತನೆಗಳು
ಪ್ರ: ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೩೯. ಡಾ। ನಿಕೇತನ ೨೦೦೫
ಸ್ತ್ರೀ ದೃಷ್ಟಿ
ಪ್ರ: ರಾಶಿ ಪ್ರಕಾಶನ, ಉಡುಪಿ

೪೦.. ನೇಮಿಚಂದ್ರ ೨೦೦೧
ಮಹಿಳಾ ಅಧ್ಯಯನ
ಪ್ರ: ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೮೧. ನಂದಿನಿ ೨೦೦೨
ವಿಧವೆಯವರ ಸಮಸ್ಯೆಗಳು
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೮೨. ಡಾ। ನಿಂಗಪ್ಪ ಮುದೇನೂರು ೨೦೦೪
ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು
ಪ್ರ: ಸಿವಿಜಿ ಪ್ರಕಾಶನ, ಬೆಂಗಳೂರು

೮೩. ಪರಮೇಶ್ವರ ಭಟ್ಟ ಎಸ್.ವಿ. ೧೯೫೬
ಅದ್ಭುತ ರಾಮಾಯಣ ಮುದ್ದಣ
ಪ್ರ: ಕನ್ನಡ ಕವಿಕಾವ್ಯಮಾಲೆ

೮೪. ಡಾ। ಪ್ರಭಾಕರ ಶಿಶಿಲ ಬಿ. ೨೦೦೩
ಸಂಶೋಧನೆಯ ವಿಧಾನಗಳು
ಪ್ರ: ಪ್ರಗತಿ ಪ್ರಕಾಶನ, ಸುಳ್ಯ

೮೫. ಡಾ। ಪ್ರಭಾವತಿ ಎಸ್. ವಿ ೨೦೦೫
ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು
ಒಂದು ತೌಲನಿಕ ಅಧ್ಯಯನ
ಪ್ರ: ಸುಮುಖ ಪ್ರಕಾಶನ; ಬೆಂಗಳೂರು

೮೬. ಡಾ। ಪ್ರಭುಶಂಕರ ೨೦೦೦
ಕನ್ನಡದಲ್ಲಿ ಭಾವಗೀತೆಗಳು
ಪ್ರ: ಡಿ. ವಿ. ಕೆ. ಮೂರ್ತಿ, ಮೈಸೂರು

೮೭. ಡಾ। ಪಾರ್ವತಿ ಅಪ್ಪಯ್ಯ, ಶಂಕರ್ ರಾವ್. ಚ. ನ,
ಜಯಂತಿ. ಪಿ. ಶೆಣೈ (ಸಂ) ೨೦೦೬
ಮಾನವ ಹಕ್ಕುಗಳು, ಲಿಂಗ ಸಮಾನತೆ ಮತ್ತು ಪರಿಸರ ಅಧ್ಯಯನ
ಪ್ರ: ಜೈ ಭಾರತ್ ಪ್ರಕಾಶನ, ಮಂಗಳೂರು

೮೮. ಡಾ। ಪ್ರೀತಿ ಶುಭಚಂದ್ರ ೨೦೦೩
ಸೃಜನೆಯ ಮೂಡು
ಪ್ರ: ರೂಪ ಪ್ರಕಾಶನ, ಮೈಸೂರು

೮೯. ಪೋತೆ. ಎಚ್. ಟಿ. ೨೦೦೩
ಅನ್ವೇಷಣೆ
ಪ್ರ: ತಿಪ್ಪಣಂಬು ಪ್ರಕಾಶನ, ರಾಯಚೂರು

೯೦. ಬನ್ನಂಜೆ ಗೋವಿಂದಾಚಾರ್ಯ. ೧೯೯೮
ವಾಲ್ಮೀಕಿ ಕಂಡ ರಾಮಾಯಣ
ಪ್ರ: ದಶಪ್ರಮತಿ ಪ್ರಕಾಶನ, ಬೆಂಗಳೂರು

೯೧. ಡಾ। ಬಸವರಾಜ ಸಬರದ ೧೯೯೨
ವಚನ ಚಳವಳಿ
ಪ್ರ: ಪಲ್ಲವಿ ಪ್ರಕಾಶನ, ಗುಲಬರ್ಗಾ

೯೨. ಬೇಂದ್ರೆ ೧೯೪೦
ಸಾಹಿತ್ಯ ಸಂಶೋಧನ
ಪ್ರ: ಮನೋಹರ ಗ್ರಂಥಮಾಲೆ

೯೩. ಪ್ರೊ ಬೋರಲಿಂಗಯ್ಯ. ಹಿ. ಚಿ. ೧೯೯೯
ಗೊಂಡರ ರಾಮಾಯಣ
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೯೪. ಬೋರಲಿಂಗಯ್ಯ ಹಿ.ಚಿ. ೨೦೦೮
ದೇಸಿಸಂಸ್ಕೃತಿ ಸಂಕಥನ
ಪ್ರ: ಸಪ್ನ ಬುಕ್‌ಹೌಸ್, ಬೆಂಗಳೂರು

೯೫. ಬೋರಲಿಂಗಯ್ಯ ಹಿ.ಚಿ. ೨೦೧೦
ಕುವೆಂಪು ಮಹಿಳಾ ಮಂಥನ
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೯೬. ಭಕ್ತ ಕೆ.ಕೆ. ೧೯೮೬
ಭಕ್ತಪ್ರಿಯ ವೀರ ರಾವಣ ಚರಿತ
ಪ್ರ: ಭಕ್ತ ಕೆ.ಕೆ. ವೀರರಾಜಪೇಟೆ, ಕೊಡಗು

೯೭. ಭಕ್ತವತ್ಸಲ ರೆಡ್ಡಿ (ಪ್ರ.ಸಂ) ೨೦೦೪
ಜಾನಪದ ಅಧ್ಯಯನ ಸೈದ್ಧಾಂತಿಕ ದೃಷ್ಟಿ
ಪ್ರ: ಸಮಾಜ ಪುಸ್ತಕಾಲಯ, ಧಾರವಾಡ

೯೮. ಡಾ। ಭಟ್ಟ ಎನ್. ಜಿ. (ಸಂ)–೧೯೯೬
ವಾಲ್ಮೀಕಿ ರಾಮಾಯಣ ಮತ್ತು ಪರಂಪರೆ
ಪ್ರ: ಕೆನರಾ ಹೈಸ್ಕೂಲ್ ಅಸೋಸಿಯೇಷನ್, ಮಂಗಳೂರು

೯೯. ಮನು ಚಕ್ರವರ್ತಿ ೧೯೯೩
ಭಾರತೀಯ ಸ್ತ್ರೀವಾದ
ಪ್ರ: ಅಕ್ಷರ ಪ್ರಕಾಶನ, ಸಾಗರ

೧೦೦. ಮನೋಹರ್ ಪ್ರಸಾದ್ ( ಕನ್ನಡಾನುವಾದ) ೨೦೦೫
ಎಲ್ಲಿ ಮನ ಕಳುಕಿರದೊ ಎಲ್ಲಿ ತಲೆ ಬಾಗಿರದೊ
ಎಂ. ವೀರಪ್ಪ ಮೊಯಿಲಿಯವರ ಜೀವನ ಕಥನ
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೦೧. ಮಲ್ಯ. ಸು. ನಾ(ಸಂಗ್ರಹ) ೧೯೯೪
ಶ್ರೀ ರಾಮನ ಕಥೆಯಲ್ಲಿ ಆದರ್ಶಗಳು
ಪ್ರ: ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೧೦೨. ಡಾ। ಮಹಾಬಲೇಶ್ವರ ರಾವ್ ೧೯೯೩
ಗಾಂಧೀಜಿ ಮತ್ತು ಮಹಿಳೆಯರು (ಕನ್ನಡಾನುವಾದ)
ಪ್ರ: ಜನಪದ ಸೇವಾ ಟ್ರಸ್ಟ್, ಮೇಲುಕೋಟೆ

೧೦೩. ಡಾ। ಮಹಾಬಲೇಶ್ವರ ರಾವ್ ೧೯೯೦
ಇತಿಹಾಸದ ಕಣ್ಣಲ್ಲಿ ರಾಮಾಯಣ (ಸಂಗ್ರಹಾನುವಾದ)
ಪ್ರ: ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೦೪. ಮೇವುಂಡಿ ಮಲ್ಲಾರಿ ೧೯೮೮
ಪಂಪ ರಾಮಾಯಣ
ಪ್ರ: ಸಮಾಜ ಪುಸ್ತಕಾಲಯ, ಧಾರವಾಡ

೧೦೫. ಡಾ। ಮಂದಾಕಿನಿ ಭಿಮಸೇನ ರಾವ್ ತವಗ ೧೯೯೫
ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦೬. ಯಶೋದಾ ಜೆನ್ನಿ. ೧೯೯೭
ಭ್ರಮಾಲೋಕ
ಪ್ರ: ಸಂದೀಪ ಸಾಹಿತ್ಯ, ಆತ್ರಾಡಿ.

೧೦೭. ಪ್ರೊ। ರಘುನಾಥ ಜಿ. ರೈ. ೨೦೦೦
ರಾಮಾಯಣ ಪ್ರವೇಶಿಕೆ
ಪ್ರ: ಸಾಹಿತ್ಯ ಸಂಗ, ಮಣಿಪಾಲ

೧೦೮. ಡಾ। ರತ್ನಮ್ಮ ಕೆ.ಎಸ್. ೨೦೦೫
ಸ್ತ್ರೀಲೇಖ
ಪ್ರ: ಶ್ರೀಕ್ಷೇತ್ರ ಪ್ರಕಾಶನ, ಮೈಸೂರು

೧೦೯. ಪ್ರೊ। ರಮಾನಾಥ ಬಿ. ಮತ್ತು ಪ್ರೊ। ಜೀವನ್‌ದಾಸ್ ಎ. ೨೦೦೯
ಮಹಿಳಾ ಅಧ್ಯಯನ
ಪ್ರ: ಶ್ರುತಿ ಪ್ರಕಾಶನ, ಕಟಪಾಡಿ

೧೧೦. ರಾಗೌ, ರಾಜಶೇಖರ. ಪಿ. ಕೆ, ಬಸವಯ್ಯ. ಎಚ್ (ಸಂ) ೧೯೭೩
ಜನಪದ ರಾಮಾಯಣ
ಪ್ರ: ಕನ್ನಡ ಅಧ್ಯಯನ ಸಂಸ್ಥೆ ,ಮೈಸೂರು

೧೧೧. ರಾಘವೇಂದ್ರ ರಾವ್. ಹೆಚ್. ಎಸ್. ೧೯೯೫
ಹಾಡೆ ಹಾದಿಯ ತೋರಿತು
ಪ್ರ: ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು

೧೧೨. ರಾಜಶೇಖರ್. ಎನ್ ೧೯೮೮
ರಾಮಾಯಣ ದರ್ಶನಂ ಗದ್ಯಾನುವಾದ
ಪ್ರ: ಐ. ಬಿ. ಎಚ್. ಪ್ರಕಾಶನ, ಬೆಂಗಳೂರು

೧೧೩. ರಾಜಶೇಖರ್. ನಿ ೨೦೦೩
ಕುವೆಂಪು ಅವರ ಶ್ರೀ ರಾಮಾಯಣದರ್ಶನಂ ಗದ್ಯಾನುವಾದ
ಪ್ರ: ಐ. ಬಿ. ಎಚ್. ಪ್ರಕಾಶನ, ಬೆಂಗಳೂರು

೧೧೪. ರಾಜಶೇಖರ ಪಿ. ಕೆ. ೧೯೯೬ (ಮ. ಮುದ್ರಣ)
ಮಲೆಯ ಮಾದೇಶ್ವರ ಕಾವ್ಯ
ಪ್ರ: ಹೊನ್ನಾರು ಜನಪದ ಗಾಯಕರು,
ಮಾನಸ ಗಂಗೋತ್ರಿ, ಮೈಸೂರು

೧೧೫. ರಾಜೇಗೌಡ ಹ. ಕ. (ಸಂ) ೧೯೮೩
ಕುವೆಂಪು ಕಥಾ ಸಾಹಿತ್ಯ ಭಾಗ ೧
ಪ್ರ: ಕುವೆಂಪು ಅಧ್ಯಯನ ಕೇಂದ್ರ, ಬೆಂಗಳೂರು.

೧೧೬. ರಾಜೇಗೌಡ ಹ. ಕ. (ಸಂ) ೧೯೮೩
ಕುವೆಂಪು ಕಥಾ ಸಾಹಿತ್ಯ ಭಾಗ-೨
ಪ್ರ: ಕುವೆಂಪು ಅಧ್ಯಯನ ಕೇಂದ್ರ, ಬೆಂಗಳೂರು

೧೧೭. ರಾಜೇಗೌಡ ಹ. ಕ. (ಸಂ) ೧೯೮೪
ಕುವೆಂಪು ಕಥಾ ಸಾಹಿತ್ಯ ಭಾಗ-೩
ಪ್ರ: ಕುವೆಂಪು ಅಧ್ಯಯನ ಕೇಂದ್ರ, ಬೆಂಗಳೂರು

೧೧೮. ರಾಜೇಗೌಡ ಹ.ಕ (ಸಂ) ೧೯೮೯
ಕುವೆಂಪು ಸಾಹಿತ್ಯ ಲೋಕ – ೪
ಪ್ರ: ಸಹ್ಯಾದ್ರಿ ಪ್ರಕಾಶನ, ಮೈಸೂರು

೧೧೯. ರಾಮಚಂದ್ರನ್. ಸಿ.ಎನ್. ೧೯೯೫
ಆಶಯ ಆಕೃತಿ
ಪ್ರ: ಅಭಿನವ ಪ್ರಕಾಶನ ಬೆಂಗಳೂರು

೧೨೦. ರಾಮಚಂದ್ರನ್ ಸಿ.ಎನ್. (ಲೇ) ೧೯೮೯
ಸಾಹಿತ್ಯ ವಿಮರ್ಶೆ
ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨೧. ರಾಮಚಂದ್ರಪ್ಪ ಬರಗೂರು (ಪ್ರ.ಸಂ) ೧೯೯೩
ಕನ್ನಡ ಸಾಹಿತ್ಯ ಸಮೀಕ್ಷೆ - ೧೯೯೨
ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೨೨. ರಾಮಚಂದ್ರಪ್ಪ ಬರಗೂರು ( ಪ್ರ. ಸಂ.) ೧೯೯೩
ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ
ಪ್ರ: ಕನ್ನಡ ಸಾಹಿತ್ಯ ಆಕಾಡೆಮಿ, ಬೆಂಗಳೂರು.

೧೨೩. ರಾಮೇಗೌಡ ಮತ್ತು ಇತರರು ೧೯೭೩
ಜನಪದ ರಾಮಾಯಣ
ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೧೨೪. ರೋಹಿಣಿ. ಬಿ. ಎಂ. ೧೯೯೫
ಸ್ತ್ರೀ ಸಂವೇದನೆ
ಪ್ರ: ಹೇಮಾಂಶು ಪ್ರಕಾಶನ, ಮಂಗಳೂರು

೧೨೫. ಡಾ। ರಂಗಾಚಾರ್ ಎಂ. ೧೯೮೩
ಶ್ರೀ ರಾಮಾಯಣ ವಿಚಾರಲಹರಿ
ಪ್ರ: ದೀಪ ಪ್ರಕಾಶ ಸಾಹಿತ್ಯ, ಬೆಂಗಳೂರು

೧೨೬. ರಂ. ಶ್ರೀ ಮುಗಳಿ ೧೯೬೩
ಕನ್ನಡ ಸಾಹಿತ್ಯದ ಇತಿಹಾಸ
ಪ್ರ: ಸಾಹಿತ್ಯ ಅಕಾಡೆಮಿ, ಹೊಸ ದೆಹಲಿ

೨೭. ಪ್ರೊ॥ ಲಿಂಗಯ್ಯ ಡಿ. ಮತ್ತು ಡಾ. ಸಂಧ್ಯಾರೆಡ್ಡಿ ಕೆ.ಆರ್. ೨೦೦೬
ಜಾನಪದ: ಸ್ವರೂಪ ಮತ್ತು ಸಾಹಿತ್ಯ
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೨೮. ವರಮಹಾಲಕ್ಷ್ಮೀ ಹೊಳ್ಳ ೨೦೦೧
ರಾಮಕಥೆಯ ಸಂದುಗಳಿಂದ
ಪ್ರ: ಕುಂದ ಅಧ್ಯಯನ ಕೇಂದ್ರ, ಕುಂದಾಪುರ

೧೨೯. ವಾಸುದೇವ ವರ್ಣ. ಬಿ. ೧೯೯೪
ಶೂರ್ಪಣಖಿಯ ಹನ್ನೊಂದು ಮುಖಗಳು
ಪ್ರ: ವರ್ಣ ಪ್ರಕಾಶನ, ಮಂಗಳೂರು

೧೩೦. ವಿಜಯಶ್ರೀ ಸಬರದ ೧೯೮೯
ಸಾಹಿತ್ಯ ಮತ್ತು ಮಹಿಳೆ
ಪ್ರ: ನವಕರ್ನಾಟಕ ಪ್ರಕಾಶನ, ಬೆಂಗಳೂರು

೧೩೧. ಡಾ। ವಿಜಯಾ (ಗೌ. ಸಂ.) ೨೦೦೧
'ನಾನೊಂದ ಕನಸ ಕಂಡೆ' – ಮಹಿಳೆ ಮತ್ತು ರಂಗಭೂಮಿ
ವಿಶೇಷ ಸಂಚಿಕೆ.
ಪ್ರ: ವಿನೋದಿನಿ, ಈ ಮಾಸ ನಾಟಕ, ಬೆಂಗಳೂರು.

೧೩೨. ವಿಜಯಾ ದಬ್ಬೆ ೧೯೮೫
ಮಹಿಳೆ ಸಾಹಿತ್ಯ ಸಮಾಜ
ಪ್ರ: ರಚನಾ ಪ್ರಕಾಶನ , ಬೆಂಗಳೂರು

೧೩೩. ವಿಜಯಾ ದಬ್ಬೆ ೧೯೯೩
ನಾರಿ: ದಾರಿ – ದಿಗಂತ
ಪ್ರ: ರಚನಾ ಪ್ರಕಾಶನ, ಮೈಸೂರು

೧೩೪. ಡಾ। ವಿಠ್ಠಲ್‌ರಾವ್ ಟಿ. ಗಾಯಕ್ವಾಡ್ (ಕನ್ನಡಾನುವಾದ) ೨೦೦೬
ಭಾರತೀಯ ಸ್ತ್ರೀ ಜೀವನ
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೫. ಡಾ। ವಿಠ್ಠಲ್‌ರಾವ್ ಟಿ. ಗಾಯಕ್ವಾಡ್ ೨೦೧೦
ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಪೌರಾಣಿಕತೆ
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩೬. ವಿದ್ವಾನ್ ಬಾಲಕೃಷ್ಣ ಭಟ್ ಕೆ.ಎಂ. ೨೦೦೦
ಶ್ರೀ ರಾಮ ಕಥಾಮಂಜರಿ
ಗದ್ಯಕಾವ್ಯ ದ್ವಿತೀಯ ಸಂಪುಟ
ಪ್ರ: ವಿದ್ವಾನ್ ಎಸ್.ಬಿ. ಖಂಡಿಗೆ, ಪೆರ್ಲ

೧೩೭. ವಿದ್ವಾನ್ ರಂಗನಾಥ ಶರ್ಮಾ ೧೯೯೬
ವಾಲ್ಮೀಕಿ ರಾಮಾಯಣದ ನಾಲ್ಕು ಪಾತ್ರಗಳು
ಪ್ರ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ
ಮತ್ತು ಜನಾರ್ಧನ ಮಹಾಕಾಳಿ ದೇವಾಲಯ, ಅಂಬಲಪಾಡಿ

೧೩೮. ವಿದ್ವಾನ್ ರಾಮಚಂದ್ರ ಉಚ್ಚಿಲ್ ೨೦೦೩
ಪಂಪ ರಾಮಾಯಣ
ಪ್ರ: ಕಲಾಗಂಗೋತ್ರಿ ಯಕ್ಷಗಾನ ಅಧ್ಯಯನ ಕೇಂದ್ರ, ಉಚ್ಚಿಲ

೧೩೯. ವಿವಿಧ ಲೇಖಕಿಯರು - ೧೯೭೬
ಪ್ರಗತಿಪ ಥದಲ್ಲಿ ಕರ್ನಾಟಕದ ಮಹಿಳೆ
ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೪೦.. ಡಾ। ವಿವೇಕ ರೈ. ಬಿ. ಎ. ೧೯೯೫
ಗಿಳಿಸೂವೆ
ಪ್ರ: ಅಕ್ಕೆಸಿರಿ ಸಾಂಸ್ಕೃತಿಕ ಕೇಂದ್ರ, ಮಂಗಳೂರು

೧೪೧. ಡಾ। ವಿವೇಕ ರೈ. ಬಿ. ಎ ೧೯೯೫
ಅನ್ವಯಿಕ ಜಾನಪದ
ಪ್ರ: ಮಂಗಳ ಗಂಗೋತ್ರಿ

೧೪೨. ಡಾ। ವೀಣಾ ಶಾಂತೇಶ್ವರ (ಸಂ) ೧೯೯೩
ಮಹಿಳಾ ಅಧ್ಯಯನ
ಪ್ರೊ। ನಾಗೇಶ ಎಚ್.ವಿ. ಅಭಿನಂದನಾ ಗ್ರಂಥ
ಪ್ರ: ಪ್ರೊ। ನಾಗೇಶ ಸನ್ಮಾನ ಸಮಿತಿ, ಧಾರವಾಡ

೧೪೩. ಡಾ। ವೀರಣ್ಣ . ಸಿ. ೧೯೯೯
ಕನ್ನಡ ಕಾವ್ಯ ಕಂಡ ಹೆಣ್ಣು
ಪ್ರ: ಶಕ್ತಿ ಪ್ರಕಾಶನ, ಬೆಂಗಳೂರು

೧೪೪. ವೀರಪ್ಪ ಮೊಯಿಲಿ. ಎಂ. ೨೦೦೧
ಶ್ರೀರಾಮಾಯಣ ಮಹಾನ್ವೇಷಣಂ ಸಂಪುಟ–೧
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೪೫. ವೀರಪ್ಪ ಮೊಯಿಲಿ. ಎಂ. ೨೦೦೨
ಶ್ರೀರಾಮಾಯಣ ಮಹಾನ್ವೇಷಣಂ ಸಂಪುಟ–೨
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೪೬. ವೀರಪ್ಪ ಮೊಯಿಲಿ. ಎಂ. ೨೦೦೩
ಶ್ರೀರಾಮಾಯಣ ಮಹಾನ್ವೇಷಣಂ ಸಂಪುಟ-೩
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೪೭. ವೀರಪ್ಪ ಮೊಯಿಲಿ. ಎಂ. ೨೦೦೪
ಶ್ರೀರಾಮಾಯಣ ಮಹಾನ್ವೇಷಣಂ ಸಂಪುಟ-೪
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೪೮. ವೀರಪ್ಪ ಮೊಯಿಲಿ. ಎಂ. ೨೦೦೫
ಶ್ರೀರಾಮಾಯಣ ಮಹಾನ್ವೇಷಣಂ ಸಂಪುಟ-೫
ಪ್ರ: ಮಹೇಶ್ವರಿ ಪ್ರಕಾಶನ, ಬೆಂಗಳೂರು

೧೪೯. ಡಾ। ವೆಂಕಟರಾಯಪ್ಪ. ಕೆ.ಎನ್. ೧೯೭೧
ಸ್ತ್ರೀ ಮತ್ತು ಸಮಾಜ
ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೧೫೦. ಪ್ರೊ. ವೆಂಕಟೇಶಮೂರ್ತಿ ಎಚ್.ಎಸ್. ೨೦೦೬
ಮಂಥರಾ
ಪ್ರ: ಅತ್ರಿಬುಕ್ ಸೆಂಟರ್, ಮಂಗಳೂರು

೧೫೧. ವೆಂಕಟ ವಿಶ್ವನಾಥ. ಎಸ್. ೧೯೭೬
ಕುವೆಂಪುರವರ ಶ್ರೀ ರಾಮಾಯಣದರ್ಶನಂ-ಬರಹಗಾರರ ಪ್ರತಿಕ್ರಿಯೆ
ಪ್ರ: ವಿಜಯ ಪ್ರಕಾಶನ, ಬೆಂಗಳೂರು

೧೫೨. ವೆಂಕಟಾಚಲ ಶಾಸ್ತ್ರಿ ಟಿ. ವಿ. ೨೦೦೧
ಮಹಾಕಾವ್ಯ ಲಕ್ಷಣ
ಪ್ರ: ಡಿ. ವಿ. ಕೆ. ಮೂರ್ತಿ, ಮೈಸೂರು

೧೫೩. ವೆಂಕಣ್ಣಯ್ಯ. ಟಿ. ಎಸ್ ೧೯೮೩
ಪ್ರಾಚೀನ ಸಾಹಿತ್ಯ (ಕನ್ನಡ ಅನುವಾದ)
ಪ್ರ: ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಕರ್ನಾಟಕ ಸರ್ಕಾರ

೧೫೪. ಶಿವನಂಜಯ್ಯ. ಮ. ೧೯೭೫
ಕುವೆಂಪು ವ್ಯಕ್ತಿತ್ವ ಮತ್ತು ಸಾಹಿತ್ಯ
ಪ್ರ: ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಮೈಸೂರು

೧೫೫. ಶಿವರುದ್ರಪ್ಪ. ಜಿ. ಎಸ್. ೨೦೦೫
ಕುವೆಂಪು ಪುನರಾವಲೋಕನ
ಪ್ರ: ಅಂಕಿತ ಪುಸ್ತ ಕ ಪ್ರಕಾಶನ, ಬೆಂಗಳೂರು

೧೫೬. ಡಾ। ಶ್ರೀಕಂಠಶಾಸ್ತ್ರೀ ಎಸ್. ೧೯೭೫
ಸಂಶೋಧನ ಲೇಖನಗಳು
ಪ್ರ: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

೧೫೭. ಶ್ರೀಕೃಷ್ಣ ಆಲನಹಳ್ಳಿ ೧೯೬೯
ಅವಲೋಕನ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ
ಪ್ರ: ಗೀತಾ ಎಸ್. ಹೌಸ್, ಬೆಂಗಳೂರು

೧೫೮. ಶ್ರೀಪಾದ ರಘುನಾಥ ಭಿಡೆ
ವಾಲ್ಮೀಕಿ ರಾಮಾಯಣ ಶಾಪ ಮತ್ತು ವರ
ಪ್ರ: ಗೀತಾ ಬುಕ್ ಹೌಸ್, ಮೈಸೂರು

೧೫೯. ಡಾ। ಶ್ರೀಮತಿ ಹೆಚ್.ಎಸ್. (ಸಂ) ೧೯೯೯
ಕನ್ನಡಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ
ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬೦ ಡಾ। ಶ್ರೀಮತಿ ಹೆಚ್. ಎಸ್, ಡಾ। ಶಿವಾನಂದ ಎಸ್.ವಿರಕ್ತಮಠ,
ಡಾ। ಕೃಷ್ಣ. ಜೆ (ಸಂ) ೨೦೦೭
ಹೆಣ್ಣು ಮತ್ತು ಭಾಷೆ
ಪ್ರ: ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬೧. ಡಾ। ಶ್ರೀಮತಿ ಎಚ್. ಎಸ್. 2009
ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ
ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬೨. ಡಾ। ಶ್ರೀಮತಿ ಎಚ್.ಎಸ್. ೨೦೦೧
ಆಧುನಿಕ ಭಾರತದಲ್ಲಿ ಮಹಿಳೆ (ಕನ್ನಡಕ್ಕೆ)
ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬೩. ಶ್ರೀನಿವಾಸ ೨೦೦೦
ವಿಮರ್ಶೆ ಸಮಗ್ರ ಸಂಪುಟ
ಪ್ರ: ಜೀವನ ಕಾರ್ಯಾಲಯ ಟ್ರಸ್ಟ್ ,ಬೆಂಗಳೂರು

೧೬೪. ಶ್ರೀನಿವಾಸ ೧೯೭೨
ಶ್ರೀರಾಮ ಪಟ್ಟಾಭಿಷೇಕ
ಪ್ರ: ಜೀವನ ಕಾರ್ಯಾಲಯ, ಬೆಂಗಳೂರು

೧೬೫. ಡಾ। ಶ್ರೀವಳ್ಳಿ, ಟಿ. ಎಸ್ ೨೦೦೦
ಸರಸ್ವತಿ ಬಾಯಿ ರಾಜವಾಡೆ
ಪ್ರ: ಶಿವರಾಮ ಕಾರಂತ ಅಧ್ಯಯನ ಕೇಂದ್ರ,
ವಿವೇಕಾನಂದ ಕಾಲೇಜು, ಪುತ್ತೂರು.

೧೬೬.. ಡಾ। ಶಂ.ಗು ಬಿರಾದಾರ. ೧೯೬೭
ಶ್ರೀ ರಾಮಾಯಣದರ್ಶನಂದಲ್ಲಿ ಕುವೆಂಪು
ಸೃಜಿಸಿದ ಮೂರು ಪಾತ್ರಗಳು

೧೬೭. ಶಾಂತಾದೇವಿ ಮಾಳವಾಡ ೧೯೯೦
ಸಾರ್ವಜನಿಕ ರಂಗದಲ್ಲಿ ಮಹಿಳೆ
ಪ್ರ: ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

೧೬೮. ಶಾಂತಾದೇವಿ ಮಾಳವಾಡ ೧೯೯೦
ಸಾರ್ವಜನಿಕ ರಂಗದಲ್ಲಿ ಮಹಿಳೆ
ಪ್ರ: ಸಹ್ಯಾದ್ರಿ ಪ್ರಕಾಶನ, ಮೈಸೂರು

೧೬೯. ಡಾ। ಶಾಂತಾರಾಂ ಪ್ರಭು ಪಿ. ೨೦೦೮
ವಿಶ್ವರಾಮಕಥಾವಾಹಿನೀ
ಪ್ರ: ಪುಸ್ತಕ ನಿಧಿ, ಕುಂದಾಪುರ

೧೭೦. ಶೇಷಗಿರಿರಾವ್ ಎಲ್. ಎಸ್. (ಸಂ) ೧೯೮೪
ಕನ್ನಡ ಭಾರತಿ
ಪ್ರ: ಕರ್ನಾಟಕ ಸಾಹಿತ್ಯ ಆಕಾಡೆಮಿ.

೧೨೧. ಶೇಷಗಿರಿರಾವ್ ಎಲ್.ಎಸ್. ೧೯೮೧
ಸಾಹಿತ್ಯ ವಿಶ್ಲೇಷಣೆ
ಪ್ರ: ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು

೧೨೨. ಡಾ। ಷರೀಫಾ ಕೆ., ಬಸವರಾಜ ಸೂಳಿಭಾವಿ ೨೦೧೦
ಮಹಿಳಾ ಮಾರ್ಗ
ಗೀತಾ ನಾಗಭೂಷಣ ಸಾಹಿತ್ಯ ಬದುಕು
ಪ್ರ: ಲಡಾಯಿ ಪ್ರಕಾಶನ, ಗದಗ

೧೨೩. ಸದಾನಂದ ಕನವಳ್ಳಿ ಮತ್ತು ವೀರಣ್ಣ ರಾಜೂರ (ಸಂ) ೨೦೦೧
ಮಹಾಮಾರ್ಗ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಗದಗ

೧೨೪. ಡಾ। ಸರೋಜ. ಕೆ ೨೦೦೪
ಮಹಿಳೆ ಮತ್ತು ಸಮೂಹ ಮಾಧ್ಯಮಗಳು
ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಹಂಪಿ

೧೨೫. ಸಾರಾ. ಅಬೂಬಕ್ಕರ್. ೨೦೦೨
ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ
ಪ್ರ: ಪ್ರೊ ಮಲ್ಲೇಪುರಂ ಜಿ. ವೆಂಕಟೇಶ ಪ್ರಸಾರಾಂಗ, ಹಂಪಿ

೧೭೬. ಸಾವಿತ್ರಮ್ಮ ಹೆಚ್. ವಿ. ೧೯೮೦
ಸೀತೆ ರಾಮ ರಾವಣ
ಪ್ರ: ಕಾವ್ಯಾಲಯ, ಮೈಸೂರು

೧೭೭. ಡಾ। ಸ್ವಾಮಿರಾವ್ ಕುಲಕರ್ಣಿ (ಗೌ. ಸಂ) ೨೦೦೪
ಸಂಪ್ರೀತಿ ಶ್ರೀಮತಿ ಇಂದಿರಾ ಮನ್ವಿಕರ ಅಭಿನಂದನಾ ಗ್ರಂಥ
ಪ್ರಭು ಗ್ರಾಫಿಕ್ಸ್, ಗದಗ.

೧೭೮. ಡಾ। ಸಂಗಮೇಶ ಸವದತ್ತಿಮಠ ೨೦೦೬
ಕನ್ನಡ ಸಾಹಿತ್ಯ ಸಂಶೋಧನೆ ಮಾರ್ಗ ಮತ್ತು ಇತಿಹಾಸ
ಪ್ರ: ರೂಪರಶ್ಮಿ ಪ್ರಕಾಶ, ಧಾರವಾಡ

೧೭೯. ಸಂತೋಷ ಕುಮಾರ ಗುಲ್ವಾಡಿ ೨೦೦೩
ಶ್ರೀ ರಾಮಾಯಣ ಸಾಕ್ಷಾತ್ಕಾರ
ಪ್ರ: ಶ್ರೀ ಪವನಜ ಪ್ರಕಾಶನ, ಬೆಂಗಳೂರು

೧೮೦. ಸಿ. ಪಿ. ಕೆ ೧೯೮೩
ಶ್ರೀ ರಾಮಾಯಣದರ್ಶನಂ
ಪ್ರ: ಕರ್ನಾಟಕ ಸರ್ಕಾರ

೧೮೧. ಸಿ. ಪಿ . ಕೆ ೧೯೭೪
ಕುವೆಂಪು ಸಾಹಿತ್ಯ ಕೆಲವು ಮುಖಗಳು
ಪ್ರ: ಪ್ರಬುದ್ಧ ಪ್ರಕಾಶನ, ಮೈಸೂರು

೧೮೨. ಡಾ। ಸೀತಾಲಕ್ಷ್ಮಿ ಕರ್ಕಿಕೋಡಿ ೨೦೦೬
ಹೆಣ್ಣು ಭಯ ತೊರೆವ ಕ್ಷಣದಲ್ಲಿ (ಲೇಖನ)
8–3–2006, ವಿಜಯ ಕರ್ನಾಟಕ ದಿನಪತ್ರಿಕೆ

೧೮೩. ಸುಬ್ಬಣ್ಣ ಕೆ. ವಿ. ನೆನಪಿನ 'ಮೊದಲ ಓದು' ಪುಸ್ತಕ ಮಾಲೆ ೨೦೦೯
ಎ. ಕೆ. ರಾಮಾನುಜನ್ ಅವರ ಆಯ್ದ ಬರಹಗಳು
ಪ್ರ: ಅಕ್ಷರ ಪ್ರಕಾಶನ, ಸಾಗರ

೧೮೪. ಸುಮಿತ್ರಾಬಾಯಿ, ಎನ್. ಗಾಯತ್ರೀ ೧೯೯೫
ಸ್ತ್ರೀವಾದಿ ಪ್ರವೇಶಿಕೆ
ಪ್ರ: ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು

೧೮೫. ಡಾ। ಸುಮಿತ್ರಾ ಬಾಯಿ. ಬಿ. ಎನ್ ೧೯೯೭
ಅಂಗಳದೊಳಗಿನ ಕಡಲು
ಪ್ರ: ಕರ್ನಾಟಕ ಸಂಘ, ಪುತ್ತೂರು

೧೮೬. ಡಾ। ಸುಮಿತ್ರಾ ಬಾಯಿ ಬಿ. ಎನ್. ೧೯೯೫
ವಿಚಯ
ಪ್ರ: ಇಳಾ ಪ್ರಕಾಶನ, ಬೆಂಗಳೂರು

೧೮೭. ಡಾ। ಹಾಲತಿ ಸೋಮಶೇಖರ್ ೨೦೦೭
ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ
ಪ್ರ: ವಿಸ್ಮಯ ಪ್ರಕಾಶನ, ಮೈಸೂರು

೧೮೮. ಹಿರೇಮಠ ಎಸ್.ಎಸ್. ೨೦೦೫
ಜನಪದ ಸಮಾಜ ಸಂಸ್ಕೃತಿ
ಪ್ರ: ಸೂರ್ಯ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ

## ಇಂಗ್ಲಿಷ್ ಕೃತಿಗಳು

1. Amy S Wharton
The Sociology of Gender
Blackwell Publishing Oxford, UK

2. CAROLE R. McCANN AND SEUNG–KYUNG KIM (ed)
2003
Feminist theory reader: local and global perspectives
Publication: Routledge, New Yark

3. Dharma Vir and Kamalesh Mahajan 1996
Comtemporary Indian Women
New Delhi

4. Kamala Bhasin 1993
What is Patriarchy?
New Delhi

5. Maitrayee Chaudhuri 2005
Feminism in India
Sage Publication India Pvt. Ltd. New Deldhi

6. Padhama Anagol 2005
The Emergence of Feminism in India, 1850 - 1920
Ashgate Publishing Limited, England

7. Peer. Mohammed and Heggade O.D. 1992
Discrimination Against Women: Can We Overcome it?
Mangalore University

8. Dr. Richard Pais (ed) 2009
Gender Dynamics
Mangala Publications, Mangalore

9. Snehalatha Panda 1992
Women and Social Change in India
Ashish Publishing House, Panjabi Bagh, New Delhi

10. Srivastava S.
Gender Equality Through Women's Empowerment
Classical Publishing, New Delhi

11. Urmila Phadnis & Indira Malani - 1978
Women of the World
Illusion and Reality
Vikas Publishing House Pvt. Ltd, New Delhi

12. Usha Rao N.J. 1985
Women in a Developing Society
Ashish Publication, New Delhi

13. Vina Mazumdar 1978
Role of Rural Women In Development
Report of an International Seminar
Allied Publishers Private Limited
New Delhi

